# ಗೀತೆಯ ಸಂದೇಶ

(ಕರ್ಮಯೋಗ–ಜ್ಞಾನಯೋಗಗಳ ವಿವರಣೆ)



## ಅಧ್ಯಾಯಗಳು ೧ ರಿಂದ ೬

(ಶ್ಲೋಕಗಳ ಅರ್ಥ, ವಿಶೇಷಾರ್ಥ, ತಾತ್ಪರ್ಯಗಳ ಸಹಿತ)



ಲೇಖಕರು

**ಶ್ರೀಮತಿ ವೇದವಲ್ಲಿ, ಬಿ. ಎ**

No 141/B, III Block East

13th Main Road,

Jayanagar Bangalore-560011.



ಕರ್ನಾಟಕ ವೈಶ್ಯ ಪತ್ರಿಕೆಯಲ್ಲಿ ಪ್ರಕಟಿಸಲ್ಪಟ್ಟಿದೆ

Compiled and published in the form of a Book

in the year 1976

ಬೆಲೆ ರೂ. **2–00**

# ಪೀಠಿಕೆ

ನನ್ನ ಪೂಜ್ಯ ತಂದೆಯವರಾದ ದಿವಂಗತ ಶ್ರೀಮಾನ್ ಎಂ ಎ ನಾರಾಯಣ ಐಯ್ಯಂಗಾರ್ (Rtd. Deputy Director of Public Instruction) ರವರು **"ಭಗವದ್ಗೀತೆಯಲ್ಲಿರುವ ಭಕ್ತಿಯೋಗ"** ಎಂಬ ಹೆಸರಿನಲ್ಲಿ ಗೀತೆಯ 7 ನೆಯ ಅಧ್ಯಾಯದಿಂದ 12 ನೆಯ ಅಧ್ಯಾಯದ ಶ್ಲೋಕಗಳ ಅರ್ಥ, ವಿಶೇಷಾರ್ಥಗಳನ್ನು ಬರೆದು ಪ್ರಕಟಿಸಿದ್ದಾರೆ ಅವರು ಗೀತಯ ಇತರ ಅಧ್ಯಾಯಗಳಿಗೂ ಇದೇ ರೀತಿ ಅರ್ಥ ಬರೆದು ಪ್ರಕಟಿಸಬೇಕೆಂಬ ಆಸೆ ಪಡೆದಿದ್ದರು. ಅವರ ಆಸೆಯನ್ನು ಪೂರ್ತಿಗೊಳಿಸಬೇಕೆಂಬ ಸಮುದ್ದೇಶದಿಂದ ಗೀತೆಯ ಮೊದಲ ಆರು ಅಧ್ಯಾಯಗಳಲ್ಲಿ ಪ್ರತಿಪಾದಿಸಿರುವ ಕರ್ಮಯೋಗ, ಜ್ಞಾನಯೋಗ ಗಳನ್ನು ಭಗವದ್ರಾಮಾನುಜರ ಗೀತಾಭಾಷ್ಯವನ್ನನುಸರಿಸಿ ಶ್ಲೋಕಗಳ ಅರ್ಥ ವಿಶೇಷಾರ್ಥಗಳನ್ನು ವಿವರಿಸಿ ಬರೆದಿರುತ್ತೇನೆ ಇದು ಭಗವದ್ರಾಮಾನುಜರಗೀತಾಭಾಷ್ಯದ ಮೊದಲ ಆರು ಅಧ್ಯಾಯಗಳ ಸಾರವಾಗಿದೆ ಮುಂದೆ ಗೀತೆಯ ಕೊನೆಯ ಆರು ಅಧ್ಯಾಯಗಳ ಶ್ಲೋಕಗಳ ಅರ್ಥ ವಿಶೇಷಾರ್ಥಗಳನ್ನು ಬರೆದು ಪ್ರಕಟಿಸ ಬೇಕೆಂಬ ಸಮುದ್ದೇಶಪಡೆದಿದ್ದೇನೆ ಅದು ದೈವಾನುಗ್ರಹದಿಂದ ಸಫಲವಾಗಲೆಂದು ಹಾರೈಸುತ್ತೇನೆ

ನನಗೆ ಉತ್ತೇಜನ ಕೊಟ್ಟು ಇದಕ್ಕೆ ಮುನ್ನುಡಿ ಬರೆದುಕೊಟ್ಟಿರುವ ಶ್ರೀ ಸ್ವಾಮಿ ಆದಿದೇವಾನಂದರವರಿಗೆ ನನ್ನ ಪ್ರಣಾಮಪೂರ್ವಕ ಅನಂತ ವಂದನೆಗಳನ್ನು ಅರ್ಪಿಸುತ್ತೇನೆ ಇದನ್ನು ಕರ್ಣಾಟಕ ವೈಶ್ಯ ಪತ್ರಿಕೆಯಲ್ಲಿ ಪ್ರಕಟಿಸಿದ ಶ್ರೀಮಾನ್ ಪಿ ಗೋಪಾಲಕೃಷ್ಣ ಶೆಟ್ಟಿಯವರಿಗೆ ನನ್ನ ಅನಂತ ವಂದನೆಗಳು ಇದನ್ನು ಪ್ರಾರಂಭಿಸು ವುದಕ್ಕೆ ನನಗೆ ಪ್ರೋತ್ಸಾಹ ನೀಡಿ ಇದನ್ನು ಬರೆಯಲು ನನಗೆ ಬಹಳವಾಗಿ ಸಹಾಯಮಾಡಿದ ನನ್ನ ಸಹೋದರಿ ಶ್ರೀಮತಿ ಎಂ ಎ ಸಿಂಗಮ್ಮನವರಿಗೆ ನಾನು ಚಿರಋಣಿಯಾಗಿದ್ದೇನೆ ಇದನ್ನು ಪ್ರಕಟಿಸಲು ನನಗೆ ಬಹಳ ಸಹಾಯ ಮಾಡಿ ನನಗೆ ಪ್ರೋತ್ಸಾಹ ನೀಡಿದ ನನ್ನ ಪತಿ ಶ್ರೀ ಎಂ ಡಿ ರಾಮಸ್ವಾಮಿ ಐಯ್ಯಂಗಾರ್ ಅವರಿಗೆ ನನ್ನ ಅನಂತ ವಂದನೆಗಳು ಇದರ ಪ್ರತಿಗಳನ್ನೆಲ್ಲಾ ಬೈಂಡ್ ಮಾಡಿ ಪುಸ್ತಕ ರೂಪಕ್ಕೆ ತಂದ ಶ್ರೀ ಶಂಕರ ಪ್ರೆಸ್ ಪ್ರಿಂಟಿಂಗ್ ವರ್ಕ್ಸ್ ಮಾಲೀಕರಿಗೆ ನನ್ನ ಧನ್ಯವಾದಗಳು ಇದರಲ್ಲಿ ಕೆಲವು ಮುದ್ರಣ ತಪ್ಪುಗಳಿವೆ ಅದನ್ನು ಓದುಗರು ತಿದ್ದಿಕೊಳ್ಳಬೇಕಾಗಿ ಪ್ರಾರ್ಥನೆ

**ವೇದವಲ್ಲಿ**

# ಮುನ್ನುಡಿ

## ಸ್ವಾಮಿ ಆದಿದೇವಾನಂದ—ರಾಮಕೃಷ್ಣಾಶ್ರಮ, ಬೆಂಗಳೂರು.

ಶ್ರೀಮತಿ ವೇದವಲ್ಲಿಯವರು ಶ್ರೀ ರಾಮಾನುಜಾಚಾರ್ಯರ ಗೀತಾಭಾಷ್ಯದ ಅನುಸಾರವಾಗಿ ಗೀತೆಯ ಮೊದಲನೆಯ ಆರು ಅಧ್ಯಾಯಗಳ ಶ್ಲೋಕಗಳ ಅನುವಾದವನ್ನು ಸರಳ ಕನ್ನಡದಲ್ಲಿ ವಿವರಣೆಗಳೊಡನೆ ಕೊಟ್ಟಿರುವುದು ಅತಿ ಶ್ಲಾಘ್ಯವಾಗಿ ರೂಪಗೊಂಡಿದೆ. ಪ್ರಸ್ತುತ ವಿಶಿಷ್ಟಾದ್ವೈತ ಪರವಾದ ಗೀತೆಯ ಶ್ಲೋಕ ಮಾತ್ರಾನುವಾದ ಲಭ್ಯವಿಲ್ಲ. ಆ ಕಾರಣದಿಂದ ಪ್ರಸ್ತುತ ಲೇಖನ ಅಭಿನಂದನೀಯವೂ, ಅವಶ್ಯಕವೂ ಆಗಿದೆ. ಭಾಷ್ಯದ ಭಾವಗಳನ್ನು ಸ್ಪಷ್ಟಪಟ್ಟಿಗೆ ವಿವರಣೆಗಳಲ್ಲಿ ತಂದು ಅನುವಾದದ ಯುಕ್ತತೆಯನ್ನು ತೋರಿಸಲಾಗಿದೆ. ಶೈಲಿ ಮತ್ತು ಭಕ್ತಿಯ ಉನ್ಮೇಷ ಗ್ರಂಥವನ್ನು ಮೇಲಿನ ಮಟ್ಟಕ್ಕೆ ಏರಿಸಿದೆ. ಇದೇ ರೀತಿ ಮುಂದಿನ ಎರಡು ಷಟ್ಕಗಳಿಗೂ ಅನುವಾದ ಬರೆಯಲೆಂದು ಆಶಿಸುತ್ತೇನೆ.

**ಸ್ವಾಮಿ ಆದಿದೇವಾನಂದ**
ಶ್ರೀರಾಮಕೃಷ್ಣಾಶ್ರಮ,
ಬೆಂಗಳೂರು

---

# ಬಿನ್ನಹ

ದಿವಂಗತ ಶ್ರೀ ಎಂ. ಎ. ನಾರಾಯಣ ಐಯ್ಯಂಗಾರ್‌ರವರ ವ್ಯಕ್ತಿತ್ವದ ಪ್ರಭಾವ ಅವರ ಮಕ್ಕಳಾದ ನಮ್ಮಲ್ಲಿ ಇನ್ನೂ ಅಚ್ಚಳಿಯದೆ ಉಳಿದಿದೆ. ಆದುದರಿಂದಲೇ ಅವರು ಪ್ರಾರಂಭಿಸಿ ಪೂರ್ತಿ ಮಾಡಲು ಸಾಧ್ಯವಾಗದೆ ಉಳಿಸಿದ ಶ್ರೀ ಭಗವದ್ಗೀತಾ ಸಂದೇಶವನ್ನು ಅವರ ಪುತ್ರಿ ಶ್ರೀಮತಿ ವೇದವಲ್ಲಿಯವರು ಮುಂದುವರಿಸುತ್ತಿದ್ದಾರೆ. ಈಗಾಗಲೇ 'ಭಗವದ್ಗೀತೆಯಲ್ಲಿರುವ ಭಕ್ತಿಯೋಗ' ಎಂಬ ಶಿರೋನಾಮೆಯಲ್ಲಿ ನನ್ನ ಪೂಜ್ಯ ತಂದೆಯವರು ಭಗವದ್ಗೀತೆಯ 7 ನೇ ಅಧ್ಯಾಯದಿಂದ 12 ನೇ ಅಧ್ಯಾಯದ ಶ್ಲೋಕಗಳ ಅರ್ಥ, ವಿಶೇಷಾರ್ಥಗಳನ್ನು ಪ್ರಕಟಿಸಿದ್ದಾರೆ. ಈಗ ಈ ಗ್ರಂಥದಲ್ಲಿ ಶ್ರೀಮತಿ ವೇದವಲ್ಲಿಯವರು ಗೀತೆಯಲ್ಲಿ ಪ್ರತಿಪಾದಿಸಿರುವ ಕರ್ಮಯೋಗ, ಜ್ಞಾನಯೋಗಗಳನ್ನು ಗೀತೆಯ ಮೊದಲ ಆರು ಅಧ್ಯಾಯಗಳ ಶ್ಲೋಕಗಳ ಅರ್ಥ, ವಿಶೇಷಾರ್ಥಗಳ ಮೂಲಕ ವಿವರಿಸಿ ತಿಳಿಸಿದ್ದಾರೆ. ನಮ್ಮ ಪುರಾತನ ಆಧ್ಯಾತ್ಮ ಸಂಸ್ಕೃತಿಯ ಪ್ರತಿಬಿಂಬವಾದ 'ಪ್ರಸ್ಥಾನತ್ರಯಿ' ಎಂಬ ಧರ್ಮಗ್ರಂಥಗಳಲ್ಲಿ ಮುಖ್ಯವಾದ ಭಗವದ್ಗೀತೆಯ ಬಗ್ಗೆ ಸಹಸ್ರಾರು ಗ್ರಂಥಗಳು ನಾನಾಭಾಷೆಗಳಲ್ಲಿ ಪ್ರಕಟಿಸಲ್ಪಟ್ಟಿವೆ. ಅವುಗಳ ಸಮೂಹದಲ್ಲಿ ಈಗ ಪ್ರಕಟವಾಗುತ್ತಿರುವ ಗ್ರಂಥವೂ ಉಪಯೋಗಕರವಾಗಿ ಗೀತಾ ಪ್ರಚಾರ ಕಾರ್ಯದಲ್ಲಿ ಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲ.

ಶ್ರೀಮತಿ ವೇದವಲ್ಲಿಯವರ ಈ ಗ್ರಂಥವನ್ನು ಅತ್ಯಂತ ಸಂತೋಷದಿಂದ ಪ್ರಕಟಿಸಿ ಬಿಡುಗಡೆ ಮಾಡಲು ನನಗೆ ಅವಕಾಶ ದೊರೆತದ್ದಕ್ಕಾಗಿ ನಾನು ಕೃತಜ್ಞನಾಗಿದ್ದೇನೆ.

**ಎಂ. ಎ. ಶ್ರೀನಿವಾಸ ಐಯ್ಯಂಗಾರ್**
ಪ್ರಿನ್ಸಿಪಾಲ್, ನಲಂದ ಪಬ್ಲಿಕ್ ಸ್ಕೂಲ್, ಹೈದರಾಬಾದ್
ಮತ್ತು
ಕಾರ್ಯದರ್ಶಿ, ರಾಷ್ಟ್ರೀಯ ಗ್ರಾಮವಿದ್ಯಾಸಂಘ,
ಆಚಾರ್ಯ ಜ್ಯೂನಿಯರ್ ಕಾಲೇಜ್, ಗೌರೀಬಿದನೂರು

# ವಿ ಷ ಯ ಸೂ ಚಿ ಕೆ


ಪುಟಗಳು

1 ಉಪೋದ್ಘಾತ — 1–3

2 ಅಧ್ಯಾಯ ಒಂದು— 3–6

(1) ಕುರುಕ್ಷೇತ್ರ ಯುದ್ಧ ಸನ್ನಾಹದ ವರ್ಣನೆ— (ಶ್ಲೋಕಗಳು 1–26)
(2) ಅರ್ಜುನನ ವಿಷ್ಣತೆ ಮತ್ತು ಶೋಕ— (ಶ್ಲೋಕಗಳು 27–47)

3 ಅಧ್ಯಾಯ ಎರಡು— 6–36

(1) ಗೀತೆಯ ಉಪದೇಶಗಳ ಮಹಿಮೆ
(2) ಶ್ರೀಕೃಷ್ಣನು ಅರ್ಜುನನಿಗೆ ಧೈರ್ಯ ಹೇಳುವಿಕೆ (ಶ್ಲೋಕಗಳು 1–3)
(3) ಅರ್ಜುನ ಶ್ರೀಕೃಷ್ಣನಿಗೆ ಶರಣಾಗುವಿಕೆ (ಶ್ಲೋಕಗಳು 4–9)
(4) ಗೀತೆಯ ಉಪದೇಶದ ಪ್ರಾರಂಭ—
ಆತ್ಮನ ನಿತ್ಯತೆ–ದೇಹದ ಅನಿತ್ಯತೆ— (ಶ್ಲೋಕಗಳು 10–30)
(5) ಕರ್ಮಯೋಗದ ನಿರೂಪಣೆ— (ಶ್ಲೋಕಗಳು 31–54)
(6) ಸ್ಥಿತಪ್ರಜ್ಞತೆಯ ನಿರೂಪಣೆ— (ಶ್ಲೋಕಗಳು 54–72)

4 ಅಧ್ಯಾಯ ಮೂರು— 37–58

(1) ಫಲಾಸಕ್ತಿರಹಿತವಾಗಿ ಕರ್ಮಮಾಡುವುದರ ಶ್ರೇಷ್ಠತೆ— (ಶ್ಲೋಕಗಳು 1–19)
(2) ಮುಕ್ತ ಪುರುಷನೂ ಲೋಕಕಲ್ಯಾಣಕ್ಕಾಗಿ
ಕರ್ಮ ಮಾಡಲೇಬೇಕು— (ಶ್ಲೋಕಗಳು 20–26)
(3) ಅಕರ್ತೃತ್ವಾನುಸಂಧಾನದೊಂದಿಗೆ ಕರ್ಮಮಾಡುವಿಕೆ— (ಶ್ಲೋಕಗಳು 27–32)
(4) ಜ್ಞಾನಯೋಗದ ಕಷ್ಟಸಾದ್ಯತೆ— (ಶ್ಲೋಕಗಳು 33–43)

5 ಅಧ್ಯಾಯ ನಾಲ್ಕು— 58–80

(1) ಕರ್ಮಯೋಗದ ಪರಮ ಪ್ರಾಚೀನತೆ— (ಶ್ಲೋಕಗಳು 1–3)
(2) ಭಗವದವತಾರ ವಿಷಯ— (ಶ್ಲೋಕಗಳು 4–11)
(3) ಕರ್ಮಯೋಗದ ಜ್ಞಾನಾಕಾರತೆ— (ಶ್ಲೋಕಗಳು 12–24)
(4) ಕರ್ಮಯೋಗದ ಪ್ರಭೇದಗಳು— (ಶ್ಲೋಕಗಳು 25–32)
(5) ಕರ್ಮಯೋಗದಲ್ಲಿ ಜ್ಞಾನಾಂಶದ ಪ್ರಧಾನತೆ— (ಶ್ಲೋಕಗಳು 33–42)

6 ಅಧ್ಯಾಯ ಐದು— 81–95

(1) ಕರ್ಮಯೋಗದ ಶ್ರೇಷ್ಠತೆ— (ಶ್ಲೋಕಗಳು 1–7)
(2) ಕರ್ಮಯೋಗದಲ್ಲಿ ಜ್ಞಾನಭಾಗದ
ಅನುಸಂಧಾನ ಪ್ರಕಾರಗಳು— (ಶ್ಲೋಕಗಳು 8–16)
(3) ಕರ್ಮಯೋಗದಿಂದ ಲಭಿಸುವ ಆತ್ಮಜ್ಞಾನದ ವಿವರಣೆ— (ಶ್ಲೋಕಗಳು 17–29)

7 ಅಧ್ಯಾಯ ಆರು— 95–123

(1) ಆತ್ಮಚಿಂತನರೂಪ ಧ್ಯಾನಯೋಗಾಭ್ಯಾಸಕ್ರಮ (ಶ್ಲೋಕಗಳು 1–28)
(2) ಆತ್ಮಚಿಂತನಪರರಾದ ಯೋಗಿಗಳ 4 ಅವಸ್ಥೆಗಳು (ಶ್ಲೋಕಗಳು 29–32)
(3) ಮನೋನಿಗ್ರಹಕ್ಕೆ ಅಭ್ಯಾಸ ವೈರಾಗ್ಯಾದಿ ಸಾಧನೆಗಳು (ಶ್ಲೋಕಗಳು 33–36)
(4) ಆತ್ಮಚಿಂತನರೂಪ ಧ್ಯಾನಯೋಗದ ಮಹಾತ್ಮೆ (ಶ್ಲೋಕಗಳು 37–46)
(5) ಭಗವತ್ ಚಿಂತನರೂಪ ಭಕ್ತಿಯೋಗದ ಪರಮಶ್ರೇಷ್ಠತೆ— (ಶ್ಲೋಕ 47)

8 ಉಪಸಂಹಾರ— 123–124

ಗೀತೆಯ ಮೊದಲನೆಯಷಟ್ಕದ ಸಾರಾಂಶ—

# A guide to the Study of Bhagvad Gita

By—Late Sri M. A. Narayana Iyengar, M.A., B.L., (Rtd D.D.P I, Mysore State)

Bhagavad Gita is the spiritual and moral message of Lord Sri Krishna to his disciple Arjuna It is stated to have been imparted to him just before the starting of the kurukshetra war which is graphically described in the Mahabharata It contains eighteen chapters Each chapter is designated as a kind of yoga In reality it is a message of god to all men

The whole trend of Bhagavadgita is to inculcate the method of attaining the Supreme Lord through Bhakti yoga and prapathi yoga, that is through intense love and self surrender to the supreme lord himself, the state of which can be attained by the performance of Karma yoga and Jnana yoga Karma yoga is the sincere performance of one's own duties without attachment to its ownership, agency and fruits Jnana yoga is the realisation of one's own self or Atman by means of attaining the correct knowledge of matter, soul and god and by practicing meditation after controlling the mind and senses. Bhakti yoga is the intense and exclusive love and devotion towards god and the performance of loving services to Him

Prapathi yoga is the path of self surrender to God. It is the highest state of mind surrendering oneself completely to the Lord and at the same time discharging ones own duties in life and practicing all the yogas only as loving services to Him, not being attached in the least to their ownership, agency and fruits The plan of all the 18 chapters of gita is to lead the upasaka (one who desires to attain moksha) or perfection step by step from the practice of karma yoga to Jnana yoga, from Jnana yoga to Bhakti yoga and from bhakti yoga to prapathi yoga

The 18 chapters of Bhagavad gita are divided into three sections of six chapters each called a shatka In the first shatka or the first six chapters the realisation of the soul by the performance of Karma yoga and Jnana yoga is taught In the second shatka or the second six chapters Bhakti yoga which results from karma yoga and jnana yoga and which is necessary for the realisation of God is explained. In the third shatka or third six chapters several points mentioned in the previous two shatkas are described in

detail-namely the nature of prakriti, purusha and iswara (Matter, soul and God), the glories and auspecious qualities of iswara (God), the nature of the three gunas known as Satva, Rajas and Tamas that exist in matter(Prakriti) and the paths of karma, jnana, and bhakti cluminating in prapathi for attaining the Supreme God

### The Frist Shatka or the Frist Six Chapters

The first chapter is designated as the **Arjuna Vishada Yoga** as it describes the dejection and grief of Arjuna The second chapter is called the **Sankhya yoga.** In this chapter Sri Krishna describes the metaphysical knowledge of the true nature of the Soul (Atma) and the body, the Buddhi yoga or the Jnana aspect of karma yoga i.e the spiritual attitude in discharging one own duties and the characteristics of a sthithaprajna (a perfect jnana yogin) The third chapter is clalled the **Karma yoga** It deals with the karma aspect i e the physcal aspect of the righteous actions and urges the importance of doing things without attachment to the fruits and doership as well Actions should be performed as Yajnas or offerings to the supreme Lord The soul in its real nature is not the doer of actions It is the three gunas of prakriti–Sattwa, Rajas snd Tamas that induces him to perform action and it is the supreme lord that prompts the three gunas of prakriti to perform actions Hence the karma yogi must perform his alloted duties dedicating them to the supreme Lord himself. The practice of karma yoga is also very essential to conquer the two enemies-kama and krodha that hinder the progress of jnana yoga.

The fourth chapter is called **Jnana Yoga,** as it deals mostly with the jnana aspect of righteous actions It contains an analysis of action into karma and akarma i e. the physical aspect and jnana or intellectual aspect and gives much importance to the akarma aspect or Jnana aspect Incidentally the real nature of the Supreme Lord in His incarnations is also mentioned in this chapter

The fifth chapter is called **Karma Sanyasa yoga.** It is the mixture of the topics already described in the third and fourth chapters viz karma aspects of righteous actions and the importance of their combination is clearly laid out The path of Karma yoga in which Jnana yoga is also intermixed i e performing duties without attachment to this ownership, agency and fruits but, with a spiritual attitude is superior and easier to Jnana marga

The sixth chapter is called **Atma Samyama yoga** or **Dhyana Yoga.** Here the method of performing Dhayana yoga or meditation is taught It also contains the description of the stages of perfection in yoga, the realisations of the yogin, the method of controlling the mind through vairagya and abhyasa (i.e. by constant practice of unattachment), the destiny of the yogabrashta and the grades of greatness of the Yogins In the last verse of this chapter Sri Krishna speaks of the supremacy of the Lord in the form of devoted worship

Thus in the first six chapters Sri Krishna explained to Arjuna, the nature of the Soul (Atman), the cause of its bondage and the manner of its liberation by means of karma yoga and jnana yoga

**The second shatka or the Second Six Chapters.**

The seventh chapter is called **The Jnana Vijnana Yoga** as it deals with the composition of the jagat or Universe ie. the world is made up of prakriti, soul and God (The supreme Self) God creates, sustains and dissolves every thing in the universe He is the essense of all things in nature But the presence of God in nature is hidden by Maya or prakriti and the veil of Maya (illusion) can be removed only by surrendering oneself to the Supreme Lord Himself Four types of devotees viz, Artha, Artharthin, Jignasa and Jnanin are described here and the Jnanin Bhakta who loves God alone is superior to all other devotees

The eighth chapter is called **Akshara Brahma Yoga.** The knowledge which is necessary for deliverance from old age and death is taught here. One must remember God at the time of death and in order to achieve this one has to practice abhyas yoga ie cons. ant meditation on God The two different paths namely the paths of "light" and "smoke" that are trodden by the departed souls are also mentioned here,

The nineth chapter is called the **Raja Vidya, Rajaguhya Yoga** as it explains the method of practicing Bhakti to the Lord, its excellence and its being within the reach of all The tenth chapter is called the **Vibhuti Yoga** as the lord describes in it his supreme, sovereign and lordly powers, the study of which will develop Bhakti in the heart of men. The eleventh chapter is called the **Viswarupa Darsana Yoga** As Arjuna being a true bhakta experiences the direct proof and realisation of the universal and all comprehensive manifestation of Sri Krishna Real devotion to God is necessary for such a realisation

The twelfth chapter is called the **Bhakti Yoga** because it points out the superiority of Bhakti and it contains the description of the stages of Bhakti yoga and also of the virtues of the Bhakta

Thus in the second six chapters Sri Krishna explains to Arjuna the phenomenon of this Jagat or Universe, the nature of prakriti, purusha and Iswara and their interrelations Then he explains in detail the qualities of Iswara and instructs Arjuna into the secrets of Bhakti yoga or the guhyatama Jnanam and Vijnanam Further at the request of Arjuna Sri Krishna shows his universal manifestation or the Viswa Rupa and finally sums up his teachings by pointing the greaness of Bhakti and the true nature of beloved Bhakta

**The third shatka or the third six Chapters.**

The thirteenth chapter is called the **Kshetrajna Yoga** as it deals with the nature of the body and Soul jnana. The fourteenth chapter is called the **Guna Traya Vibhaga Yoga** Because it points out how the three gunas or qualities Sattwa, Rajas and Tamas bind the soul and how to get rid of their influence. The fifteenth chapter is called the **Purushottama yoga** as it describes the glory of God and points out how He transcends the free and the bound souls The sixteenth chapter is called Daivasura sampad Vibhaga yoga as in it the human beings are divided into devas and asuras according to their godly and demonic natures respectively The necessity of following the injunctions of sastras is also taught here The seventeenth chapter is called the **Sradha Traya Vibhaga** because it declares that Asastric works (ie works done agains the sanctions of the sastras) are asuric and fruitless and shastric works differ according to the motives with which they are performed The eighteenth chapter is called the **Mokhsha Sanyasa Yoga** as it points out that Tyaga means only the renouncement of the fruits, agency and ownership of actions It also deals with the manner of ascribing the kartiutwa or agency (doership) of all works to God, the necessity of developing satwaguna and the greatness of performing ones own Dharma with the tyaga attitude and at the same time surrendering oneself to the Lord himself Thus in this last and concluding chapter of Bhagavadgita Sri Krishna has taught the essence of Bhakti yoga culminating in prapathi yoga

Therefore according to Bhagavad gita, the man who wants to attain the supreme must first perform Karma yoga along with Jnana yoga to attain Bhahti or immense love towards God and then by practicing Bhakti yoga he will finally attain the Supreme State of mind of surrendering himself completely to the Lord and he will become a true prapanna.

— 0 —

# ಹಿಂದೂ ಮತದಲ್ಲಿ ಭಗವದ್ಗೀತೆಯ ಶ್ರೇಷ್ಠತೆ

ಲೇಖಕಿ :—ಶ್ರೀಮತಿ ಎಂ. ಎ ಸಿಂಗಮ್ಮ, ಬೆಂಗಳೂರು

ಹಿಂದೂ ಮತವು ಯಾವ ಒಬ್ಬ ಮಹಾಪುರುಷರಿಂದ ಸ್ಥಾಪಿಸಲ್ಪಟ್ಟ ಮತವಲ್ಲ ಬೌದ್ಧ ಮತವನ್ನು ಬುದ್ಧ ಭಗವಾನರೂ, ಕ್ರೈಸ್ತ ಮತವನ್ನು ಏಸುಕ್ರಿಸ್ತ ಮಹಾಪುರುಷರೂ, ಇಸ್ಲಾಂ ಮತವನ್ನು ಮಹಮದ್ ಪೈಗಂಬರ್ ಮಹಾಪುರುಷರೂ ಸ್ಥಾಪಿಸಿದಂತೆ ಹಿಂದೂ ಮತವನ್ನು ಯಾರೂ ಸ್ಥಾಪಿಸಲಿಲ್ಲ ಅನಾದಿಯೂ, ಅಪೌರುಷೇಯವೂ ಆದ ಶ್ರುತಿಯೇ ಇದಕ್ಕ ಆಧಾರ ಈ ಶ್ರುತಿಗಳೊಂದಿಗೆ ಅವುಗಳ ಆಧಾರದಿಂದ ಹುಟ್ಟಿದ ಸ್ಮೃತಿ, ಇತಿಹಾಸ, ಪುರಾಣ, ಆಗಮ ಮತ್ತು ದರ್ಶನಾದಿಗಳು ಹಿಂದೂ ಮತಕ್ಕೆ ಆಧಾರ ಗ್ರಂಥಗಳಾಗಿವೆ

**ಶ್ರುತಿಗಳು**—ಮಹಾ ಋಷಿಗಳು ತಪಸ್ಸ ಮಾಡುತ್ತಿದ್ದ ಕಾಲದಲ್ಲಿ ಅವರಿಗೆ ಕೇಳಿಸಿದ ದಿವ್ಯ ತತ್ತ್ವಾಂಶಗಳೇ ಶ್ರುತಿಗಳು 'ಶ್ರುತಂ'—ಎಂದರೆ ಕೇಳಲ್ಪಟ್ಟದ್ದು ಎಂದು ಅರ್ಥ. ಈ ಶ್ರುತಿ ವಾಕ್ಯಗಳೇ ವೇದಗಳು ಹೀಗೆ ವೇದಗಳು ಪುರಾತನ ಕಾಲದ ಋಷಿಗಳು ತಮ್ಮ ಯೋಗ ಧ್ಯಾನ ಕಾಲದಲ್ಲಿ ಕೇಳಿದ ದಿವ್ಯಶಬ್ದ ರಾಶಿಗಳಾಗಿರುವುದರಿಂದ, ಅವು ಅ ಪೌ ರು ಷೇ ಯ ವೂ, ಅನಾದಿಯೂ ಆದ ಪ್ರಮಾಣಶಾಸ್ತ್ರವೆನಿಸಿಕೊಂಡಿವೆ ವೇದದಲ್ಲಿ ಋಗ್ವೇದ ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದ ವೆಂದು ನಾಲ್ಕುಭಾಗಗಳಿವೆ ಇವುಗಳು ಮನುಷ್ಯನು ತಿಳಿಯ ಬೇಕಾದ ತತ್ವ, ಹಿತ, ಪುರುಷಾರ್ಥಗಳನ್ನು ತಿಳಿಸುತ್ತವೆ. ಪ್ರತಿಯೊಂದು ವೇದದಲ್ಲಿಯೂ ಮಂತ್ರ, ಬ್ರಾಹ್ಮಣ ಮತ್ತು ಉಪನಿಷತ್ತುಗಳೆಂಬ ಮೂರು ಭಾಗಗಳಿವೆ ವೇದದ ಪೂರ್ವಭಾಗ ವಾದ ಮಂತ್ರ, ಬ್ರಾಹ್ಮಣಗಳು, ಧರ್ಮ, ಅರ್ಥ ಮತ್ತು ಕಾಮ ಪುರುಷಾರ್ಥಗಳಿಗೆ ಸಾಧನವಾದ ಕರ್ಮಗಳನ್ನು ಹೇಳುತ್ತವೆ ವೇದದ ಉತ್ತರ ಭಾಗವಾದ ಉಪನಿಷತ್ತುಗಳು ಬ್ರಹ್ಮನ ಸ್ವರೂಪ, ರೂಪ, ಗುಣ, ವಿಭೂತಿಗಳನ್ನೂ, ಮೋಕ್ಷ ಪುರುಷಾರ್ಥಕ್ಕೆ ಬೇಕಾದ ಯೋಗ ಸಾಧನೆಗಳನ್ನೂ ತಿಳಿಸುತ್ತವೆ ವೇದದಲ್ಲಿ ಬಹಳ ಮುಖ್ಯವಾದುದು ಉಪನಿಷತ್ತು ಉಪನಿಷತ್ತುಗಳಿಗೆ ವೇದಾಂತಗಳೆಂದೂ ಹೆಸರು

ಅನೇಕ ಉಪನಿಷತ್ತುಗಳಿವೆ ಅವುಗಳಲ್ಲಿ ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ಐತರೇಯ, ತೈತ್ತಿರೀಯ, ಛಾಂದೋಗ್ಯ, ಬೃಹದಾರಣ್ಯಕ, ಕೌಶೀತಕೀ ಮತ್ತು ಶ್ವೇತಶ್ವತಾರ ಎಂಬ ಉಪನಿಷತ್ತುಗಳು ಬಹಳ ಮುಖ್ಯವಾದುವುಗಳು ಇವು ಗಳಲ್ಲಿ ಹಿಂದೂ ಮತದ ಮುಖ್ಯ ತತ್ವಗಳೆಲ್ಲಾ ಅಡಗಿವೆ.

ಈ ಉಪನಿಷತ್ತಿನ ಆಧಾರದ ಮೇಲೆ ಹಿಂದೂ ಮತದಲ್ಲಿ ಅನೇಕ ಗ್ರಂಥಗಳು ಹುಟ್ಟಿವೆ. ಉಪನಿಷತ್ತಿನ ಬುಡವನ್ನು ಆಧಾರ ವಾಗಿ ಹೊಂದಿ ಸ್ಮೃತಿ, ಇತಿಹಾಸ, ಪುರಾಣ, ಆಗಮ ಮತ್ತು ದರ್ಶನಗಳೆಂಬ ಅನೇಕ ಶಾಖೆಗಳುಹುಟ್ಟಿವೆ. ಶ್ರುತಿಯನ್ನು ಆತ್ಮಕ್ಕೂ ಸ್ಮೃತಿಯನ್ನು ಶರೀರಕ್ಕೂ ಇತಿಹಾಸ ಪುರಾಣಾದಿಗಳನ್ನು ಅಂಗಗಳಿಗೂ ಹೋಲಿಸಬಹುದು. ಆದ್ದರಿಂದ ಹಿಂದೂ ಧರ್ಮಕ್ಕೆ ಮೊದಲನೆಯ ಆಧಾರ ಗ್ರಂಥ ಶ್ರುತಿ ಅದರ ಆಧಾರದ ಮೇಲೆ ಸ್ಮೃತಿ, ಇತಿಹಾಸ, ಪುರಾಣ, ಆಗಮ ಮತ್ತು ದರ್ಶನಾದಿ ಇತರ ಆಧಾರ ಗ್ರಂಥಗಳು ಹುಟ್ಟಿವೆ

**ಸ್ಮೃತಿಗಳು**—ಹಿಂದೂಧರ್ಮದ ರೀತಿ ನೀತಿಗಳನ್ನು ಆಗಾಗ್ಯೆ ರೂಪಿಸಿ ತಿಳಿಸುವ ಗ್ರಂಥವೇ ಸ್ಮೃತಿಯು ಇದು ಶ್ರುತಿಯ ತತ್ವಗಳ ಆಧಾರದ ಮೇಲೆ ಹಿಂದೂ ಸಮಾಜದ ಜೀವನವನ್ನೂ ರೀತಿ ನೀತಿ ನಡತೆಗಳನ್ನೂ ರೂಪಿಸುತ್ತದೆ. ಇದನ್ನು ಋಷಿಗಳು ಕಾಲಕಾಲಕ್ಕ ತಕ್ಕಂತೆ ಬದಲಾಯಿಸಿ ಹೊಸ ಹೊಸ ತತ್ವಗಳನ್ನೂ ಸೂತ್ರಗಳನ್ನೂ ಬರೆದಿದ್ದಾರೆ ಇಂತಹ ಧರ್ಮಶಾಸ್ತ್ರಜ್ಞರಲ್ಲಿ ಮುಖ್ಯರಾದವರು ಮನು, ಯಾಜ್ಞವಲ್ಕ್ಯ ಮತ್ತು ಪರಾಶರರು. ಅವರವರು ಬರೆದಿರುವ ಈ ಧರ್ಮಶಾಸ್ತ್ರಗಳನ್ನು ಮನುಸ್ಮೃತಿ,

ಯಾಜ್ಞವಲ್ಕ್ಯ ಸ್ಮೃತಿ ಮತ್ತು ಪರಾಶರ ಸ್ಮೃತಿ ಎಂದು ಕರೆದಿದ್ದಾರೆ. ಇವುಗಳು ಜನಗಳ ಕರ್ತವ್ಯ ಕರ್ಮಗಳನ್ನು ತಿಳಿಸುವುದರಿಂದ ಇವುಗಳಿಗೆ ಧರ್ಮಶಾಸ್ತ್ರಗಳೆಂದು ಹೆಸರು. ಆದರೆ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳು ದೇಶಪದ್ಧತಿ ಆಗಾಗ್ಗೆ ಬದಲಾಯಿಸುತ್ತಿರುವುದರಿಂದ ಇವುಗಳಲ್ಲಿರುವ ಕಾನೂನು, ಕಟ್ಟಳೆಗಳೂ ಅದಕ್ಕೆ ಅನುಗುಣವಾಗಿ ಬದಲಾಯಿಸುತ್ತಿರಬೇಕಾಗುತ್ತದೆ.

**ಇತಿಹಾಸ ಮತ್ತು ಪುರಾಣಗಳು**—ಇವು ಉಪನಿಷತ್ತುಗಳಲ್ಲಿರುವ ತತ್ವಗಳನ್ನೂ ಸ್ಮೃತಿಯಲ್ಲಿರುವ ನೀತಿ ನಡತೆಗಳನ್ನೂ ಸಾಮಾನ್ಯಜನರಿಗೆ ತಿಳಿಯುವಂತೆ ಚರಿತ್ರೆಯ ಮತ್ತು ಕಥೆಯ ರೂಪದಲ್ಲಿ ತಿಳಿಸುತ್ತವೆ. ಶ್ರುತಿ, ಸ್ಮೃತಿಗಳನ್ನು ಬಹಳ ಸ್ವಲ್ಪ ಜನ ತಿಳಿಯುವ ಶಕ್ತಿ ಪಡೆದಿದ್ದಾರೆ. ಆದರೆ ಇತಿಹಾಸ ಪುರಾಣಗಳನ್ನು ಜನಸಾಮಾನ್ಯರೆಲ್ಲರೂ ತಿಳಿಯಬಲ್ಲರು. ರಾಮಾಯಣ, ಮಹಾಭಾರತಗಳೇ ಇತಿಹಾಸಗಳು. ಇವುಗಳು ಚಿಕ್ಕವಯಸ್ಸಿನಿಂದಲೇ ಮಾನವನಿಗೆ ಧಾರ್ಮಿಕ ಮನೋವೃತ್ತಿಯನ್ನು ಬೆಳೆಸುತ್ತವೆ. ಶ್ರೀ ರಾಮನ ದಿವ್ಯ ಚರಿತ್ರೆಯೇ ರಾಮಾಯಣವು. ನಮ್ಮ ದೇಶದ ಪ್ರತಿಯೊಂದು ಮಗುವಿಗೂ ಶ್ರೀ ರಾಮನ ಸತ್ಯಪರಿಪಾಲನೆ ಆದರ್ಶ ರಾಜ್ಯಾಡಳಿತ, ಸೀತಾದೇವಿಯ ಪಾತಿವ್ರತ್ಯ, ಲಕ್ಷ್ಮಣ ಮತ್ತು ಹನುಮಂತರ ಸೇವಾನಿಷ್ಠೆ ಎಲ್ಲವೂ ತಿಳಿದಿದೆ ಎನ್ನಬಹುದು. ಮಹಾಭಾರತವು ಹಿಂದೂಧರ್ಮದ ವಿಶ್ವಕೋಶವೆನ್ನಿಸಿಕೊಂಡಿದೆ. ಇದರಲ್ಲಿ ಅನೇಕ ತತ್ವ ವಿಚಾರಗಳ ಮತ್ತು ಧರ್ಮಾಧರ್ಮಗಳ ಚರ್ಚೆ ನಡೆದಿದೆ. ಶ್ರೀ ಕೃಷ್ಣನ ಗೀತೋಪದೇಶ ಮತ್ತು ಶಾಂತಿ ಪರ್ವದಲ್ಲಿ ಭೀಷ್ಮರ ಉಪದೇಶ ಇವೆರಡೂ ಬಹಳ ಪ್ರಸಿದ್ಧವಾದ ಉಪದೇಶಗಳಾಗಿವೆ.

ಶ್ರುತಿಯ ಸತ್ಯಗಳನ್ನು ಸಾಧಾರಣ ಮಾನವರಿಗೆ ತಿಳಿಯುವಂತೆ ಹೇಳುವ ಕಥೆಗಳೇ ಪುರಾಣಗಳು. ಅನೇಕ ಪುರಾಣಗಳಿವೆ. ಅವುಗಳಲ್ಲಿ ವಿಷ್ಣುಪುರಾಣ ಮತ್ತು ಭಾಗವತ ಪುರಾಣಗಳು ಬಹಳ ಮುಖ್ಯವಾದವುಗಳು.

**ಆಗಮಗಳು**—ಶ್ರುತಿಯ ಆಧಾರದಿಂದ ಹುಟ್ಟಿರುವ ಸಾಧನ ಶಾಸ್ತ್ರಗಳೇ ಆಗಮಗಳು. ದೇವಾಲಯಗಳಲ್ಲೂ, ಮನೆಗಳಲ್ಲೂ, ನಡೆಸಬೇಕಾದ ಪೂಜಾದಿ ಕಾರ್ಯಕ್ರಮಗಳನ್ನು ಇವು ತಿಳಿಸುತ್ತವೆ. ಆಗಮಗಳು ವೈಷ್ಣವ ಆಗಮ, ಶೈವ ಆಗಮ ಮತ್ತು ಶಾಕ್ತ ಆಗಮಗಳೆಂದು ಮೂರು ವಿಧವಾಗಿವೆ. ವೈಷ್ಣವ ಆಗಮವನ್ನು ಪಾಂಚರಾತ್ರ ಆಗಮವೆಂದು ಕರೆಯುತ್ತಾರೆ. ಇದು ವಿಷ್ಣುವಿನ ಪೂಜೆಯನ್ನು, ಶೈವ ಆಗಮವು ಶಿವನ ಪೂಜೆಯನ್ನು, ಶಾಕ್ತ ಆಗಮವು ಶಕ್ತಿಪೂಜೆಯನ್ನೂ ಪ್ರತಿಪಾದಿಸುತ್ತವೆ.

**ದರ್ಶನಗಳು**—ಶ್ರುತಿಯ ಆಧಾರದಿಂದ ಹುಟ್ಟಿರುವ ತತ್ವಶಾಸ್ತ್ರಗಳೇ ದರ್ಶನಗಳು. ಹಿಂದೂಮತದಲ್ಲಿ ಮುಖ್ಯವಾಗಿ ಚಾರ್ವಾಕ, ಜೈನ, ಬೌದ್ಧ, ಸಾಂಖ್ಯ–ಯೋಗ, ನ್ಯಾಯ–ವೈಶೇಷಿಕ ಮತ್ತು ಪೂರ್ವ ಮೀಮಾಂಸಾ–ಉತ್ತರ ಮೀಮಾಂಸಾ ಎಂಬ ದರ್ಶನಗಳು ಪ್ರಸಿದ್ಧವಾಗಿವೆ. ಇವುಗಳಲ್ಲಿ ಚಾರ್ವಾಕ, ಜೈನ ಮತ್ತು ಬೌದ್ಧ ದರ್ಶನಗಳು ವೇದದ ಪ್ರಮಾಣವನ್ನು ಒಪ್ಪುವುದಿಲ್ಲ. ಇತರ ದರ್ಶನಗಳು ವೇದದ ಆಧಾರದಿಂದ ಹುಟ್ಟಿವೆ. ಉತ್ತರ ಮೀಮಾಂಸಾದರ್ಶನಕ್ಕೆ ವೇದಾಂತದರ್ಶನವೆಂದು ಹೆಸರು. ವೇದಾಂತ ದರ್ಶನಕ್ಕೆ ಪ್ರಾಮುಖ್ಯತೆ ಹೆಚ್ಚು. ವೇದಾಂತ ದರ್ಶನದಲ್ಲಿ ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತ ಎಂಬ ಮೂರು ಮುಖ್ಯವಾದ ಸಿದ್ಧಾಂತಗಳಿವೆ. ತತ್ವ ವಿಚಾರದಲ್ಲಿ ಇವುಗಳಲ್ಲಿ ವ್ಯತ್ಯಾಸಗಳಿದ್ದರೂ ನಡತೆಯ ವಿಷಯದಲ್ಲಿ ಇವುಗಳಲ್ಲಿ ಐಕ್ಯತೆಯಿದೆ ಎನ್ನಬಹುದು.

**ಭಕ್ತರ ಗಾನಗಳೂ ಮತ್ತು ಪ್ರವಚನಗಳು**—ಮೇಲೆ ತಿಳಿಸಿದ ಗ್ರಂಥಗಳಲ್ಲದೆ ನಮ್ಮ ದೇಶದಲ್ಲಿ ಅನೇಕ ಭಕ್ತರ ಗಾನಗಳನ್ನೂ ಪ್ರವಚನಗಳನ್ನೂ ಒಳಗೊಂಡ ಪವಿತ್ರ ಗ್ರಂಥಗಳಿವೆ. ಪುರಂದರ ದಾಸರು, ಸರ್ವಜ್ಞರು, ನಮ್ಮಾಳ್ವಾರರು, ತ್ಯಾಗರಾಜರು, ತುಳಸೀದಾಸರು, ತುಕಾರಾಮರು ಮುಂತಾಗಿ ಅನೇಕ ಭಕ್ತ ಶಿರೋಮಣಿಗಳು ಭಗವಂತನ ಸಾಕ್ಷಾತ್ಕಾರ ಪಡೆದು ತಮ್ಮ ದಿವ್ಯ ಸಂದೇಶಗಳನ್ನು ಕನ್ನಡ, ತಮಿಳು, ತೆಲುಗು, ಹಿಂದೀ, ಮರಾಠಿ ಮುಂತಾದ ಬಾಷೆಗಳಲ್ಲಿ ಗಾನ, ಪ್ರವಚನಗಳ ರೂಪದಲ್ಲಿ ಪ್ರಕಾಶ ಪಡಿಸಿದ್ದಾರೆ.

ಹೀಗೆ ಹಿಂದೂ ಧರ್ಮಕ್ಕೆ ತಳಹದಿಯಾಗಿ ಶ್ರುತಿಗಳ ಅವುಗಳ ಆಧಾರದಿಂದ ಹುಟ್ಟಿದ ಸ್ಮೃತಿ, ಇತಿಹಾಸ, ಪುರಾಣ ಆಗಮ ಮತ್ತು ದರ್ಶನಾದಿಗಳೂ ಮತ್ತು ಭಕ್ತರ ಗಾನ, ಪ್ರವಚನಾದಿಗಳೂ ಆಧಾರ ಗ್ರಂಥಗಳಾಗಿವೆ. ಆದರೆ ಇವುಗಳಲ್ಲಿ **ಪ್ರಸ್ಥಾನತ್ರಯೀ** ಎಂಬ ಮೂರು ಗ್ರಂಥಗಳು ಬಹಳ ಮುಖ್ಯವಾದವುಗಳಾಗಿವೆ. ಉಪನಿಷತ್ತು, ಬ್ರಹ್ಮಸೂತ್ರ ಮತ್ತು ಭಗವದ್ಗೀತೆ ಈ ಮೂರು ಗ್ರಂಥಗಳಿಗೆ ಪ್ರಸ್ಥಾನತ್ರಯೀ ಎಂದು ಹೆಸರು. ಉಪನಿಷತ್ತಿನ ತತ್ವಗಳನ್ನು ವಿಶದೀಕರಿಸುವ ಸೂತ್ರಗಳೇ **ಬ್ರಹ್ಮಸೂತ್ರಗಳು**. ಇದನ್ನು ಬಾದರಾಯಣರು ರಚಿಸಿದ್ದಾರೆ. ಬ್ರಹ್ಮನ ಸ್ವರೂಪವನ್ನೂ, ಅವನಿಗೂ ಜಗತ್ತಿಗೂ ಇರುವ ಸಂಬಂಧವನ್ನೂ ತಿಳಿಸುವುದರಿಂದ ಇದಕ್ಕೆ ಬ್ರಹ್ಮಸೂತ್ರವೆಂದು ಹೆಸರು ಬಂದಿದೆ. ವೇದಾಂತದ (ಉಪನಿಷತ್ತಿನ)

ಸಾರವಾಗಿರುವುದರಿಂದ ಇದಕ್ಕೆ ವೇದಾಂತ ಸೂತ್ರವೆಂದು ಹೆಸರು. ಶ್ರೀ ಶಂಕರಾಚಾರ್ಯರು, ಶ್ರೀ ರಾಮಾನುಜಾಚಾರ್ಯರು, ಶ್ರೀ ಮಧ್ವಾಚಾರ್ಯರು ಮುಂತಾಗಿ ಅನೇಕ ಮಹಾಜ್ಞಾನಿಗಳು ಈ ಸೂತ್ರಗಳಿಗೆ ಬಹಳ ದೊಡ್ಡ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಇದರಿಂದ ವೇದಾಂತ ದರ್ಶನದಲ್ಲಿ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಮುಂತಾಗಿ ಅನೇಕ ಶಾಖೆಗಳು ಹುಟ್ಟಿವೆ.

**ಭಗವದ್ಗೀತೆ**—ಭಗವದ್ಗೀತೆಯು ಉಪನಿಷತ್ತಿನ ಸಾರವಾಗಿರುವುದರಿಂದ ಇದು [illegible] ಹಿಂದೂಮತಕ್ಕೆ ಬಹಳ ಮುಖ್ಯವಾದ ಆಧಾರ ಗ್ರಂಥವಾಗಿದೆ. ಇದು ಪ್ರಸ್ಥಾನತ್ರಯದಲ್ಲಿ ಒಂದು ಗ್ರಂಥವಾಗಿ ಹಿಂದೂಮತದಲ್ಲಿ ಬಹಳ ಮುಖ್ಯವಾದ ಸ್ಥಾನ ಪಡೆದಿದೆ. ಇದರಲ್ಲಿ ಹಿಂದೂಮತದ ಸಾರವೆಲ್ಲವೂ ಅಡಗಿದೆ. ಉಪನಿಷತ್ತಿನಲ್ಲಿರುವ ತತ್ವಬೋಧಕವಾದ ನೀತಿಬೋಧಕವಾದ ವಿಷಯಗಳನ್ನು ಭಗವದ್ಗೀತೆಯು ಬಹಳ ಚೆನ್ನಾಗಿ ಸುಲಭರೀತಿಯಲ್ಲಿ ವಿವರಿಸಿರುವುದರಿಂದ ಇದಕ್ಕೆ ಹಿಂದೂ ಮತದಲ್ಲಿ ಬಹಳ ಶ್ರೇಷ್ಠತೆ ಲಭಿಸಿದೆ.

ಭಗವದ್ಗೀತೆಗೆ ಅನೇಕ ಮಹಾ ಪುರುಷರು ಅರ್ಥವ್ಯಾಖ್ಯಾನಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಶ್ರೀ ಶಂಕರಭಾಷ್ಯ, ಶ್ರೀರಾಮಾನುಜಭಾಷ್ಯ ಮತ್ತು ಶ್ರೀಮಧ್ವಭಾಷ್ಯಗಳು ಬಹಳ ಮುಖ್ಯವಾದವು. ಈ ಗೀತಾಭಾಷ್ಯಗಳಲ್ಲಿ ತತ್ವವಿಚಾರಗಳಲ್ಲಿ ವ್ಯತ್ಯಾಸಗಳಿದ್ದರೂ ನೀತಿ ನಡತೆಯ ವಿಷಯದಲ್ಲಿ ಸರ್ವರೂ ಏಕಾಭಿಪ್ರಾಯವನ್ನು ಸೂಚಿಸಿದ್ದಾರೆ. ಇದರೊಂದಿಗೆ ಬಾಲಗಂಗಾಧರತಿಲಕ್, ಅರವಿಂದಘೋಷ್, ಮಹಾತ್ಮಗಾಂಧಿ, ವಿನೋಬಾಭಾವೆ ಮುಂತಾಗಿ ಆಧುನಿಕ ಮಹಾತ್ಮರುಗಳು ಕೂಡ ಗೀತೆಗೆ ಅರ್ಥ ವಿಶೇಷಾರ್ಥಗಳನ್ನು ಬರೆದಿದ್ದಾರೆ. ಮಹಾತ್ಮ ಗಾಂಧಿಯವರು ಭಗವದ್ಗೀತಾ ಶ್ಲೋಕಗಳನ್ನು ಪ್ರತಿದಿನವೂ ಪಾರಾಯಣ ಮಾಡುತ್ತಿದ್ದರು. ಅವರು ಭಗವದ್ಗೀತೆಯನ್ನು ಗೀತಾಮಾತೆ ಅಂದರೆ ತನಗೆ ಶಾಂತಿ ನೀಡಿದ ತಾಯಿ ಎಂದು ಕರೆಯುತ್ತಿದ್ದರು.

ಭಗವದ್ಗೀತೆಯು ಮಹಾಭಾರತದ ಕಥೆಯ ಮಧ್ಯದಲ್ಲಿದೆ. ಕುರುಕ್ಷೇತ್ರದಲ್ಲಿ ಕೌರವರಿಗೂ ಪಾಂಡವರಿಗೂ ನಡೆದ ಯುದ್ಧಾರಂಭದಲ್ಲಿ ಗೀತಾ ಪ್ರವಚನವು ಪ್ರಾರಂಭವಾಗುತ್ತದೆ. ತನ್ನ ಬಂಧುಬಾಂಧವರನ್ನು ನೋಡಿ ಮೋಹ ಪರವಶನಾಗಿ ತನ್ನ ಕರ್ತವ್ಯ ಕರ್ಮವನ್ನು ಮಾಡಲು ಹಿಂಜರಿದ ಅರ್ಜುನನಿಗೆ ಶ್ರೀ ಕೃಷ್ಣ ಪರಮಾತ್ಮನು ಸರಿಯಾದ ತತ್ವವನ್ನು ಬೋಧಿಸಿ ಅವನಲ್ಲಿ ಕರ್ತವ್ಯ ಜ್ಞಾನವನ್ನು ಜಾಗ್ರತಗೊಳಿಸಿದ್ದಾನೆ. ಆದರೆ ಇದು ಕೇವಲ ಅರ್ಜುನನಿಗೆ ಮಾತ್ರ ನೀಡಿದ ಸಂದೇಶವಾಗಿರದೆ ಸರ್ವದೇಶ, ಸರ್ವಕಾಲ, ಸರ್ವಾವಸ್ಥೆಗಳಲ್ಲಿರುವ ಎಲ್ಲ ಮಾನವರಿಗೂ ಅನ್ವಯಿಸುವ ಉಪದೇಶವಾಗಿದೆ ಮತ್ತು ಮಾನವನು ಸಂಸಾರಿಯಾಗಿದ್ದುಕೊಂಡು, ತನ್ನ ಕರ್ತವ್ಯ ಕರ್ಮಗಳನ್ನು ಕರ್ಮಯೋಗವಾಗಿ ಆಚರಿಸುತ್ತಾ, ಭಗವಂತನಲ್ಲಿ ಭಕ್ತಿ ಹೊಂದಿ ಅವನಿಗೆ ಶರಣಾಗತನಾಗಿ ತನ್ನ ಬಾಳನ್ನು ಸಾರ್ಥಕಗೊಳಿಸಿಕೊಳ್ಳಬಹುದೆಂಬ ಸರ್ವೋದಯ ಸಂದೇಶವನ್ನು ನೀಡುತ್ತದೆ. ಈ ಕಾರಣಗಳಿಂದ ಭಗವದ್ಗೀತೆಗೆ ಹೆಚ್ಚಾದ ಮಹತ್ವವುಂಟಾಗಿದೆ. ಭಗವದ್ಗೀತೆಯು ಶ್ರೀ ಕೃಷ್ಣಾರ್ಜುನ ಸಂವಾದ ರೂಪದಲ್ಲಿರುವುದರಿಂದ ಓದುವುದಕ್ಕೆ ಆಕರ್ಷಣೀಯವೂ ಆಗಿದೆ.

ಭಗವದ್ಗೀತೆಯಲ್ಲಿ 18 ಅಧ್ಯಾಯಗಳಿವೆ. ಈ 18 ಅಧ್ಯಾಯಗಳಲ್ಲಿ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ಮತ್ತು ಶರಣಾಗತಿಯೋಗ ಸಾಧನೆಗಳ ವಿಸ್ತಾರವಾದ ವಿವರಣೆಯಿದೆ. ಮೊದಲು ಕರ್ಮಯೋಗ ಜ್ಞಾನಯೋಗಗಳನ್ನೂ ಅನಂತರ ಭಕ್ತಿಯೋಗವನ್ನೂ, ಕೊನೆಗೆ ಶರಣಾಗತಿ ಯೋಗವನ್ನೂ ಶ್ರೀ ಕೃಷ್ಣಪರಮಾತ್ಮನು ಹಂತ ಹಂತವಾಗಿ ಉಪದೇಶ ಮಾಡಿದ್ದಾನೆ. ಇದೂ ಅಲ್ಲದೆ ಭಗವದ್ಗೀತೆಯ ಪ್ರತಿಯೊಂದು ಅಧ್ಯಾಯದಲ್ಲಿಯೂ ನೈತಿಕ ಅಭ್ಯಾಸಗಳ ವಿವರಣೆಯಿದೆ. 2ನೆಯ ಅಧ್ಯಾಯದಲ್ಲಿ ತಿಳಿಸಿರುವ ಸ್ಥಿತಪ್ರಜ್ಞನ ಗುಣಗಳನ್ನೂ, 12ನೆಯ ಅಧ್ಯಾಯದಲ್ಲಿ ತಿಳಿಸಿರುವ ಭಕ್ತನ ಗುಣಗಳನ್ನೂ ಅರ್ಥ ಸಹಿತ ಮನನ ಮಾಡುತ್ತ ಮಾನವರು ಮನಸ್ಸನ್ನು ಪರಿಶುದ್ಧಗೊಳಿಸಿಕೊಳ್ಳಲು ಪ್ರಯತ್ನಿಸಬೇಕು. ಗೀತಾ ಶ್ಲೋಕಗಳನ್ನು ಅರ್ಥ ಸಹಿತ ಮನನ ಮಾಡುತ್ತಿದ್ದರೆ ಮನಸ್ಸಿಗೆ ಕಷ್ಟಕಾಲದಲ್ಲಿ ಶಾಂತಿ ಲಭಿಸುತ್ತದೆ ಮತ್ತು ಭಗವಂತನಲ್ಲಿ ಭಕ್ತಿಯುಂಟಾಗುತ್ತದೆ. ಭಗವಂತನು ತನ್ನ ಸ್ವಂತ ವಾಕ್ಯದಲ್ಲಿ ಅರ್ಜುನನಿಗೆ ಉಪದೇಶ ನೀಡಿರುವುದರಿಂದ ಇದಕ್ಕೆ ಭಗವದ್ಗೀತೆ ಎಂದು ಹೆಸರು ಬಂದಿದೆ. ಶ್ರೀ ಕೃಷ್ಣನನ್ನು ಗೋಪಾಲಕನಿಗೂ, ಅರ್ಜುನನನ್ನು ಕರುವಿಗೂ, ಉಪನಿಷತ್ತನ್ನು ಹಸುವಿಗೂ, ಭಗವದ್ಗೀತೆಯನ್ನು ಹಾಲಿಗೂ ಹೋಲಿಸುತ್ತಾರೆ. ಉಪನಿಷತ್ತೆಂಬ ಹಸುವಿನಿಂದ, ಅರ್ಜುನನನ್ನು ಕರುವಿನಂತೆ ವ್ಯಾಜವಾಗಿ ಇಟ್ಟುಕೊಂಡು ಶ್ರೀ ಕೃಷ್ಣಪರಮಾತ್ಮ ಗೀತಾಮೃತವೆಂಬ ಹಾಲನ್ನು ಕರೆದು ಲೋಕದ ಜನರಿಗೆ ನೀಡಿದ್ದಾನೆ. ಈ ಗೀತಾಮೃತವನ್ನು ಪಾನಮಾಡಿ ಸರ್ವರೂ ತಮ್ಮ ತಮ್ಮ ಬಾಳನ್ನು ಸಾರ್ಥಕಪಡಿಸಿಕೊಳ್ಳಬೇಕು.

ಸರ್ವೋಪನಿಷದೋ ಗಾವೋ
ದೋಗ್ಧಾ ಗೋಪಾಲನಂದನಃ ।
ಪಾರ್ಥೋ ವತ್ಸಃ ಸುಧೀರ್ಭೋಕ್ತಾ
ದುಗ್ಧಂ ಗೀತಾಮೃತಂ ಮಹತ್ ॥

—— 0 ——

# ಗೀತೆಯ ಸಂದೇಶ

ಲೇಖಕಿ :— ಶ್ರೀಮತಿ ವೇದವಲ್ಲಿ

ಭಗವದ್ಗೀತೆಯು ಹಿಂದೂಧರ್ಮದ ಒಂದು ಮಹಾಗ್ರಂಥ, ಇದರಲ್ಲಿ ತತ್ತ್ವವಿಚಾರವು ವಿಶದವಾಗಿಯೂ, ವಿವರವಾಗಿಯೂ ಉಪದೇಶಿಸಲ್ಪಟ್ಟಿದೆ. ವ್ಯಾಸಮಹರ್ಷಿಯು ಬಾಳಿನ ಮಹಾ ಸಿದ್ಧಾಂತಗಳನ್ನು ಭಗವದ್ಗೀತೆಯ ಮೂಲಕ ಸರ್ವರಿಗೂ ಉಪದೇಶ ಮಾಡಿದ್ದಾರೆ. ಅವರು ರಚಿಸಿರುವ ಮಹಾಭಾರತದ ಮಧ್ಯದಲ್ಲಿ ಭಗವದ್ಗೀತೆಯ ಉಪದೇಶ ಅಡಗಿದೆ. ಆದ್ದರಿಂದ ಭಗವದ್ಗೀತೆಯ ಉಪದೇಶಗಳನ್ನು ತಿಳಿಯಬೇಕಾದರೆ ಅದಕ್ಕೆ ಹಿನ್ನಲೆಯಾಗಿ ಮಹಾಭಾರತದ ಕಥೆಯನ್ನು ಸ್ವಲ್ಪಮಟ್ಟಿಗೆ ತಿಳಿಯಬೇಕು. ಪಾಂಡು ಮತ್ತು ಧೃತರಾಷ್ಟ್ರ ಎಂಬ ಇಬ್ಬರು ಸಹೋದರರ ಮಕ್ಕಳುಗಳಲ್ಲಿ ಕಲಹವುಂಟಾಗಿ ಅದು ಕೊನೆಗೆ ಕುರುಕ್ಷೇತ್ರ ಮಹಾಯುದ್ಧದಲ್ಲಿ ಮುಕ್ತಾಯಗೊಳ್ಳುತ್ತದೆ. ಪಾಂಡುವಿಗೆ ಯುಧಿಷ್ಠಿರ, ಭೀಮ, ಅರ್ಜುನ, ನಕುಲ ಮತ್ತು ಸಹದೇವರೆಂಬ ಐದು ಮಂದಿ ಮಕ್ಕಳಿದ್ದರು. ಧೃತರಾಷ್ಟ್ರನಿಗೆ ದುರ್ಯೋಧನನೇ ಆದಿಯಾಗಿ ನೂರುಜನ ಮಕ್ಕಳಿದ್ದರು. ದುರ್ಯೋಧನನು ಪಾಂಡವರನ್ನು ಮೋಸದಿಂದ ಪಗಡೆ ಆಟದಲ್ಲಿ ಸೋಲಿಸಿ, ಅವರನ್ನು ರಾಜ್ಯಭ್ರಷ್ಟರನ್ನಾಗಿ ಮಾಡಿ, ವನವಾಸಕ್ಕೆ ಕಳುಹಿಸುತ್ತಾನೆ. ವನವಾಸದ ಅವಧಿ ಮುಗಿದ ಮೇಲೆ ಅವರಿಗೆ ಧರ್ಮ ಪ್ರಾಪ್ತವಾದ ರಾಜ್ಯವನ್ನು ಕೊಡಲು ಒಪ್ಪದೆ ನಿರಾಕರಿಸುತ್ತಾನೆ. ಇದರಿಂದ ಯುದ್ಧವು ಅನಿವಾರ್ಯವಾಗಿ ನಡೆಯಬೇಕಾಗುತ್ತದೆ. ಪಾಂಡವರ ಸೋದರಮಾವನಾದ ಶ್ರೀ ಕೃಷ್ಣನು ಇಬ್ಬರಿಗೂ ಸಂಧಾನಮಾಡಿ ಯುದ್ಧನಿಲ್ಲಿಸಲು ಪ್ರಯತ್ನಿಸುತ್ತಾನೆ. ಆದರೆ ಹಠವಾದಿಯಾದ ದುರ್ಯೋಧನನು ಅದಕ್ಕೆ ಸ್ವಲ್ಪವೂ ಅವಕಾಶಕೊಡುವುದಿಲ್ಲ. ಕೊನೆಗೆ ಕುರುಕ್ಷೇತ್ರದಲ್ಲಿ ಪಾಂಡವರಿಗೂ ಕೌರವರಿಗೂ ಘೋರವಾದ ಯುದ್ಧವು ನಡೆಯುತ್ತದೆ. ಕೌರವರು ಶ್ರೀ ಕೃಷ್ಣನನ್ನು ಸೈನ್ಯ ಬಲ ಯಾಚಿಸಿದ್ದರಿಂದ ಅವರಿಗೆ ಅದು ಲಭಿಸುತ್ತದೆ. ಮತ್ತು ಪಾಂಡವರು ಶ್ರೀ ಕೃಷ್ಣನೇ ತಮಗೆ ಸಹಾಯ ಮಾಡಬೇಕೆಂದು ಅವನಲ್ಲಿ ಶರಣಾಗುವುದರಿಂದ ಅವರಿಗೆ ಶ್ರೀ ಕೃಷ್ಣ ತಾನೇ ಸ್ವಂತವಾಗಿ ನಿಂತು ಸಹಾಯ ಮಾಡುತ್ತಾನೆ. ಅರ್ಜುನನ ರಥದಲ್ಲಿ ಕುಳಿತು, ಅವನ ಕುದುರೆಗಳ ಲಗಾಮನ್ನು ಹಿಡಿದು ಅವನಿಗೆ ತಾನೇ ಸಾರಥಿಯಾಗಿ ನಿಂತು ಸಹಾಯ ಮಾಡುತ್ತಾನೆ.

ಯುದ್ಧದಲ್ಲಿ ಧರ್ಮಿಷ್ಠರಾದ ಪಾಂಡವರಿಗೆ ಗೆಲುವೂ ಅಧರ್ಮನಿರತರಾದ ಕೌರವರಿಗೆ ಸೋಲೂ ಉಂಟಾಗುತ್ತದೆ. ಪಾಂಡವರು ತಮ್ಮ ಧರ್ಮಪ್ರಾಪ್ತವಾದ ರಾಜ್ಯವನ್ನು ಮತ್ತೆ ಪಡೆಯುತ್ತಾರೆ. ಧರ್ಮಕ್ಕೆ ಜಯವೂ, ಅಧರ್ಮಕ್ಕೆ ಸೋಲೂ ಉಂಟಾಗುತ್ತದೆ. ಇದು ಮಹಾಭಾರತದ ಕಥೆಯ ಸಾರಾಂಶ.

ಮಹಾಭಾರತದ ಕಥೆಯನ್ನು ವ್ಯಾಸರು 18 ಪರ್ವಗಳಲ್ಲಿ ಬಹಳ ವಿಸ್ತಾರವಾಗಿ ವರ್ಣಿಸಿದ್ದಾರೆ. ಅನೇಕ ಕಡೆಗಳಲ್ಲಿ ಧರ್ಮಾಧರ್ಮ ವಿಚಾರಗಳನ್ನು ತರ್ಕ, ವಿತರ್ಕಗಳ ಮೂಲಕ ಚರ್ಚೆಮಾಡಿ ಮಹತ್ತರವಾದ ಉಪದೇಶಗಳನ್ನು ನೀಡಿದ್ದಾರೆ. ಸ್ವಾರಸ್ಯವಾದ ಕಥೆಯ ರೂಪದಲ್ಲಿ ಅಲ್ಲಲ್ಲಿ ಬಾಳಿಗೆ ಮಹಾ ತೊಡಕಾದ ಸಂದೇಹಗಳನ್ನೆಲ್ಲಾ ಪರಿಹರಿಸಿದ್ದಾರೆ. ಮಹಾಭಾರತದಲ್ಲಿರುವ ಈ ಅನಂತ ಉಪದೇಶಗಳಲ್ಲಿ ಭಗವದ್ಗೀತೆಯು ಅತಿ ಮುಖ್ಯವಾದ ಉಪದೇಶವಾಗಿದೆ. ಕುರುಕ್ಷೇತ್ರ ಯುದ್ಧವು ಪ್ರಾರಂಭವಾಗುವುದಕ್ಕೆ ಮೊದಲು ಅರ್ಜುನನಿಗೆ, ಅವನ ಸಾರಥಿ ಶ್ರೀ ಕೃಷ್ಣ ಬೋಧಿಸಿದ ಉಪದೇಶವೇ ಭಗವದ್ಗೀತೆಯು. ಯುದ್ಧ ಭೂಮಿಯಲ್ಲಿ ಕೃಷ್ಣಾರ್ಜುನ ಸಂವಾದ ರೂಪದಲ್ಲಿ ಗೀತೆಯ ಉಪದೇಶವು ಪ್ರಾರಂಭವಾಗುತ್ತದೆ.

ಮಹಾಭಾರತದಲ್ಲೂ ಮತ್ತು ಭಾಗವತ ಮಹಾಪುರಾಣದಲ್ಲೂ ಕೃಷ್ಣಾವತಾರದ ವರ್ಣನೆಯಿದೆ. ಶ್ರಿಯಃಪತಿಯೂ, ಸಮಸ್ತ ಹೇಯಗುಣರಹಿತನೂ, ಅನಂತ ಕಲ್ಯಾಣ ಗುಣಭೂತನೂ ಪರಬ್ರಹ್ಮನೂ, ಪುರುಷೋತ್ತಮನೂ ಆದ ಶ್ರೀ ಮನ್ನಾರಾಯಣನೂ, ಬ್ರಹ್ಮನಿಂದ ಹಿಡಿದು ಸ್ಥಾವರಾಂತವಾದ ಸಮಸ್ತ ಜಗತ್ತನ್ನು ಸೃಷ್ಟಿಸಿ, ಬ್ರಹ್ಮಾದಿದೇವರಿಗೂ ಮಾನವರಿಗೂ ಧ್ಯಾನ ಆರಾಧನೆಗೆ ನಿಲುಕದೆ, ಅವರ ಕಣ್ಣಿಗೆ ಗೋಚರಿಸದೆ, ತನ್ನ ದಿವ್ಯ ಸ್ವರೂಪದೊಂದಿಗೆ ಪ್ರಕಾಶಿಸುತ್ತಿರುವನು. ಆದರೆ ಅವನು ಅಪಾರ ಕರುಣಾಮೂರ್ತಿಯಾಗಿರುವುದರಿಂದ ತನ್ನ ದಿವ್ಯ ಸ್ವರೂಪವನ್ನು

ಬಿಡದೆ ಆಗಾಗ ಅಯಾ ದೇವಮನುಷ್ಯಾದಿಗಳಿಗೆ ಸಜಾತೀಯವಾದ ಸ್ವರೂಪವನ್ನು ಪಡೆದು ಆಯಾ ಲೋಕಗಳಲ್ಲಿ ಮತ್ತೆ ಮತ್ತೆ ಅವತರಿಸಿ ಆಯಾ ದೇವಮನುಷ್ಯಾದಿಗಳಿಂದ ಆರಾಧಿತನಾಗುತ್ತಾನೆ ಮತ್ತು ಅವರವರ ಇಚ್ಛೆಗೆ ಅನುಸಾರವಾಗಿ ಅವರವರಿಗೆ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷರೂಪ ಫಲಗಳನ್ನು ಕರುಣಿಸುತ್ತಾನೆ ಅದೇ ಭಗವಂತನು ಭೂಭಾರವನ್ನು ಹೋಗಲಾಡಿಸುವ ನೆಪದಿಂದ ಕೃಷ್ಣನಾಗಿ ಅವತರಿಸಿ ಸಮಸ್ತ ಮಾನವರ ಮನಸ್ಸಿಗೂ ಕಣ್ಣಿಗೂ ಸಂತೋಷಪ್ರದವಾದ ಅನೇಕ ದಿವ್ಯ ಲೀಲೆಗಳನ್ನು ಮಾಡುತ್ತಾ ಪೂತನಿ, ಶಕಟ, ಯಮಳಾರ್ಜುನ, ಅರಿಷ್ಟ, ಪ್ರಲಂಭ, ಧೇನುಕಾಸುರ, ಕಾಳೀಯ, ಕೇಶೀ, ಕುವಲಯಾ ಪೀಡ, ಚಾಣೂರ, ಮುಷ್ಟಿಕ, ಕೋಸಲ ಮತ್ತು ಕಂಸನೇ ಮುಂತಾದ ಅನೇಕ ಅಸುರರ ವಧೆಯನ್ನು ಮಾಡಿ ಅವರನ್ನು ಉದ್ಧಾರ ಮಾಡಿದನು ಮತ್ತು ತನ್ನ ನಿರತಿಶಯ ಸೌಂದರ್ಯವನ್ನು ಸೌಶೀಲ್ಯಾದಿ ಕಲ್ಯಾಣ ಗುಣ ಸಮೂಹಗಳನ್ನು ಪ್ರಕಟಿಸುತ್ತಾ ಅಕ್ರೂರ, ಮಾಲಾಕಾರ ಮುಂತಾದವರನ್ನು ಪರಮ ಭಕ್ತರನ್ನಾಗಿ ಮಾಡಿದನು ಎಂದು ಭಾಗವತ ಮಹಾ ಪುರಾಣವು ತಿಳಿಸುತ್ತದೆ

ಹಾಗೇಯೇ ಪಾಂಡು ಪುತ್ರನಾದ ಅರ್ಜುನನನ್ನು ಯುದ್ಧ ಮಾಡುವಂತೆ ಪ್ರೋತ್ಸಾಹಿಸುವ ವ್ಯಾಜದ ಮೂಲಕ ಪರಮ ಪುರುಷಾರ್ಥವಾದ ಮೋಕ್ಷಕ್ಕೆ ಸಾಧನವಾದ, ವೇದಾಂತದಲ್ಲಿ ವರ್ಣಿಸಿರುವ, ಕರ್ಮಯೋಗ, ಜ್ಞಾನ ಯೋಗಗಳ ಮೂಲಕ ಸಾಧಿಸಲ್ಪಡುವ, ತನ್ನ ವಿಷಯವಾದ ಭಕ್ತಿಯೋಗ, ಪ್ರಪತ್ತಿ ಯೋಗಗಳನ್ನು ಮಹಾಭಾರತದಲ್ಲಿರುವ ಭಗವದ್ಗೀತೆಯ ಮೂಲಕ ಪ್ರಕಟಿಸಿದ್ದಾನೆ ಕುರುಕ್ಷೇತ್ರ ರಣರಂಗದಲ್ಲಿ ಕೌರವರೂ, ಪಾಂಡವರೂ ಯುದ್ಧರಾಗಿದ್ದಾಗ ಪುರುಷೋತ್ತಮನಾದ ಸರ್ವೇಶ್ವರನು ಶರಣಾಗತ ವತ್ಸಲನಾಗಿ, ತಾನೇ ಅರ್ಜುನನಿಗೆ ಸಾರಥಿಯಾಗಿ ನಿಂತು, ಜಗತ್ತಿನ ಸಮಸ್ತಮಾನವರಿಗೂ ಉಪಕಾರ ಮಾಡುವುದಕ್ಕಾಗಿ ಭಗವದ್ಗೀತೆಯನ್ನು ಅರ್ಜುನನಿಗೆ ಉಪದೇಶ ಮಾಡಿದ್ದಾನೆ

ಭಗವದ್ಗೀತೆಯಲ್ಲಿ ಒಟ್ಟು 18 ಅಧ್ಯಾಯಗಳಿಗೆವೆ ಈ 18 ಅಧ್ಯಾಯಗಳನ್ನು ವ್ಯಾಸಂಗಮಾಡುವವರ ಅನುಕೂಲಕ್ಕಾಗಿ ಮೂದರು ಷಟ್ಕಗಳಾಗಿ ವಿಭಾಗಿಸಿ ಅರ್ಥ, ತಾತ್ಪರ್ಯಗಳು ಹೇಳಲ್ಪಟ್ಟಿವೆ ನಾರಾಯಣನೇ ಪರಬ್ರಹ್ಮನೆಂದೂ, ಅವನನ್ನು ಹೊಂದುವ ಪರಮ ಪುರುಷಾರ್ಥವನ್ನು ಸಲು ಭಕ್ತಿಯೋಗವೇ ಮಾರ್ಗವೆಂದೂ, ಭಕ್ತಿಯೋಗವನ್ನು ಆಚರಿಸಲು ಕರ್ಮಯೋಗ, ಜ್ಞಾನಯೋಗಗಳ ಸಹಾಯ ಅತ್ಯಗತ್ಯವೆಂದೂ ಶ್ರೀಕೃಷ್ಣ ಉಪದೇಶ ಮಾಡಿದ್ದಾನೆ. ಅಂದರೆ ಮಾನವನು ಮೊದಲು ಕರ್ಮಯೋಗದ ಮೂಲಕ ತನ್ನ ಮನಸ್ಸನ್ನು ನಿರ್ಮಲಗೊಳಿಸಿ ಕೊಳ್ಳಬೇಕು, ಅನಂತರ ಜ್ಞಾನ ಯೋಗದ ಮೂಲಕ ಆತ್ಮ ಸಾಕ್ಷಾತ್ಕಾರ ಸಿದ್ಧಿಯನ್ನು ಪಡೆಯಬೇಕು, ತನ್ಮೂಲಕ ಭಗವಂತನಲ್ಲಿ ಭಕ್ತಿಯನ್ನು ಬೆಳೆಸಿಕೊಂಡು ಅವನಲ್ಲಿ ಅತಿಪ್ರೀತಿಯನ್ನೂ ಶ್ರದ್ಧೆಯನ್ನೂ ಹೊಂದಿ, ಕೊನೆಗೆ ಅವನಿಗೆ ಶರಣಾಗಿ ಅವನನ್ನು ಹೊಂದಬೇಕು ಎಂದು ಶ್ರೀಕೃಷ್ಣ ಭಗವದ್ಗೀತೆಯಲ್ಲಿ 18 ಅಧ್ಯಾಯಗಳಿಂದ ವಿವರಿಸಿ ತಿಳಿಸಿದ್ದಾನೆ



ಕರ್ಮಯೋಗ ಜ್ಞಾನಯೋಗಗಳೆರಡೂ ಅಂಗಗಳೆಂದೂ ಭಗವದ್ಗೀತೆಯಲ್ಲಿ 18 ಅಧ್ಯಾಯಗಳಿಂದ ವಿವರಿಸಿ ತಿಳಿಸಿರುತ್ತಾನೆ. ಅದರಲ್ಲಿ ಮೊದಲನೆಯ ಆರು ಅಧ್ಯಾಯಗಳಲ್ಲಿ ಕರ್ಮಯೋಗ ಮತ್ತು ಜ್ಞಾನಯೋಗ ನಿಷ್ಠೆಯಿಂದ ಕೂಡಿದ ಆತ್ಮ ಸಾಕ್ಷಾತ್ಕಾರವು ತಿಳಿಸಲ್ಪಟ್ಟಿದೆ. ಎರಡನೆಯ ಷಟ್ಕದಲ್ಲಿ ಅಂದರೆ 7 ರಿಂದ 12 ವರೆಗಿನ ಆರು ಅಧ್ಯಾಯಗಳಲ್ಲಿ ಭಗವಂತನ ಯಥಾರ್ಥ ಸ್ವರೂಪವು ವರ್ಣಿಸಲ್ಪಟ್ಟಿದೆ ಮತ್ತು ಅದನ್ನು ಹೊಂದುವುದಕ್ಕೆ ಮಾರ್ಗವಾದ ಕರ್ಮಯೋಗ ಜ್ಞಾನ ಯೋಗಗಳಿಂದ ಸಿದ್ಧಿಸುವ ಭಕ್ತಿಯೋಗವು ವರ್ಣಿಸಲ್ಪಟ್ಟಿದೆ ಮತ್ತು ಮೂರನೆಯ ಷಟ್ಕದಲ್ಲಿ ಅಂದರೆ 13 ನೇ ಅಧ್ಯಾಯದಿಂದ 18 ನೇ ಅಧ್ಯಾಯಗಳಲ್ಲಿ ಪ್ರಕೃತಿ ಪುರುಷರಿಂದ ಕೂಡಿರುವ ಜಗತ್ತಿನ ಸ್ವರೂಪವೂ, ಸರ್ವೇಶ್ವರನ ಸ್ವರೂಪವೂ ವಿವರಿಸಲ್ಪಟ್ಟಿದೆ ಮತ್ತು ಕರ್ಮಜ್ಞಾನ ಭಕ್ತಿಯೋಗಗಳು ಈಶ್ವರನನ್ನು ಹೊಂದಲು ಮಾರ್ಗಗಳೆಂಬುದನ್ನೂ ವಿಶದವಾಗಿ ಹೇಳಿದೆ

## ಅಧ್ಯಾಯ ಒಂದು

ಕುರುಕ್ಷೇತ್ರ ರಣರಂಗದಲ್ಲಿ ಪಾಂಡವರಿಗೂ ಕೌರವರಿಗೂ ನಡೆದ ಯುದ್ಧದ ವರ್ಣನೆಯೊಂದಿಗೆ ಭಗವದ್ಗೀತೆಯು ಪ್ರಾರಂಭವಾಗುತ್ತದೆ. ಅಂತಃಬಹಿರ್ಚಕ್ಷುಸ್ಸುಗಳೆರಡೂ ಕುರುಡಾಗಿ ತನ್ನ ಮಕ್ಕಳಾದ ಕೌರವರಿಗೇ ಜಯವು ಉಂಟಾಗಬೇಕೆಂಬ ಮೋಹವನ್ನು ಹೊಂದಿದ ಧೃತರಾಷ್ಟ್ರನು ಸಂಜಯನನ್ನು ಕುರಿತು ಮಾಡಿದ ಪ್ರಶ್ನೆಗೆ ಉತ್ತರವಾಗಿ ಸಂಜಯನು ಯುದ್ಧದ ಸನ್ನಾಹವನ್ನು ಅವನಿಗೆ ವಿವರಿಸುತ್ತಾನೆ.

**ಕುರುಕ್ಷೇತ್ರದ ಯುದ್ಧ – (ಶ್ಲೋಕಗಳು 1 ರಿಂದ 26)**

ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧವನ್ನು ಮಾಡುವ ಇಚ್ಛೆಯಿಂದ ಸೇರಿದ ನನ್ನ ಮಕ್ಕಳೂ ಪಾಂಡವರೂ ಏನೂ ಮಾಡಿದರು ಎಂದು ಧೃತರಾಷ್ಟ್ರನ ಪ್ರಶ್ನೆಗೆ ಉತ್ತರವಾಗಿ ಸಂಜಯನು ಗೀತೆಯ ಎರಡನೆಯ ಶ್ಲೋಕದಿಂದ ಕುರುಕ್ಷೇತ್ರ ಯುದ್ಧದ ಸನ್ನಾಹವನ್ನೂ ಮತ್ತು ರಣರಂಗದಲ್ಲಿ ಅರ್ಜುನನಿಗೆ ಉಂಟಾದ ವಿಷಾದವನ್ನು ವರ್ಣಿಸುತ್ತಾನೆ. ಕೌರವ ನಾಯಕನಾದ ದುರ್ಯೋಧನನು ತನ್ನ ಸೈನ್ಯದೊಂದಿಗೆ ಯುದ್ಧಮಾಡಲು ವ್ಯೂಹವಾಗಿ ನಿಂತಿದ್ದ ಪಾಂಡವರ ಸೇನೆಯನ್ನು ನೋಡಿ ಭಯಗ್ರಸ್ತನಾಗಿ ಕ್ಷಣವೇ ಆಚಾರ್ಯರಾದ ದ್ರೋಣಾಚಾರ್ಯರ ಬಳಿಗೆ ಬಂದು ಅವರನ್ನು ಕುರಿತು ಹೀಗೆಂದನು–"ಆಚಾರ್ಯರೇ! ಪಾಂಡವರ ದೊಡ್ಡ ಸೈನ್ಯವನ್ನು ನೋಡಿರಿ. ನಿಮ್ಮ ಬುದ್ಧಿವಂತನಾದ ಶಿಷ್ಯನೂ, ದ್ರುಪದ ಪುತ್ರನೂ ಧೃಷ್ಟದ್ಯುಮ್ನನೇ ಇದನ್ನು ನಡೆಸುತ್ತಿದ್ದಾನೆ ಧನುರ್ವಿದ್ಯಾವಿಶಾರದರೂ, ಯುದ್ಧದಲ್ಲಿ ಭೀಮಾರ್ಜುನರಿಗೆ ಸಮಾನರೂ ಆದ ಅನೇಕ ಶೂರರು ಆ ಸೈನ್ಯದಲ್ಲಿ ಇದ್ದಾರೆ ಯುಯುಧಾನ, ವಿರಾಟರಾಜ, ದ್ರುಪದ, ಧೃಷ್ಟಕೇತು, ಚೇಕಿತಾನ, ವೀರ್ಯವಂತನಾದ ಕಾಶಿರಾಜ, ಪುರುಜಿತ್ತು, ಕುಂತಿಭೋಜ, ನರ ಶ್ರೇಷ್ಠನಾದ ಶೈಬ್ಯ, ಪರಾಕ್ರಮಶಾಲಿಯಾದ ಯುಧಾಮನ್ಯು, ಧೀರನಾದ ಉತ್ತಮೌಜಸ್ಸು, ಸುಭದ್ರೆಯ ಮಗ ಮತ್ತು ದ್ರೌಪದಿಯ ಮಕ್ಕಳು ಮುಂತಾಗಿ ಎಲ್ಲರೂ ಇರುವರು ಮತ್ತು ಇವರೆಲ್ಲರೂ ಮಹಾರಥರಾಗಿದ್ದಾರೆ

ಇನ್ನು ನಮ್ಮ ಪಕ್ಷದಲ್ಲಿ ಪರಾಕ್ರಮಶಾಲಿಗಳಾದ ನನ್ನ ಸೈನ್ಯದ ನಾಯಕರುಗಳನ್ನು ನಿಮ್ಮ ಅವಗಾಹನೆಗೆ ತರುವ ಸಲುವಾಗಿ ಹೇಳುತ್ತೇನೆ ಅವರನ್ನು ತಿಳಿದುಕೊಳ್ಳಿರಿ. ನೀವು, ಭೀಷ್ಮ, ಕರ್ಣ, ಯುದ್ಧದಲ್ಲಿ ಜಯಶಾಲಿ ಎನಿಸಿದ ಕೃಪ, ಅಶ್ವತ್ಥಾಮ, ವಿಕರ್ಣ, ಸೌಮದತ್ತಿ ಮತ್ತು ಜಯದ್ರಥ ಮುಂತಾದ ನನಗೋಸ್ಕರ ಪ್ರಾಣತ್ಯಾಗ ಮಾಡಲು ಸಿದ್ಧರಾಗಿರುವ ಇನ್ನೂ ಅನೇಕ ಶೂರರೂ ಇದ್ದಾರೆ. ಇವರೆಲ್ಲಾ ಅನೇಕ ವಿಧವಾದ ಶಸ್ತ್ರ ಪ್ರಹಾರಗಳಲ್ಲಿ ನಿಪುಣರು ಮತ್ತು ಯುದ್ಧ ಮಾಡುವ ಚಾತುರ್ಯವುಳ್ಳವರು ಹಾಗಿದ್ದರೂ ನನ್ನ ಮನಸ್ಸಿಗ ಆಗಾಗ್ಯೆ ನಮ್ಮ ಸೇನೆಗಿಂತ ಪಾಂಡವರ ಸೇನೆಯೇ ಹೆಚ್ಚು ಬಲವುಳ್ಳದ್ದೋ ಎಂಬ ಭಯವು ಬರಲು ಕಾರಣವೇನೋ ತಿಳಿಯಲಿಲ್ಲ? ಸರಿಯಾಗಿ ನೋಡಿದರೆ ಭೀಷ್ಮನಿಂದ ರಕ್ಷಿತವಾದ ನಮ್ಮ ಸೇನೆಯು ಅಪರಿಮಿತವಾದುದಾಗಿದೆ ಮತ್ತು ಭೀಮನಿಂದ ರಕ್ಷಿತವಾದ ಪಾಂಡವರ ಸೇನೆಯು ಪರಿಮಿತಿಯುಳ್ಳದ್ದಾಗಿದೆ ಆದ್ದರಿಂದ ನೀವೆಲ್ಲರೂ ಸಂತೋಷದಿಂದಲೂ ಧೈರ್ಯದಿಂದಲೂ ಸೇನೆಯ ಸಮಸ್ತ ವ್ಯೂಹ ದ್ವಾರಗಳಲ್ಲಿ ನಿಮನಿಮಗೆ ಏರ್ಪಟ್ಟ ಸ್ಥಳಗಳಲ್ಲಿ ಇದ್ದುಕೊಂಡು ಭೀಷ್ಮನ ಆಜ್ಞೆಯನ್ನು ಅಲಕ್ಷ್ಯಮಾಡದೆ ಶಿರಸಾವಹಿಸಿ ಅವನನ್ನು ರಕ್ಷಿಸಿರಿ ಎಂದನು

ದುರ್ಯೋಧನನು ಹೀಗೆ ದ್ರೋಣಾಚಾರ್ಯರಿಗೆ ಅರಿಕೆ ಮಾಡಿಕೊಂಡ ತಕ್ಷಣವೇ ಕುರುವೃದ್ಧ ಪಿತಾಮಹನೂ ಪರಾಕ್ರಮಶಾಲಿಯೂ ಆದ ಭೀಷ್ಮನು ದುರ್ಯೋಧನನ್ನು ಉತ್ಸಾಹಗೊಳಿಸುವಂತೆ ದೊಡ್ಡದೊಂದು ಸಿಂಹನಾದವನ್ನು ಮಾಡಿ ಶಂಖವನ್ನು ಊದಿದನು ಅನಂತರ ಕೌರವ ಸೈನದಲ್ಲಿ ಶಂಖಗಳೂ, ಭೇರಿಗಳೂ, ಡೋಲು, ಮೃದಂಗ, ಗೋಮುಖ ಮುಂತಾದ ವಾದ್ಯಗಳೆಲ್ಲಾ ಒಂದೇ ಸಲ ಮೊಳಗಿದವು ಮತ್ತು

ಆ ಶಬ್ದವೆಲ್ಲಾ ಒಂದಾಗಿ ಸೇರಿ ಪ್ರಬಲವಾದ ಧ್ವನಿ ಉಂಟಾಯಿತು.

ಇಷ್ಟರಲ್ಲಿ ಬಿಳೀ ಕುದುರೆಗಳನ್ನು ಕಟ್ಟಿರುವ ಮಹಾರಥದಲ್ಲಿ ಕುಳಿತಿದ್ದ ಅರ್ಜುನನೂ ಅವನ ಸಾರಥಿಯಾದ ಕೃಷ್ಣನೂ ತಮ್ಮ ತಮ್ಮ ದಿವ್ಯಶಂಖಗಳನ್ನು ಊದಿದರು ಶ್ರೀ ಕೃಷ್ಣನು ಪಂಚ ಜನ್ಯವನ್ನೂ, ಅರ್ಜುನನು ದೇವದತ್ತವನ್ನೂ, ಮಹಾ ಪರಾಕ್ರಮವುಳ್ಳ ಭೀಮನು ಪೌಂಡ್ರವೆಂಬ ಮಹಾಶಂಕವನ್ನೂ ಊದಿದನು. ಕುಂತೀಪುತ್ರನಾದ ಧರ್ಮರಾಜನು ಅನಂತ ವಿಜಯವೆಂಬ ಶಂಖವನ್ನೂ ನಕುಲ ಸಹದೇವರುಗಳು ಸುಘೋಷ-ಮಣಿಪುಷ್ಪಕಗಳೆಂಬ ಶಂಖಗಳನ್ನೂ ಊದಿದರು ಎಲೈ ಮಹರಾಜನೇ ! ಇದೇ ರೀತಿಯಲ್ಲಿ ಮಹಾಬಿಲ್ಲುಗಾರನಾದ ಕಾಶೀರಾಜನೂ, ಮ ಹಾ ರ ಥ ನಾ ದ ಶಿ ಖಂ ಡಿ ಯೂ, ದೃಷ್ಟದ್ಯುಮ್ನನೂ, ವಿರಾಟನೂ, ಜಯಿಸಲಶಕ್ಯನಾದ ಸಾತ್ಯಕಿಯೂ, ದ್ರುಪದನೂ, ದ್ರೌಪದಿಯ ಪುತ್ರರೂ, ಸುಭದ್ರಾ ಪುತ್ರನಾದ ವೀರ ಅಭಿಮನ್ಯುವೂ-ಇವರೆಲ್ಲರೂ ನಾನಾ ಕಡೆ ಗಳಿಂದ ಬೇರೆ ಬೇರೆಯಾಗಿ ತಮ್ಮ ತಮ್ಮ ಶಂಖಗಳನ್ನು ಊದಿದರು. ಹೀಗೆ ಪಾಂಡವರ ಕಡೆಯಿಂದ ಒಂದಾಗಿ ಸೇರಿ ಬಂದ ಈ ಶಂಖಗಳ ಧ್ವನಿಯು ಭೂಮ್ಯಾಕಾಶಗಳಲ್ಲೆಲ್ಲಾ ಪ್ರತಿಧ್ವನಿ ಮಾಡುತ್ತಾ ಕೌರವರ ಹೃದಯವನ್ನು ನಡುಗಿಸಿತು.

ಅನಂತರ ಕಪಿಧ್ವಜನಾದ ಅರ್ಜುನನು ಯುದ್ಧ ಸನ್ನದ್ಧ ರಾಗಿ ತನ್ನ ಮುಂದೆ ನಿಂತಿರುವ ಧೃತರಾಷ್ಟ್ರಪುತ್ರರಾದ ಕೌರವರನ್ನು ನೋಡಿ, ಶಸ್ತ್ರಗಳ ಪ್ರಯೋಗಕ್ಕೆ ಸಮಯವು ಬಂದದ್ದರಿಂದ ಧನುಸ್ಸನ್ನು ಎತ್ತಿ ಹಿಡಿದು, ಸಾರಥಿಯಾದ ಶ್ರೀ ಕೃಷ್ಣನನ್ನು ಕುರಿತು ಹೀಗೆಂದನು "ಕೃಷ್ಣ" ಈ ಯುದ್ಧದಲ್ಲಿ ನಾನು ಯಾರೊಂದಿಗೆ ಯುದ್ಧ ಮಾಡಬೇಕೋ ಅಂತಹ, ಯುದ್ಧ ಮಾಡಬೇಕೆಂಬ ಇಚ್ಛೆಯಿಂದ ಮುಂದೆ ಬಂದು ನಿಂತಿರುವರನ್ನೆಲ್ಲಾ ನಾನು ನೋಡುವಂತೆ ಈ ಎರಡು ಸೇನೆಗಳ ಮಧ್ಯೆ ರಥವನ್ನು ತಂದುನಿಲ್ಲಿಸು. ಮುಖ್ಯವಾಗಿ ಯಾರು ಯಾರು ದುರ್ಬುದ್ಧಿಯಾದ ದುರ್ಯೋಧನನಿಗೆ ಈ ಯುದ್ಧದಲ್ಲಿ ಪ್ರಿಯವನ್ನು ಉಂಟುಮಾಡಬೇಕೆಂದು ಉತ್ಸಾಹದಿಂದ ಇಲ್ಲಿ ಬಂದು ಸೇರಿರುವರೋ ಅಂತಹ ಯುದ್ಧ ಮಾಡಲ ಪೇಕ್ಷೆಯುಳ್ಳವ ರನ್ನು ನಾನು ನೋಡಬೇಕು ಎಂದನು

ಅರ್ಜುನನು ಹೀಗೆ ಹೇಳಲು ಶ್ರೀ ಕೃಷ್ಣನು ಎರಡು ಸೈನ್ಯ ಗಳ ಮಧ್ಯೆ ಭೀಷ್ಮ ದ್ರೋಣರೇ ಮುಂತಾಗಿ ಸಮಸ್ತ ರಾಜರುಗಳ ಮುಂದೆ ತನ್ನ ಉತ್ತಮವಾದ ರಥವನ್ನು ನಿಲ್ಲಿಸಿ, "ಅರ್ಜುನನೇ ! ಯುದ್ಧಕ್ಕಾಗಿ ಬಂದು ನೇರಿರುವ ಕೌರವರನ್ನೆಲ್ಲಾ ನೋಡು" ಎಂದನು

ಆದರೆ ಆಗ ಅರ್ಜುನನು ತನ್ನ ಮುಂದೆ ಕಂಡದ್ದೇನು ? ತನ್ನ ತಾತ ಭೀಷ್ಮನೂ, ಆಚಾರ್ಯ ದ್ರೋಣನೂ ತನ್ನ ಮುಂದೆ ಯುದ್ಧಕ್ಕಾಗಿ ನಿಂತಿದ್ದಾರೆ. ಒಬ್ಬರನೊಬ್ಬರು ಯುದ್ಧದಲ್ಲಿ ಕೊಲ್ಲುವುದಕ್ಕಾಗಿ ಎರಡು ಸೈನ್ಯಗಳಲ್ಲಿಯೂ ಬಂದು ನೆರೆದಿದ್ದ ತನ್ನ ಪಿತೃಗಳನ್ನೂ, ಪಿತಾಮಹರನ್ನೂ, ಗುರುಗಳನ್ನೂ ಸೋದರ ಮಾವಂದಿರನ್ನೂ, ಸಹೋದರರನ್ನೂ. ಮ ಕ್ಕ ಳ ನ್ನು , ಮಮ್ಮಕ್ಕಳನ್ನೂ, ಮಿತ್ರರನೂ , ಮಾವಂದಿರನ್ನೂ ಸ್ನೇಹಿತ ರನ್ನೂ ನೋಡಿದನು

**ಅರ್ಜುನನ ಖಿನ್ನತೆ ಮತ್ತು ಶೋಕ—**

(ಶ್ಲೋಕಗಳು 27 ರಿಂದ 47)

ಅಲ್ಲಿ ಯುದ್ಧ ಮಾಡಲು ಸನ್ನದ್ಧರಾಗಿ ಬಂದು ನಿಂತಿದ್ದ ಆ ಸಮಸ್ತ ಬಂಧುಗಳನ್ನೂ ನೋಡಿ ಅರ್ಜುನ ಅತ್ಯಂತ ಕನಿಕರ ಗೊಂಡವನಾಗಿ ಶೋಕಗೊಂಡನು ತನ್ನ ಬಂಧು ಬಾಂಧವರನ್ನು ನೋಡುತ್ತಲೇ ಅವನ ಯಾವುದೋ ಅವ್ಯಕ್ತ ಶಕ್ತಿಗೆ ಅಧೀನ ನಾದಂತಾಗಿ ತನ್ನ ಜೀವಿತ ಕಾಲವನ್ನೆಲ್ಲಾ ಅವರೊಂದಿಗೆ ಒಡಗೂಡಿ ಬಾಳಿದ ಪ್ರೇಮದಿಂದ ಕನಿಕರ ಹೊಂದಿ ಶೋಕದಿಂದ ಕೃಷ್ಣನಿಗೆ ಹೀಗೆ ಹೇಳ ತೊಡಗಿದನು " ಕೃಷ್ಣಾ ! ಯುದ್ಧ ಮಾಡಬೇಕೆಂಬ ಅಭಿಲಾಷೆಯಿಂದ ಬಂದು ನೆರೆದಿರುವ ನನ್ನ ಬಂಧು ಜನರನ್ನು ನೋಡಿ ನನ್ನ ಅವಯವಗಳೆಲ್ಲಾ ಸಡಿಲ ವಾಗುತ್ತಿವೆ , ಮುಖವು ಬಾಡಿ ಬಾಯಿ ಒಣಗುತ್ತಿದೆ , ನನ್ನ ಶರೀರದಲ್ಲಿ ಕಂಪನವೂ ರೋಮಾಂಚವೂ ಉಂಟಾಗುತ್ತಿದೆ , ಇದೇನು ನನ್ನ ಗಾಂಡೀವ ಧನುಸ್ಸು ನನ್ನ ಕೈಯಿಂದ ಜಾರಿ ಬೀಳುತ್ತಿದೆ , ನನ್ನ ಚರ್ಮವೂ ಬಹಳವಾಗಿ ಸುಡುತ್ತಿವೆ ಎಲೈ ಕೇಶವ ! ನನಗೆ ನಿಲ್ಲಲೂ ಶಕ್ತಿಯಿಲ್ಲದಂತಾಗಿದ , ನನ್ನ ಮನಸ್ಸು ಭ್ರಾಂತಿಗೊಂಡು ನೆಲೆಯಿಲ್ಲದ ಸುತ್ತುತ್ತಿದೆ , ಎಲ್ಲೆಡ ಯಲ್ಲಿಯೂ ದುಶ್ಶಕುನಗಳು ಕಾಣಿಸುತ್ತಿವೆ.

ಹೀಗೆ ಶಾರೀರಕ ಮಾನಸಿಕ ಯಾತನೆಗಳಿಗೆ ಒಳಗಾಗಿ ಸ್ವಜನರನ್ನು ಯುದ್ಧದಲ್ಲಿ ಕೊಲ್ಲುವುದರಿಂದ ಯಾವ ಶ್ರೇಯಸ್ಸನ್ನೂ ನಾನು ನೋಡಲಾರೆನು ನನ್ನ ಎಲ್ಲ ಬಂಧುಗಳೂ ಸ್ನೇಹಿತರೂ ಕೊಲ್ಲಲ್ಪಟ್ಟ ಮೇಲೆ ಯುದ್ಧದಲ್ಲಿ ಜಯಹೊಂದಿ ರಾಜ್ಯವನ್ನು ಆಳುವುದರಿಂದ ಏನು ಪ್ರಯೋಜನ ? ಇಷ್ಟ ಬಂಧುಗಳೂ ಮಿತ್ರರೂ ಸತ್ತಮೇಲೆ ಬುದುಕು ಬೇಸರವಾಗುತ್ತದೆಯೇ ವಿನಃ ಸುಖವು ಲಭಿಸುವುದಿಲ್ಲ. ಆದ್ದರಿಂದ ನಾನು ಯುದ್ಧದಲ್ಲಿ ಜಯವನ್ನೂ ಕೋರುವುದಿಲ್ಲ ; ಸುಖವನ್ನೂ ಅಪೇಕ್ಷಿಸುವುದಿಲ್ಲ. ಗೋವಿಂದನೇ ನನಗೆ ರಾಜ್ಯದಿಂದಾಗಲಿ, ಭೋಗದಿಂದಾಗಲಿ ಅಥವ ಜೀವನ ಧಾರಣದಿಂದಾಗಲಿ ಏನು ಪ್ರಯೋಜನ ? ನಾನು ಯಾರಿಗೋಸ್ಕರ ಈ ರಾಜ್ಯ, ಭೋಗ, ಸುಖಾದಿಗಳನ್ನು ಅಪೇಕ್ಷಿಸುತ್ತೇನೆಯೋ ಆ ಬಂಧು ಬಾಂಧವರು, ಆಚಾರ್ಯರುಗಳು, ಪಿತೃಗಳು, ಮಕ್ಕಳು, ಪಿತಾಮಹರು, ಸೋದರ ಮಾವಂದಿರು, ಅತ್ತೆಯರು, ಮೊಮ್ಮಕ್ಕಳು, ಭಾವಮೈದಂದಿರು ಮುಂತಾಗಿ ಇತರ ನೆಂಟರು ಪ್ರಾಣವನ್ನೂ ಧನವನ್ನೂ ಲಕ್ಷಿಸದೆ ಯುದ್ಧ ಮಾಡಲು ಇಚ್ಛೆಹೊಂದಿ ಈ ರಣರಂಗದಲ್ಲಿ ಬಂದು ನಿಂತಿದ್ದಾರೆ. ಮದುಸೂದನ ! ನಾನು ಕೊಲ್ಲಲ್ಪಟ್ಟರೂ ಸರಿ ನನಗೆ ಇವರನ್ನು ಕೊಲ್ಲಲು ಇಚ್ಛೆಯಿಲ್ಲ. ತ್ರೈಲೋಕ್ಯ ರಾಜ್ಯವು ಲಭಿಸುವ ಹಾಗಿದ್ದರೂ ನಾನು ಇವರನ್ನು ಕೊಲ್ಲಲು ಬಯಸುವುದಿಲ್ಲ ಇನ್ನು ಈ ಅಲ್ಪ ರಾಜ್ಯಕ್ಕಾಗಿ ನಾನು ಇವರನ್ನು ಕೊಲ್ಲ ಬಯಸುವೆನೆ ? ಸ್ವಜನರನ್ನು ಕೊಂದು ನಾವು ಸುಖಿಗಳಾಗಿರಲು ಹೇಗೆ ಸಾಧ್ಯ ?

ಈ ಧೃತ ರಾಷ್ಟ್ರ ಪುತ್ರರಾದ ಕೌರವರನ್ನು ಕೊಲ್ಲುವುದರಿಂದ ನಮಗೆ ಯಾವ ಪ್ರಿಯವೂ ಉಂಟಾಗಲಾರದು ನಮಗೆ ಸುಖವು ಲಭಿಸುವುದಿಲ್ಲವೆಂಬುದು ನಿಜ. ಅಷ್ಟು ಮಾತ್ರವಲ್ಲದೆ ಮಹಾಪಾಪಿಷ್ಟರಾದ ಇವರನ್ನು ಕೊಂದರೆ ನಮ್ಮನ್ನು ಪಾಪವು ಆಶ್ರಯಿಸುತ್ತದೆ ನಮಗೆ ಅವರನ್ನು ಕೊಂದ ಪಾಪವೂ ಬರುತ್ತದೆ. ಧೃತರಾಷ್ಟ್ರನ ಮಕ್ಕಳೇನೋ ದುರಾಸೆಯಿಂದ ಬುದ್ಧಿಗೆಟ್ಟು ತಮ್ಮ ಸ್ವಂತ ಬಂಧು ಜನರನ್ನು ಕೊಲ್ಲುವುದರಿಂದ ಉಂಟಾಗುವ ಪಾಪವನ್ನೂ ಕುಲಕ್ಷಯದಿಂದ ಉಂಟಾಗುವ ಪಾತಕವನ್ನೂ ತಿಳಿಯದೆ ಯುದ್ಧಕ್ಕೆ ಬಂದಿರುವರು. ಆದರೆ ಧರ್ಮವೇ ಮೂರ್ತಿವೆಂತ್ತಂತಿರುವ ಧರ್ಮರಾಜನ ಸಹೋದರರಾದ ನಾವು ಕುಲಕ್ಷಯದಿಂದ ಉಂಟಾಗುವ ದೋಷವನ್ನು ಚೆನ್ನಾಗಿ ತಿಳಿದೂ ಈ ಪಾಪಕಾರ್ಯವನ್ನು ಮಾಡಲು ಮನಸ್ಸು ಮಾಡಬಾರದು. ಈ ಪಾಪಕಾರ್ಯದಿಂದ ಹಿಂತಿರುಗುವ ಮನಸ್ಸು ಮಾಡಬೇಕಲ್ಲವೇ ! ಈ ತಿಳುವಳಿಕೆ ಇನ್ನಾದರೂ ನಮಗೆ ಉಂಟಾಗಬೇಡವೇ ?

ಇನ್ನು ಕುಲಕ್ಷಯದಿಂದಾಗುವ ದುಷ್ಪರಿಣಾಮಗಳನ್ನು ನೋಡೋಣ ಕುಲಕ್ಷಯದಿಂದ ಸನಾತನವಾದ ಕುಲಧರ್ಮಗಳು ನಾಶವಾಗುವುವು, ಧರ್ಮವು ನಷ್ಟವಾದರೆ ಅಧರ್ಮವು ಸಮಸ್ತಕುಲಗಳನ್ನೂ ಆವರಿಸಿ ಅಧೀನ ಪಡಿಸಿಕೊಂಡು ಹಾಳು ಮಾಡುವುದು ಅಧರ್ಮವು ಹೆಚ್ಚುವುದರಿಂದ ಕುಲಸ್ತ್ರೀಯರು ತಮ್ಮ ಶೀಲವನ್ನು ಕಳೆದುಕೊಂಡು ಕೆಡುವರು. ಎಲೈ ವಾರ್ಷ್ಣೇಯ ದುಷ್ಟರಾದ ಸ್ತ್ರೀಯರಿಂದ ವರ್ಣಸಂಕರವಾಗುವುದು ಹೀಗೆ ಇದು ಸಮಾಜದ ವ್ಯವಸ್ಥಿತ ಪದ್ಧತಿಯನ್ನೇ ಗೊಂದಲಕ್ಕೀಡು ಮಾಡುವುದು.

ವರ್ಣಸಂಕರದಿಂದ ಕುಲನಾಶಮಾಡಿದವರಿಗೂ ಕುಲಕೂ ನರಕ ಪ್ರಾಪ್ತಿಯಾಗುವುದು ಮಾತ್ರವಲ್ಲದೆ ಪಿತೃಗಳು ಪಿಂಡೋದಕಕ್ರಿಯೆಗಳಿಲ್ಲದೆ ನರಕದಲ್ಲಿ ಬೀಳಬೇಕಾಗುವುದು ವರ್ಣಸಂಕರಕ್ಕೆ ಕಾರಣರಾದ ಕುಲಘಾತಕರ ಈ ದೋಷಗಳಿಂದ ಕುಲಧರ್ಮಗಳೂ ಜಾತಿಧರ್ಮಗಳೂ ಕೆಟ್ಟುಹೋಗುವುವು ಮತ್ತು ಕುಲಧರ್ಮಗಳನ್ನು ನಾಶಮಾಡಿರುವ ಮನುಷ್ಯರಿಗೆ ನರಕದಲ್ಲೇ ನಿತ್ಯವಾಸವಾಗುವುದೆಂದು ನಾವು ಕೇಳಿರುವೆವು

ಈ ಯುದ್ಧದಲ್ಲಿ ಮುಂದಾಳಾಗಿ ನಿಂತು ಯುದ್ಧಮಾಡುವುದರಿಂದ ಉಂಟಾಗುವ ಈ ಅನಾಹುತಗಳನ್ನೆಲ್ಲಾ ಯೋಚನೆ ಮಾಡಿದರೆ, ನಾನು ಎಂತಹ ಮಹತ್ತಾದ ಪಾಪಕಾರ್ಯವನ್ನು ಮಾಡುತ್ತಿದ್ದೇನೆಂಬುದರ ಅರಿವಾಗುತ್ತದೆ. ರಾಜ್ಯಸುಖದ ಆಸೆಯಿಂದ ಇಲ್ಲಿಗೆ ಬಂದು ಈ ಸ್ವಜನರನ್ನೆಲ್ಲಾ ಕೊಲ್ಲಲು ಪ್ರಯತ್ನಿಸಿ ನಾವು ಮಹಾಪಾಪಕಾರ್ಯವನ್ನು ಮಾಡಲು ಪ್ರಯತ್ನಿಸುತ್ತಿದ್ದೇವೆ ಈಗ ನಾನು ಕೌರವರೊಂದಿಗೆ ಯುದ್ಧ ಮಾಡದೆ ಶಸ್ತ್ರವನ್ನು ಬಿಸುಟು ಸುಮ್ಮನಾದಮೇಲೆ ಈ ಧೃತರಾಷ್ಟ್ರ ಪುತ್ರರು ಶಸ್ತ್ರ ಪಾಣಿಗಳಾಗಿ ಬಂದು ಯುದ್ಧದಲ್ಲಿ ನನ್ನನ್ನು ಕೊಂದರೂ ಅದು ನನಗೆ ಎಷ್ಟೋ ಕ್ಷೇಮಕರವೆಂದು ಭಾವಿಸುತ್ತೇನೆ ”

ಹೀಗೆಂದು ಹೇಳಿ ಅರ್ಜುನನು ಆಶ್ಚರ್ಯಕರವಾದ ರೀತಿಯಲ್ಲಿ ಯುದ್ಧರಂಗದಲ್ಲಿ ಧನುರ್ಬಾಣಗಳನ್ನು ಕೆಳಗಿಟ್ಟು ವ್ಯಸನದಿಂದ ಕುಗ್ಗಿದ ಮನಸ್ಸುಳ್ಳವನಾಗಿ ರಥದಲ್ಲಿ ಸುಮ್ಮನೇ ಕುಳಿತುಬಿಟ್ಟನು

ಇದು ಅರ್ಜುನವಿಷಾದ ಯೋಗವೆಂಬ ಪ್ರಥಮ ಅಧ್ಯಾಯವು. ವ್ಯಾಸಮಹರ್ಷಿಯು ಗೀತೆಯ ಒಂದನೇ ಅಧ್ಯಾಯದಲ್ಲಿ ಅರ್ಜುನನ ವಿಷಾದವನ್ನು ವರ್ಣಿಸಿ ನಿಲ್ಲಿಸಿದ್ದಾರೆ ಎರಡನೆಯ ಅಧ್ಯಾಯದಿಂದ ಗೀತೆಯ ಉಪದೇಶವನ್ನು ಪ್ರಾರಂಭಿಸಿದ್ದಾರೆ ಗೀತಾಮೃತ ಪಾನಕ್ಕೆ ಮುಂಚೆ ಅರ್ಜುನನ ವಿಷಾದವನ್ನು ಅದಕ್ಕೆ ಕಾರಣವನ್ನೂ ತಿಳಿಯುವುದು ಅವಶ್ಯಕ ಆದ್ದರಿಂದ ಒಂದನೆಯ ಅಧ್ಯಾಯದಲ್ಲಿ ಅದರ ವರ್ಣನೆಯಿಂದ ಗೀತೆ ಪ್ರಾರಂಭವಾಗಿದೆ ಇದರಿಂದ ಇದನ್ನು ಅರ್ಜುನವಿಷಾದ ಯೋಗವೆಂದು ಕರೆದಿದ್ದಾರೆ.

## ಅಧ್ಯಾಯ ಎರಡ.

### ಗೀತೆಯ ಉಪದೇಶಗಳ ಮಹಿಮೆ

ಎರಡನೆಯ ಅಧ್ಯಾಯದಿಂದ ಗೀತೆಯ ಉಪದೇಶ ಪ್ರಾರಂಭವಾಗುತ್ತದೆ. ಆದಿಯಲ್ಲಿಯೇ ಶ್ರೀಕೃಷ್ಣನು ಬಾಳಿನ ಮಹಾಸಿದ್ಧಾಂತವನ್ನು ಉಪದೇಶ ಮಾಡಿದ್ದಾನೆ ಈ ಉಪದೇಶಗಳು ಕೇವಲ ಮಹಾಭಾರತದ ವ್ಯಕ್ತಿಯಾದ ಅರ್ಜುನನಿಗೆ ಮಾತ್ರವಲ್ಲದೆ ಸರ್ವಮಾನವರಿಗೂ ಆದರಣೀಯವಾಗಿವೆ. ಒಟ್ಟಿನಲ್ಲಿ ಗೀತೆಯು ಮನುಷ್ಯನ ಜೀವನ ಶಾಸ್ತ್ರ. ಗೀತೆಯ ಉಪದೇಶಗಳ ವ್ಯಾಸಂಗದಿಂದ ಮಾನವನಿಗೆ ಬಹಳ ಉಪಯೋಗವುಂಟು ಇದರಿಂದ ಮಾನವನು ಮೃಗಸ್ಥಿತಿಯಿಂದ ಮನುಷ್ಯಸ್ಥಿತಿ ಹೊಂದಿ, ಕೊನೆಗೆ ದೈವೀಕ ಸ್ಥಿತಿಗೆ ಅರ್ಹತೆ ಪಡೆಯಬಹುದು , ತಮೋಗುಣದಿಂದ ರಜೋಗುಣ ಹೊಂದಿ ಕೊನೆಗೆ ಸತ್ತ್ವಗುಣವನ್ನು ಪಡೆಯುವ ಅರ್ಹತೆ ಹೊಂದಬಹುದು , ಮನುಷ್ಯನಿಗೆ ದುಃಖಗಳು ಉಂಟಾದಾಗ ಇದು ಅವನ ಮನಸ್ಸಿಗೆ ಶಾಂತಿಯನ್ನು ನೀಡುತ್ತದೆ , ಅವನು ಧರ್ಮಾಧರ್ಮಗಳ ತೊಡಕಿಗೆ ಸಿಕ್ಕಿ ದಾರಿಕಾಣದೆ ಪರಿತಪಿಸುವಾಗ ಅವನಿಗೆ ವಿವೇಕ ಜ್ಞಾನವನ್ನು ಉಂಟುಮಾಡಿ ಸನ್ಮಾರ್ಗವನ್ನು ತೋರಿಸುತ್ತವೆ ಗೀತೆಯ ಉಪದೇಶಗಳನ್ನು ಅಭ್ಯಾಸ ಮಾಡುವವನು ಕರ್ತವ್ಯ ಕರ್ಮಗಳನ್ನು ಅತ್ಯುತ್ತಮ ರೀತಿಯಲ್ಲಿ ನಡೆಸುವನು ಗೀತೆಯಲ್ಲಿರುವ ಸಾಧನಗಳನ್ನು ಅನುಷ್ಠಿಸುವವನು ಆತ್ಮ ಸಾಕ್ಷಾತ್ಕಾರ ಮತ್ತು ಭಗವಂತನ ಸಾಕ್ಷಾತ್ಕಾರವನ್ನು ಪಡೆಯುವನು ಹಾಗೆ ಜಯವನ್ನು ಪಡೆಯದವನೂ ಕೂಡ ಯೋಗಭ್ರಷ್ಟನಾದಾಗ್ಯೂ ಶಾಂತಿಯನ್ನು ಹೊಂದಿ ಉತ್ತಮ ಜನ್ಮವನ್ನು ಪಡೆಯುವನು ಕೊನೆಯದಾಗಿ ಅರ್ಜುನನು ತನ್ನ ಕುದುರೆಗಳ ಲಗಾಮನ್ನು ಶ್ರೀಕೃಷ್ಣನ ಕೈಗೆಕೊಟ್ಟು ಅವನನ್ನು ಮರೆಹೊಕ್ಕಂತೆ, ಮಾನವರೂ ಪರಮಾತ್ಮನನ್ನು ಧ್ಯಾನಮಾಡಿ, ತಮ್ಮ ಮನಸ್ಸಿನ ಲಗಾಮನ್ನು ಅವನಿಗೆ ವಹಿಸಿ, ಅವನನ್ನು ಶರಣು ಹೊಕ್ಕರೆ ಅವನೇ ಅವರಿಗೂ ಸಾರಥಿಯಾಗಿ ತಾನೆ ಅವರನ್ನು ಸನ್ಮಾರ್ಗದಲ್ಲಿ ನಡೆಸಿ ಕೃತಾರ್ಥರನ್ನಾಗಿ ಮಾಡುತ್ತಾನೆ ಎಂಬುದೇ ಗೀತೆಯ ಉಪದೇಶದ ಮುಖ್ಯ ಸಾರಾಂಶ ಎಂದು ಮಹಾತ್ಮರುಗಳೆಲ್ಲಾ ತಿಳಿಸಿದ್ದಾರೆ ಈ ಕಾರಣಗಳಿಂದ ಗೀತೆ ಭಾರತೀಯ ಶಾಸ್ತ್ರಗಳಲ್ಲಿ ಒಂದು ಉತ್ತಮಗ್ರಂಥವಾಗಿದೆ ಸರ್ವರೂ ಗೀತೆಯ ಉಪದೇಶಗಳನ್ನು ವ್ಯಾಸಂಗಮಾಡಿ ಧನ್ಯರಾಗುವುದು ಒಳ್ಳೆಯದು

ಅರ್ಜುನನಂತೆ ಮಾನವರು ಅನೇಕ ವೇಳೆ ಧರ್ಮಾಧರ್ಮ ವಿಚಾರಗಳ ತೊಡಕಿಗೆ ಸಿಕ್ಕಿ ದಾರಿಕಾಣದೆ ಬಹಳ ಕಷ್ಟಪಡುತ್ತಾರೆ ಅಜ್ಞಾನ, ಬಡತನ, ಕಲಹ, ಸಾವು, ನೋವು, ರೋಗ ರುಜಿನಾದಿಗಳ ಬಲೆಗೆ ಸಿಕ್ಕಿ ಮಾನವನು ದುಃಖವನ್ನು ಅನುಭವಿಸುವ ಸಂದರ್ಭಗಳೂ ಅನೇಕವಾಗಿವೆ. ಇಂತಹ ವಿಷಮ ಪರಿಸ್ಥಿತಿಗಳಲ್ಲಿ ಶಾಂತಿ ಸಿಗದೆ ಮಾನವನು ಬಹಳವಾಗಿ ಪರಿತಪಿಸುತ್ತಾನೆ. ಇದರೊಂಗೆ ಧರ್ಮಕ್ಷೇತ್ರವೂ ಕುರುಕ್ಷೇತ್ರವೂ ಆದ ಅವನ ಹೃದಯದಲ್ಲಿ ಒಳ್ಳೆಯ ಮತ್ತು ಕೆಟ್ಟ ವೃತ್ತಿಗಳಿಗೆ ಕಲಹ ನಡೆಯುತ್ತಲೇ ಇರುತ್ತದೆ ಆದರಿಂದ

ಮಾನವರು ಅರ್ಜುನನಂತೆ ಧರ್ಮಾಧರ್ಮಗಳ ತೊಡಕಿಗೆ ಸಿಕ್ಕಿ, ತಾವು ಮುಂದೆ ಏನು ಮಾಡಬೇಕೆಂಬುದು ತಿಳಿಯದೆ ಒದ್ದಾಡುತ್ತಾರೆ. ಅವಿವೇಕಿಯಾದ ಮಾನವನು ಅಧರ್ಮದ ಬಲೆಗೆ ಸಿಕ್ಕಿಬಿದ್ದಾಗ ಅವನ ಕೆಟ್ಟ ವೃತ್ತಿಗಳು ಜಯ ಹೊಂದುತ್ತವೆ ಆಗ ಅವನು ಧರ್ಮಾಧರ್ಮಗಳ ವಿಚಾರವಾಗಿ ತರ್ಕ-ವಿತರ್ಕಗಳನ್ನು ಮಾಡಿ ತಾನು ಮಾಡುವುದೇ ಸರಿ ಎಂದು ಪಾಪಮಾಡಿ, ತೀರ್ಮಾನಿಸಿಕೊಳ್ಳುವ ಪ್ರಸಂಗಗಳೂ ಅನೇಕವಾಗಿ ಉಂಟು. ಇಂತಹ ವಿಷಮ ಗಳಿಗೆಗಳಲ್ಲಿ ಮಾನವನು ಅವಿವೇಕಿಯಾಗಿ ಅಕಾರ್ಯಗಳಲ್ಲಿ ತೊಡಗದೆ, ಗೀತಾಸುಧಾಮೃತ ಪಾನಮಾಡಿ, ವಿವೇಕಹೊಂದಿ, ಸನ್ಮಾರ್ಗದಲ್ಲಿ ಪ್ರವರ್ತಿಸಲೆಂದು ವ್ಯಾಸ ಮಹರ್ಷಿಯು ಭಗವದ್ಗೀತೆಯ ಎರಡನೆಯ ಅಧ್ಯಾಯದಿಂದ ಹಿಡಿದು ಹದಿನೆಂಟನೆಯ ಅಧ್ಯಾಯ ಪೂರ್ತಿ ಸರ್ವರಿಗೂ ಉಪದೇಶ ನೀಡಿದ್ದಾರೆ

ಗೀತೆಯ ಮೊದಲು ಆರು ಅಧ್ಯಾಯಗಳಲ್ಲಿ ಕರ್ಮಯೋಗ ಮತ್ತು ಜ್ಞಾನಯೋಗ ನಿಷ್ಠೆಯಿಂದ ಕೂಡಿದ ಆತ್ಮಸಾಕ್ಷಾತ್ಕಾರವು ತಿಳಿಸಲ್ಪಟ್ಟಿದೆಯೆಂದು ತಿಳಿಸಿದೆ ಈಗ ಈ ಎರಡನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ಅವನ ಮೋಹನಾಶಕ್ಕಾಗಿ ಮುಖ್ಯವಾಗಿ ಮೂರು ವಿಷಯಗಳನ್ನು ತಿಳಿಸುತ್ತಾನೆ. ಅವು ಯಾವುವೆಂದರೆ—(1) ಸಾಂಖ್ಯಬುದ್ಧಿ-ದೇಹಾತ್ಮಗಳ ವಿಲಕ್ಷಣತೆಯನ್ನು ಅಂದರೆ ದೇಹವೇ ಬೇರೆ ಆತ್ಮನೇ ಬೇರೆ ಎಂದೂ ಆತ್ಮನು ನಿತ್ಯವು, ದೇಹವು ಅನಿತ್ಯವು ಎಂದೂ ತಿಳಿಯುವಿಕೆ

(2) ಯೋಗಬುದ್ಧಿ—ಫಲಸಂಗ ಮತ್ತು ಕರ್ತೃತ್ವ ರಹಿತನಾಗಿ ಕರ್ಮಜ್ಞಾನ ಮಾಡುವ ಯೋಗಬುದ್ಧಿ-ಇದೇ ಕರ್ಮಯೋಗವು.

(3) ಇವೆರಡರಿಂದ ಉಂಟಾಗುವ ಸ್ಥಿತ ಪ್ರಜ್ಞತೆ (ಸ್ಥಿರಬುದ್ಧಿ) ಮತ್ತು ಸ್ಥಿತ ಪ್ರಜ್ಞನ ಲಕ್ಷಣ

ಈ ಅಧ್ಯಾಯದ ಉಪದೇಶಗಳನ್ನೆಲ್ಲಾ ಮುಂದೆ ಒಂದೊಂದಾಗಿ ಗೀತೆಯ ಶ್ಲೋಕಗಳ ಆಧಾರದಿಂದ ಸಂಕ್ಷೇಪವಾಗಿ ತಿಳಿಸುವ ಪ್ರಯತ್ನ ಮಾಡಿದೆ.

## ಕೃಷ್ಣನು ಅರ್ಜುನನಿಗೆ ಮೊದಲು ಧೈರ್ಯ ಹೇಳುತ್ತಾನೆ

“ಅರ್ಜುನಾ ! ಧೈರ್ಯಗೆಡಬೇಡ, ಯುದ್ಧಮಾಡು. ಏಳು” (ಶ್ಲೋಕಗಳು 1 ರಿಂದ 3) ಅರ್ಜುನನು ತನ್ನ ಬಂಧುಮಿತ್ರರೊಂದಿಗೆ ಯುದ್ಧಮಾಡಲು ಹಿಂಜರಿದು, ಅವರ ಮೇಲಿನ ಮೋಹದಿಂದ ಅತ್ಯಂತ ಕನಿಕರಹೊಂದಿ, ಅವರನ್ನು ತಾನು ಯುದ್ಧದಲ್ಲಿ ಕೊಲ್ಲಬೇಕಲ್ಲಾ ಎಂದು ದುಃಖಭರಿತನಾದನು. ಅವನ ಕಣ್ಣುಗಳು ದುಃಖಾಶ್ರುಗಳಿಂದ ತುಂಬಿದವು. ಅವನ ಮನಸ್ಸು ಬಹಳ ವ್ಯಾಕುಲಗೊಂಡಿತು ಈ ವಿಧವಾಗಿ ದುಃಖಾಕ್ರಾಂತನಾಗಿ ಕಣ್ಣೀರು ಹಾಕುತ್ತಾ ಕುಳಿತಿರುವಾಗ ಅರ್ಜುನನನ್ನು ನೋಡಿ ಕೃಷ್ಣನು ಹೀಗೆಂದನು “ಅರ್ಜುನಾ ! ಇದೇನಿದು, ಇಂತಹ ಪರಿಸ್ಥಿತಿಯಲ್ಲಿ (ಅಂದರೆ ಸಮಯವಲ್ಲದ ಈ ಸಮಯದಲ್ಲಿ) ನಿನಗೆ ಕಳವಳವು ಎಲ್ಲಿಂದ ಬಂದಿತು. ಈ ದುಃಖವು ಏನೂ ತಿಳಿಯದ ಅಜ್ಞರಿಗೆ ಉಂಟಾಗುವುದು ಸಹಜ. ಆದರೆ ನಿನ್ನಂತಹ ವಿವೇಕಿಗೆ ಇದು ಯೋಗ್ಯವಲ್ಲ ಅಷ್ಟು ಮಾತ್ರವಲ್ಲದೆ ಇದು ಪರಲೋಕ ಸಾಧನೆಗೆ ವಿರೋಧವಾದುದೂ, ಅಪಕೀರ್ತಿಯನ್ನುಂಟು ಮಾಡುವಂತಹದುದೂ ಆಗಿದೆ (2) ಭಯಗೊಂಡು ಹೇಡಿಯಾಗಬೇಡ. ನಿನ್ನಂತಹ ವೀರನಿಗೆ ಇದು ತರವಲ್ಲ. ಶತ್ರುಗಳನ್ನೆಲ್ಲಾ ಸಂಹಾರ ಮಾಡ ತಕ್ಕವನಾದ ನೀನು ಹೀನವಾದ ಈ ಹೃದಯ ದೌರ್ಬಲ್ಯವನ್ನು ಬಿಟ್ಟು ಧೈರ್ಯದಿಂದ ಯುದ್ಧಮಾಡು ಎದ್ದೇಳು” ಎಂದನು (3)

## ವ್ಯಾಕುಲಚಿತ್ತನಾದ ಅರ್ಜುನನು ಶ್ರೀ ಕೃಷ್ಣನನ್ನು ಗುರುವಾಗಿ ವರಿಸಿ ಅವನಿಗೆ ಶರಣಾಗುತ್ತಾನೆ (ಶ್ಲೋಕಗಳು 4 ರಿಂದ 9)

ಸ್ನೇಹ, ಕರುಣೆ ಮತ್ತು ಧರ್ಮಾಧರ್ಮಗಳ ಭಯ ಇವುಗಳಿಂದ ವ್ಯಾಕುಲಗೊಂಡ ಅರ್ಜುನ ಕೃಷ್ಣನ ಮಾತು ತನಗೆ ಹಿತಕರವೆಂದು ತಿಳಿದುಕೊಳ್ಳದೆ ಮತ್ತೆಯೂ ಈ ರೀತಿ ಹೇಳಿದನು “ಎಲೈ ಕೃಷ್ಣನೇ ! ಪೂಜೆಗೆ ಯೋಗ್ಯರಾದ ಭೀಷ್ಮ ದ್ರೋಣರೇ ಮೊದಲಾದ ಗುರುಜನರನ್ನು ಯುದ್ಧದಲ್ಲಿ ನಾನು ಹೇಗೆ ಕೊಲ್ಲಲಿ (4) ಮಹಾನುಭಾವರಾದ ಈ ಗುರುಜನರನ್ನು ಕೊಂದು ರಾಜ್ಯಾಧಿಪತ್ಯವನ್ನು ಅನುಭವಿಸುವುದಕ್ಕಿಂತ, ಅವರನ್ನು ಕೊಲ್ಲದೆ ಈ ಲೋಕದಲ್ಲಿ ಬಿಕ್ಷಾನ್ನದಿಂದ ಜೀವಿಸುವುದೇ ಶ್ರೇಯಸ್ಕರವೆಂದು ನನಗೆ ತೋರುತ್ತದೆ ಒಂದು ವೇಳೆ ಅವರನ್ನು ಕೊಂದರೆ ನನಗೆ ಬರುವ ಲಾಭವೇನು ? ಭೋಗಾಸಕ್ತರಾದ ಆ ಗುರುಗಳನ್ನು ಕೊಂದು ಅವರ ರಕ್ತದಿಂದ ತೊಯ್ದ ಆ ಭೋಗಗಳನ್ನು ಇಲ್ಲಿ ಅವರ ಆಸನದಲ್ಲೇ ಕುಳಿತು ನಾನು ಅನುಭವಿಸಬೇಕಾಗುತ್ತದೆ (5) ಈ ಯುದ್ಧದಲ್ಲಿ ನಾವೇ ಅವರನ್ನು ಜಯಿಸುತ್ತೇವೆಯೋ ಅಥವ ಅವರೇ ನಮ್ಮನ್ನು ಜಯಿಸುತ್ತಾರೆಯೋ, ಇವೆರಡರಲ್ಲಿ ಯಾವುದು

ಶ್ರೇಷ್ಠವಾದುದೋ ಅದನ್ನು ನಾವು ತಿಳಿದಿಲ್ಲ ಆದರೆ ಯಾರನ್ನು ಕೊಂದು ನಮಗೆ ಬದುಕಬೇಕೆಂಬ ಆಸೆಯಿಲ್ಲವೋ ಆಧೃತರಾಷ್ಟ್ರನ ಮಕ್ಕಳೇ ಸೈನ್ಯದ ಮುಂಭಾಗದಲ್ಲಿ ನಮಗೆ ಇದಿರಾಗಿ ಬಂದು ನಿಂತಿದ್ದಾರೆ ಆದರೆ ಯುದ್ಧವನ್ನು ಪ್ರಾರಂಭಿಸಿದ ಮೇಲೆ ನಾವು ಹಿಮ್ಮೆಟ್ಟಿ ನಿಂತಾಗ ಅವರು ನಮ್ಮನ್ನು ಹೊಡೆಯಬಹುದಲ್ಲಾ ಎನ್ನುವಿಯಾದರೆ, ಅದು ನನಗೆ ಸಮ್ಮತವೇ ಭೀಷ್ಮ ದ್ರೋಣಾದಿಗಳಿಂದ ಕೂಡಿದ ಅವರನ್ನು ನಾವು ಅಧರ್ಮವಾಗಿ ಕೊಂದು ಜಯಹೊಂದುವುದಕ್ಕಿಂತ ಧರ್ಮಾಧರ್ಮಗಳನ್ನು ತಿಳಿಯದ ಅವರಿಂದ ನಾವು ಕೊಲ್ಲಲ್ಪಟ್ಟು ಜಯಿಸಲ್ಪಡುವುದೇ ಮೇಲೆಂದು ನನಗೆ ತೋರುತ್ತದೆ-ಎಂದು ಅಭಿಪ್ರಾಯವಾಗುತ್ತದೆ) (6) ದೈನ್ಯತೆ ಕರುಣೆ ಮತ್ತು ಪಾಪಭಯ ಮುಂತಾದ ದೋಷಗಳ ಹೊಡೆತದಿಂದ ಕಳವಳಗೊಂಡ ನಾನು ಧರ್ಮದ ವಿಷಯದಲ್ಲಿ ಮೋಹಗೊಂಡ ಮನಸ್ಸುಳ್ಳವನಾಗಿ ನಿನ್ನನ್ನು ಕೇಳುವೆನು. ನನಗೆ ಮುಂದೆ ಯಾವುದು ಶ್ರೇಯಸ್ಕರವೆಂದು ನಿಶ್ಚಿತವಾಗಿದೆಯೋ ಅದನ್ನು ನನಗೆ ಹೇಳು. ನಾನು ನಿನಗೆ ಶಿಷ್ಯನಾಗಿದ್ದೇನೆ ನಿನ್ನಲ್ಲಿ ಶರಣಾಗತನಾದ ನನ್ನನ್ನು ತಿದ್ದಿ ನನಗೆ ನೀನೇ ಉಪದೇಶ ಮಾಡು. (7) ಈ ದುಃಖವು ನನ್ನ ಇಂದ್ರಿಯಗಳನ್ನೆಲ್ಲಾ ಒಣಗಿಸುತ್ತಿದೆ ಭೂಮಿಯಲ್ಲಿ ಐಶ್ವರ್ಯ ಸಮೃದ್ಧವಾದ ಮತ್ತು ಶತ್ರುರಹಿತವಾದ ರಾಜ್ಯವಾಗಲಿ ಕೊನೆಗೆ ದೇವತೆಗಳ ಆದಿಪತ್ಯವೇ ಆಗಲಿ ಲಭಿಸಿದರೂ ಕೂಡ ನನ್ನ ಈ ದಾರುಣವಾದ ದುಃಖವು ಶಮನಯವಾಗಲಾರದು. ಅಂದರೆ ಈ ದುಃಖ ಶಮನಕ್ಕೆ ಉಪಾಯವು ನನಗೆ ಗೋಚರವಾಗಿಲ್ಲ. ನೀನೇ ನನಗೆ ಮಾರ್ಗದಕನಾಗಬೇಕು. (8) ಹೀಗೆಂದು ಹೇಳಿ "ಗೋವಿಂದನೇ ! ನಾನಂತೂ ಯುದ್ಧ ಮಾಡುವುದಿಲ್ಲ"- ಎನ್ನುತ್ತಾ ಅರ್ಜುನನು ತೆಪ್ಪಗೆ ಕುಳಿತುಬಿಟ್ಟನು. (9)

**ಕೃಷ್ಣ ಗೀತೆಯ ಉಪದೇಶವನ್ನು ಪ್ರಾರಂಭಿಸುತ್ತಾನೆ-**

(ಶ್ಲೋಕ 10)

ನೋಡಿದ ಕೃಷ್ಣ. ಎದುರುಪಕ್ಷದವರೆಲ್ಲಾ ಯುದ್ಧದ ಕಹಳೆ ಊದಿಯಾಗಿದೆ ಇನ್ನೇನು ಯುದ್ಧ ಪ್ರಾರಂಭವಾಗಲಿದೆ ಇಂತಹ ವಿಷಮಗಳಿಗೆಯಲ್ಲಿ ವೀರ ಅರ್ಜುನ ತಟಸ್ಥನಾಗಿ ಶಸ್ತ್ರವನ್ನು ಬಿಸುಟು, ದುಃಖದಿಂದ ಕಣ್ಣೀರು ಹಾಕುತ್ತಾ ಕುಳಿತಿದ್ದಾನೆ. ಅರ್ಜುನ ಮಹಾವೀರ , ಯುದ್ಧಕ್ಕೆ ಹೆದರಿ ಹೇಡಿಯಂತೆ ಕುಳಿತವನೂ ಅಲ್ಲ ಅಥವ ಅಹಿಂಸಾವಾದಿಯಾಗಿ ಯುದ್ಧವನ್ನೆ ಮಾಡಕೂಡದೆಂಬ ಧ್ಯೇಯದಿಂದ ಕುಳಿತವನೂ ಅಲ್ಲ ಹಾಗಿದ್ದ ಪಕ್ಷಕ್ಕೆ ಅವನು ರಣರಂಗಕ್ಕೇ ಬರುತ್ತಿರಲಿಲ್ಲ ಅವನಿಗೆ ಸ್ವಜನರನ್ನು ನೋಡಿ ಅವರಲ್ಲಿ ವ್ಯಾಮೋಹ ಉಂಟಾಯಿತು ಆದರಿಂದ ತನ್ನ ಧೈರ್ಯವನ್ನು ಕಳೆದುಕೊಂಡವನಾಗಿ ತನ್ನ ಕರ್ತವ್ಯವನ್ನು ಮರೆತು ಅರ್ಜುನ ಯುದ್ಧಮಾಡಲು ಹಿಂಜರಿದ. ದುಷ್ಟರಾದ ಕೌರವರನ್ನು ಜಯಿಸಿ ಧರ್ಮಕ್ಕೆ ಜಯಗಳಿಸುವುದೇ ಕ್ಷತ್ರಿಯನಾದ ತನ್ನ ಧರ್ಮವೆಂಬುದನ್ನೂ ಮರೆತು ದೇಹ ಮತ್ತು ಆತ್ಮಸ್ವರೂಪ ಜ್ಞಾನ ರಹಿತನಾಗಿ ದುಃಖಿತನಾಗಿದ್ದಾನೆ ಆದರೆ ಮೋಹಪರವಶನಾದ ಅವನು ಧರ್ಮಾಧರ್ಮಗಳ ವಿಚಾರವನ್ನು ಹೇಳುತ್ತಾ ಅದರಿಂದ ತನ್ನ ವ್ಯಾಮೋಹವನ್ನು ಮರೆಸಿಕೊಂಡು ವಿವೇಕಿಯಂತೆ ಮಾತನಾಡುತ್ತಿದ್ದಾನೆ ಹೀಗೆ ಒಂದಕ್ಕೊಂದು ಪರಸ್ಪರ ವಿರೋಧವಾದ ಗುಣಗಳಿಂದ ಕೂಡಿದ ಅರ್ಜುನನನ್ನು ನೋಡಿ ಕೃಷ್ಣನಿಗೆ ಸೋಜಿಗವಾಗಿ ತೋರಿತು ಹೀಗೆ ಎರಡು ಸೈನ್ಯಗಳ ಮಧ್ಯೆ ದುಃಖಿತನಾಗಿರುವ ಮತ್ತು ಧರ್ಮವನ್ನು ತಿಳಿಯುವುದಕ್ಕಾಗಿ ತನ್ನಲ್ಲಿ ಶರಣಾಗತನಾಗಿರುವ ಅರ್ಜುನನನ್ನು ಕುರಿತು ಅವನ ಅಜ್ಞಾನವನ್ನು ನೋಡಿ ಪರಿಹಾಸದಿಂದ ನಗುತ್ತಿರುವನೋ ಎಂಬಂತೆ ಕೃಷ್ಣನು ಈ ಮಾತುಗಳನ್ನು ಹೇಳಿದನು (10)

ಇದೇ ಗೀತೆಯ ಉಪದೇಶದ ಪ್ರಾರಂಭ. ಭಗವದ್ಗೀತೆಯ ಉಪದೇಶ ಎರಡನೆಯ ಅಧ್ಯಾಯದ ಹನ್ನೊಂದನೆಯ ಶ್ಲೋಕದಿಂದ ಪ್ರಾರಂಭವಾಗುತ್ತದೆ ಅರ್ಜುನನಿಗೆ ಮೋಹನಾಶವಾಗಿ ಶಾಂತಿ ಲಭಿಸಬೇಕಾದರೆ, ಅವನಿಗೆ ಮೊದಲು ಆತ್ಮಯಥಾತ್ಮ ಜ್ಞಾನ ಅಂದರೆ ಆತ್ಮಸ್ವರೂಪದ ನಿಜವಾದ ಜ್ಞಾನ ಉಂಟಾಗಬೇಕು ಮತ್ತು ಆ ಆತ್ಮಯಥಾತ್ಮ ಜ್ಞಾನವನ್ನು ಹೊಂದಲು ಉಪಾಯವಾದ ಸ್ವಧರ್ಮವಾದ ಧರ್ಮಯುದ್ಧವನ್ನು ಫಲಾಸಕ್ತಿರಹಿತವಾಗಿ ಮಾಡುವ ಕರ್ಮಯೋಗ ಜ್ಞಾನವೂ ಉಂಟಾಗಬೇಕು ಇವೆರಡು ಜ್ಞಾನಗಳೂ ಉದಯವಾಗದೆ ಅವನ ಮೋಹವು ನಾಶವಾಗುವುದಿಲ್ಲವೆಂದು ತಿಳಿದು ಪೂಜ್ಯನಾದ ಪರಮ ಪುರುಷನಿಂದ ಅಧ್ಯಾತ್ಮ ಶಾಸ್ತ್ರವು ಪ್ರಾರಂಭಿಸಲ್ಪಟ್ಟಿತು. ಆತ್ಮ ಪರಮಾತ್ಮರ ನಿಜಸ್ವರೂಪವನ್ನೂ ಮತ್ತು ಅದನ್ನು ಹೊಂದಲು ಉಪಾಯಗಳಾದ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ, ಮತ್ತು ಪ್ರಪತ್ತಿಯೋಗಗಳ ವಿಚಾವನ್ನು ತಿಳಿಸುವ "ನತ್ವೇವಾಹಂ" ಎಂದು ಆರಂಭಿಸಿ "ಮೋಕ್ಷಯಿಷ್ಯಾಮಿ ಮಾಶುಚಃ" ಎನ್ನುವವರಗಿನ ಗೀತಾ ಶ್ಲೋಕಗಳಲ್ಲಿ ಉಪದೇಶ ಮಾಡಿದ್ದಾನೆ ಈ ಉಪದೇಶವು ಅರ್ಜುನನಿಗೆ ಮಾತ್ರವಲ್ಲದೆ ಎಲ್ಲಾ ಮಾನವರಿಗೂ ಅನ್ವಯಿಸುವ ಮಹತ್ತರವಾದ ಉಪದೇಶವಾಗಿದೆ.

## I ದೇಹ ಮತ್ತು ಆತ್ಮ ಸ್ವರೂಪಗಳ ವರ್ಣನೆ :- (ಶ್ಲೋಕಗಳು 11 ರಿಂದ 30)

### 1) ಪಂಡಿತರು ದೇಹವನ್ನು ಕುರಿತಾಗಲಿ ಆತ್ಮವನ್ನು ಕುರಿತಾಗಲಿ ದುಃಖಿಸುವುದಿಲ್ಲ—(ಶ್ಲೋಕ 11)

**ಶ್ಲೋಕ** 11—"ನೀನು ಯಾರ ವಿಷಯವಾಗಿ ಶೋಕಿಸುವುದು ಉಚಿತವಲ್ಲವೋ ಅವರಿಗಾಗಿ ಶೋಕಿಸುತ್ತಿದ್ದೀಯೆ ಮತ್ತು ವಿಶೇಷ ಜ್ಞಾನವುಳ್ಳವರ ಹಾಗೆ ವಾದ ಮಾಡುತ್ತೀಯೆ ಜ್ಞಾನಿಗಳು ಪ್ರಾಣವಿಲ್ಲದ ಜಡ ದೇಹವನ್ನು ಕುರಿತಾಗಲೀ, ಸಜೀವ ವಸ್ತುವಾದ ಆತ್ಮವನ್ನು ಕುರಿತಾಗಲೀ ದುಃಖಿಸುದಿಲ್ಲ"

ಎಂದರೆ-ಅರ್ಜುನ ! ನೀನು ಬಂಧುಗಳೂ ಸ್ನೇಹಿತರೂ ಆದ ಕೌರವರನ್ನು ಕೊಲ್ಲುವುದು ಹೇಗೆ ಎಂದು ಶೋಕಕ್ಕೆ ಅನರ್ಹರಾದವರ ವಿಷಯದಲ್ಲಿ ಶೋಕ ಪಡುತ್ತಿದ್ದೀಯೆ ಮತ್ತು ಇವರನ್ನು ಕೊಂದರೆ ಇವರ ಪಿತೃಗಳು ಪಿಂಡೋದಕ ಕ್ರಿಯಾ ಲೋಪದಿಂದ ನರಕ ಸೇರುತ್ತಾರೆ ಮುಂತಾದ ದೇಹಾತ್ಮ ಸ್ವಭಾವ ಜ್ಞಾನದಿಂದ ಕೂಡಿದ ಮಾತುಗಳನ್ನು ಆಡುತ್ತಿದ್ದೀಯೆ ಆದರ ಶರೀರ ಮತ್ತು ಆತ್ಮ ಸ್ವಭಾವ ಜ್ಞಾನವುಳ್ಳವರಿಗೆ ಇಲ್ಲಿ ಶೋಕಪಡಲು ಸ್ವಲ್ಪವೂ ಕಾರಣವಿಲ್ಲ ಅವುಗಳ ಯಥಾರ್ಥ ಸ್ವಭಾವ ಜ್ಞಾನವುಳ್ಳವರು 'ಗತಾಸು ಮರಣಹೊಂದುವ ದೇಹಕ್ಕಾಗಲೀ 'ಅಗತಾಸು' ಅವಿನಾಶಿಯಾದ ಆತ್ಮಕ್ಕಾಗಿಯಾಗಲೀ ದುಃಖಿಸುವುದಿಲ್ಲ ಆದರೆ ನೀನು "ನಾನು ಇವರನ್ನು ಕೊಲ್ಲುವೆನು"-ಎಂದು ದುಃಖ ಪಡುತ್ತಿದ್ದೀಯೆ ಮತ್ತು ಅದರೊಂದಿಗೆ ದೇಹಾತಿರಿಕ್ತವಾದ (ಶರೀರದಿಂದ ಬೇರೆಯಾದ) ಆತ್ಮಜ್ಞಾನದಿಂದ ಕೂಡಿದ ಧರ್ಮಾಧರ್ಮಗಳ ವರ್ಣನೆ ಮಾಡುತ್ತಿದ್ದೀಯೆ ನಿನ್ನ ಮಾತುಗಳು ಪರಸ್ಪರ ವಿರೋಧವಾಗಿ ಕಾಣುತ್ತಿವೆಯಲ್ಲ. ಇದರಿಂದ ತಿಳಿದು ಬರುವುದೇನೆಂದರೆ ನೀನು ದೇಹದ ಸ್ವಭಾವವನ್ನು ತಿಳಿದವನಲ್ಲ ಆ ದೇಹಾತಿರಿಕ್ತನಾದ ನಿತ್ಯನಾದ ಆತ್ಮನ ಸ್ವಭಾವವನ್ನು ತಿಳಿದವನಲ್ಲ ಮತ್ತು ಆತ್ಮ ಪ್ರಾಪ್ತಿಗೆ ಉಪಾಯ ಭೂತವಾದ ಯುದ್ಧಾದಿ ಧರ್ಮವನ್ನೂ ತಿಳಿದವನಲ್ಲ ಫಲಾಪೇಕ್ಷೆ ರಹಿತವಾಗಿ ಮಾಡಿದರೆ ಈ ಧರ್ಮ ಯುದ್ಧವೇ ನಿನಗೆ ಆತ್ಮ ಸಾಕ್ಷಾತ್ಕಾರಕ್ಕೆ ಸಾಧನವಾಗುತ್ತದೆ ಎಂಬ ತತ್ವವನ್ನೂ ನೀನು ತಿಳಿದಿಲ್ಲ

ಒಟ್ಟಿನಲ್ಲಿ ಅಭಿಪ್ರಾಯವೇನೆಂದರೆ ಆತ್ಮವು ಜನ್ಮ ಮರಣ ರಹಿತವಾದುದು ಜನ್ಮಕ್ಕೆ ಅಧೀನವಾಗಿ ಸತ್‌ಭಾವವನ್ನು ಅಂದರೆ ಇರುವಿಕೆಯನ್ನು ಹೊಂದುವಂತಹುದಲ್ಲ ಮತ್ತು ಮರಣಕ್ಕೆ ಅಧೀನವಾಗಿ ವಿನಾಶವನ್ನು ಹೊಂದುವಂತಹುದಲ್ಲ. ಆದ್ದರಿಂದ ಅದರ ವಿಷಯವಾಗಿ ದುಃಖಿಸುವುದು ತರವಲ್ಲ ಇನ್ನು ದೇಹವಾದರೋ ಜಡವಾದುದು ಅಚೇತನವಾದುದು. ಅದಕ್ಕೆ ಚೈತನ್ಯವಿಲ್ಲ ಪರಿಣಾಮಹೊಂದುವುದೇ ಅದರ ಸ್ವಭಾವ ಇದರಿಂದ ಅದಕ್ಕೆ ಹುಟ್ಟು ಸಾವಿನ ಸಂಬಂಧವು ಸ್ವಾಭಾವಿಕವಾಗಿವೆ ಅದು ಪರಿಣಾಮ ಹೊಂದಲೇಬೇಕಾಗಿರುವುದರಿಂದ ಅದರ ವಿಷಯವಾಗಿಯೂ ದುಃಖಿಸುವುದು ತರವಲ್ಲ ಈ ಶ್ಲೋಕದಲ್ಲಿ ತಿಳಿಸಿರುವ ಈ ವಿಷಯವನ್ನು ಮುಂದೆ 12 ನೆಯ ಶ್ಲೋಕದಿಂದ 30 ನೇ ಶ್ಲೋಕ ಪೂರ್ತಿ ವಿಸ್ತಾರವಾಗಿ ವಿವರಿಸಿವೆ

### 2 ಆತ್ಮನ ನಿತ್ಯತೆ-ದೇಹದ ಅನಿತ್ಯತೆ ಮತ್ತು ದೇಹಕ್ಕೂ ಆತ್ಮನಿಗೂ ಇರುವ ಪರಸ್ಪರ ವಿಲಕ್ಷಣತೆಯ ನಿರೂಪಣೆ.

(ಶ್ಲೋಕಗಳು 12 ರಿಂದ 30)

**ಶ್ಲೋಕ 12** ಈ ಶ್ಲೋಕದಲ್ಲಿ ಮೊದಲು ಆತ್ಮ ಸ್ವರೂಪವನ್ನು ವಿವರಿಸಿದೆ-"ನಾನೂ, ನೀನೂ ಮತ್ತು ಇಲ್ಲಿ ನೆರೆದಿರುವ ರಾಜರುಗಳು ಎಂದೂ ಯಾವ ಕಾಲದಲ್ಲೂ ಇರಲಿಲ್ಲವೆಂಬುದಿಲ್ಲ. ನಾವೆಲ್ಲರು ಇನ್ನು ಮುಂದೆ ಇರುವುದೆಂಬುದೂ ಲ್ಲ"

ಅಂದರೆ–ಅನಾದಿ ಕಾಲದಿಂದ ಸರ್ವೇಶ್ವರನಾದ ನಾನು, ನೀನು ಮತ್ತು ನಮ್ಮ ಮುಂದೆ ಇರುವ ಈ ರಾಜರುಗಳು ಎಲ್ಲರೂ ಇರುತ್ತಲೇ ಇದ್ದೇವೆ. ನಾವುಗಳೆಲ್ಲರೂ ಹಿಂದೆಯೂ ಇದ್ದೆವು, ಈಗಲೂ ಇದ್ದೇವೆ ಮತ್ತು ಮುಂದೆಯೂ ಇರುತ್ತೇವೆ. ಸರ್ವೇಶ್ವರನಾದ ನಾನು ಹೇಗೆ ನಿತ್ಯನೆಂಬುವರಲ್ಲಿ ಸಂದೇಹ ವಿಲ್ಲವೋ ಹಾಗೆಯೇ ಜೀವಾತ್ಮರುಗಳಾದ ನೀವೂಕೂಡ ನಿತ್ಯ ರೆಂಬುವದರಲ್ಲಿ ಸಂದೇಹವಿಲ್ಲ. ನಿತ್ಯನು ಎಂದರೆ ಎಲ್ಲಾ ಕಾಲ ದಲ್ಲಿಯೂ ಇರುವವನು ಎಂದು ಅರ್ಥ ಹೀಗೆ ಅರ್ಜುನನಿಗೆ ಮೋಹವನ್ನು ಹೋಗಲಾಡಿಸುವುದಕ್ಕಾಗಿ, ತತ್ವೋಪದೇಶ ಮಾಡುವ ಸಮಯದಲ್ಲಿ "ನಾನು ನೀನು, ಇವರು" ಎಂಬ ಪದಗಳನ್ನು ಉಪಯೋಗಿಸಿ ಎಲ್ಲರನ್ನೂ ಬೇರೆ ಬೇರೆಯಾಗಿ ಹೇಳಿರುವುದರಿಂದ ಸರ್ವೇಶ್ವರನಾದ ಪರಮಾತ್ಮನಿಗೂ ಆತ್ಮರು ಗಳಿಗೂ ಭೇದವೂ ಮತ್ತು ಆತ್ಮರುಗಳಲ್ಲಿ ಪರಸ್ಪರ ಭೇದವೂ ಸಿದ್ಧವಾಗುತ್ತದೆ.

**ಶ್ಲೋಕ 13**—ನಿತ್ಯನಾದ ಆತ್ಮನಿಗೆ ಅನಿತ್ಯವಾದ ದೇಹದ ಸಂಬಂಧವುಂಟೆಂಬುದನ್ನು ಈ ಶ್ಲೋಕವು ತಿಳಿಸುತ್ತದೆ

"ದೇಹಿಗೆ ಅಂದರೆ ಜೀವಾತ್ಮನಿಗೆ ಹೇಗೆ ಈ ದೇಹದಲ್ಲಿ ಕೌಮಾರ, ಯೌವನ, ಮುಪ್ಪು ಮುಂತಾದ ಅವಸ್ಥೆಗಳು ಪ್ರಾಪ್ತವಾಗುತ್ತವೆಯೋ ಹಾಗೆಯೇ ದೇಹಾಂತರದ ಪ್ರಾಪ್ತಿಯೂ ಆಗುತ್ತವೆ ಧೀರನಾದ ಪುರುಷನು ಇದಕ್ಕಾಗಿ ಶೋಕಿಸುವುದಿಲ್ಲ."

ಅಂದರೆ ತನ್ನ ದೇಹದಲ್ಲಿ ಕೌಮಾರ ಅವಸ್ಥೆಯು ಹೋಗಿ ಯೌವನ ಮುಂತಾದ ಅವಸ್ಥೆಗಳು ಬಂದಾಗ ಯಾವನಾದರೂ ತಾನು ನಾಶವಾದೆನೆಂದು ತಿಳಿದು ವ್ಯಸನ ಪಡುತ್ತಾನೆಯೇ ? ಇಲ್ಲ. ಆತ್ಮನಲ್ಲಿರುವ ಸ್ಥಿರಬುದ್ಧಿಯೇ ಇದಕ್ಕೆ ಕಾರಣ. ಬಾಲಕ ನಾಗಿದ್ದ ತಾನೇ ಈಗಲೂ ಅಂದರೆ ಯುವಕನಾದ ಮೇಲೂ ಮತ್ತು ಮುಂದೆ ಮುದುಕನಾದ ಮೇಲೂ ಸ್ಥಿರನಾಗಿ ಇರುವು ದಾಗಿ ತಿಳಿದುಕೊಂಡಿರುವುದರಿಂದ ಅವನು ದುಃಖಿಸುವುದಿಲ್ಲ ಇದೇ ರೀತಿ ಧೀರನಾದ ಪುರುಷನು (ಜ್ಞಾನಿಯು) ದೆಹಾಂತರ ಪ್ರಾಪ್ತಿಯಾದರೂ ಅಂದರೆ ಈ ದೇಹವು ನಾಶವಾಗಿ ಬೇರೆ ದೇಹವು ಪ್ರಾಪ್ತವಾದಾಗಲೂ, ಆತ್ಮನಾದ ತಾನು ಮಾತ್ರ ಶಾಶ್ವತನೆಂಬ ದೃಢ ಜ್ಞಾನವನ್ನು ಹೊಂದಿರುವುದರಿಂದ ಶೋಕಿಸುವುದಿಲ್ಲ ಆತ್ಮನು ನಿತ್ಯನಾಗಿರುವುದರಿಂದ ಆತ್ಮನ ವಿಷಯವಾಗಿ ದುಃಖಪಡಲು ಕಾರಣವಿಲ್ಲ.

ಜೀವಾತ್ಮನು ನಿತ್ಯನಾಗಿದ್ದಾಗ್ಯೂ ಅನಾದಿಕರ್ಮವಶನಾಗಿ ಆಯಾ ಕರ್ಮಕ್ಕೆ ಯೋಗ್ಯವಾದ ದೇಹ ಸಂಬಂಧವನ್ನು ಹೊಂದುತ್ತಾನೆ ಹಾಗಾದರ ಕರ್ಮ ಬಂಧನ ನಿವೃತ್ತಿಗಾಗಿ ಅವನು ಮಾಡಬೇಕಾದ ಕರ್ತವ್ಯವೇನೆಂದರೆ ತಾನು ಪಡೆದಿರುವ ಆಯಾ ದೇಹಗಳಿಂದ, ತನ್ನ ವರ್ಣಕ್ಕೆ ಅನುಗುಣವಾದ, ಶಾಸ್ತ್ರೀಯವಾದ ಯುದ್ಧವೇ ಮೊದಲಾದ ಕರ್ಮಗಳನ್ನು ಫಲಾಸಕ್ತಿಯಿಲ್ಲದೆ ಮಾಡುತ್ತಿರಬೇಕು ಮತ್ತು ಹಾಗೆ ಕರ್ಮ ಮಾಡುವ ಕಾಲದಲ್ಲಿ ಇಂದ್ರಿಯ ಮತ್ತು ವಿಷಯಗಳ ಸಂಯೋಗ ದಿಂದ ಉಂಟಾಗುವ ಶೀತೋಷ್ಣಾದಿ ಸುಖ ದುಃಖಗಳನ್ನು ಅವುಗಳು ಅನಿವಾರ್ಯಗಳೆಂದು ತಿಳಿದು ತನ್ನ ಶಾಸ್ತ್ರೀಯ ಕರ್ಮಗಳು ಪೂರ್ತಿಯಾಗುವವರಿಗೂ ಸಹಿಸಿಕೊಳ್ಳಬೇಕು. ಇದನ್ನು ಮುಂದಿನ ಶ್ಲೋಕವು ವಿವರಿಸುತ್ತದೆ

**ಶ್ಲೋಕ 14**—"ಅರ್ಜುನನೇ ! ಮಾತ್ರೆಗಳ ಸ್ಪರ್ಶಗಳು (ವಿಷಯಗಳ ಮತ್ತು ಇಂದ್ರಿಯಗಳ ಸಂಯೋಗಗಳು) ಶೀತೋಷ್ಣಾದಿ ಸುಖ ದುಃಖಗಳನ್ನು ಉಂಟುಮಾಡುತ್ತವೆ ಮತ್ತು ಅವುಗಳು ಬಂದು ಹೋಗುವಂತಹವುಗಳೂ (ಉತ್ಪತ್ತಿ ವಿನಾಶವುಳ್ಳವುಗಳೂ) ಅನಿತ್ಯವಾದವುಗಳೂ ಆಗಿವೆ ಅವುಗಳನ್ನು ನೀನು ಸಹಿಸಿಕೊ"–

ಅಂದರೆ–ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಗುಣಗಳು ಅವುಗಳಿಗೆ ಆಶ್ರಯ ಸ್ಥಾನಗಳಾದ ಆಕಾಶ, ವಾಯು ತೇಜಸ್ಸು, ಅಪ್ಪು, ಪೃಥಿವೀ ಎಂಬ ಪಂಚತನ್ಮಾತ್ರೆಗಳ ಕಾರ್ಯ ವಾಗಿರುವುದರಿಂದ ಅವುಗಳಿಗೆ ಮಾತ್ರೆ ಎಂದು ಹೆಸರು ಆತ್ಮನಿಗೆ ಅನಾದಿ ಕರ್ಮ ಪ್ರಾಪ್ತವಾದ ದೇಹದ ಸಂಬಂಧವಿರುವುದರಿಂದ ಈ ಮಾತ್ರೆಗಳು ಅಂದರೆ ಶಬ್ದ, ಸ್ಪರ್ಶ, ರೂಪ ರಸ, ಗಂಧಗಳೆಂಬ ಗುಣಗಳು ಕಿವಿ, ಚರ್ಮ ಕಣ್ಣು, ನಾಲಿಗೆ, ಮೂಗು ಮುಂತಾದ ಪಂಚೇಂದ್ರಿಯಗಳೊಂದಿಗೆ ಸಂಯೋಗ ಹೊಂದಿ ದಾಗ, ಶೀತ, ಉಷ್ಣ, ಮೃದು, ಕಠಿಣ, ಮುಂತಾದ ಸುಖ ದುಃಖಗಳ ಅನುಭವವು ಉಂಟಾಗುತ್ತದೆ ಆದರೆ ಇದು ಕರ್ಮಾಧೀನವಾಗಿ ಬರುವುದರಿಂದ ಬಂಧನಕ್ಕೆ ಕಾರಣವಾದ ಕರ್ಮವು ನಾಶವಾದಾಗ ನಾಶವಾಗುತ್ತವೆ ಇವುಗಳು ಆಗಾಗ ಬಂದು ಹೋಗುತ್ತವೆಯೇ ಹೊರತು ಸ್ಥಿರವಲ್ಲ ಅನಿತ್ಯವಾದವು ಗಳಾಗಿವೆ ಆದ್ದರಿಂದ ಇವುಗಳನ್ನು ಸಹಿಸಿಕೊಳ್ಳಬೇಕು ಧೈರ್ಯವಂತನಾದ ನೀನು ಶಾಸ್ತ್ರೀಯವಾದ ಯುದ್ಧಾದಿ ಕರ್ಮಗಳು ಸಮಾಪ್ತವಾಗುವವರೆಗೂ ಅದನ್ನು ಮಾಡುವಾಗ ಬರುವ ಸಕಲ ಸುಖ ದುಃಖಗಳನ್ನು ಸಹಿಸಿಕೊಳ್ಳಲೇಬೇಕು.

**ಶ್ಲೋಕ 15**—ಸುಖ ದುಃಖಗಳನ್ನು ಏಕೆ ಸಹಿಸಿಕೊಳ್ಳಬೇಕೆಂಬುದನ್ನು ಈ ಶ್ಲೋಕವು ತಿಳಿಸುತ್ತದೆ-"ಸುಖ ದುಃಖಗಳನ್ನು ಸಮನಾಗಿ ಕಾಣುವ ಧೀರನಾದ ಯಾವ ಶ್ರೇಷ್ಠ ಪುರುಷನನ್ನು ಇವುಗಳು (ವಿಷಯಗಳ ಮತ್ತು ಇಂದ್ರಿಯಗಳ ಸಂಯೋಗದಿಂದ ಸುಖ ದುಃಖಾದಿಗಳು) ವ್ಯಾಕುಲ ಪಡಿಸುವುದಿಲ್ಲವೋ ಅವನೇ ಅಮೃತತ್ತ್ವಕ್ಕೆ ಯೋಗ್ಯನು "-

ಅಂದರೆ ಯಾವ ಪುರುಷ ಶ್ರೇಷ್ಠನು ಈ ಅನಿವಾರ್ಯವಾದ ದುಃಖಗಳನ್ನು ಸುಖಕ್ಕೆ ಸಮಾನವಾಗಿ ಭಾವಿಸುತ್ತಾ, ಕರ್ಮಾನುಷ್ಠಾನ ಕಾಲದಲ್ಲಿ ಪ್ರಾಪ್ತವಾಗುವ ಶಸ್ತ್ರಪಾತವೇ ಮೊದಲಾದ ಕಠೋರ ಸ್ಪರ್ಶಗಳಿಂದ ವ್ಯಸನಗೊಳ್ಳದೆ, ತನ್ನ ವರ್ಣೋಚಿತವಾದ ಯುದ್ಧಾದಿ ಕರ್ಮಗಳನ್ನು ಫಲಾಭಿಸಂಧಿ ರಹಿತನಾಗಿ, ಮೋಕ್ಷಕ್ಕೆ ಸಾಧನಗಳೆಂದು ತಿಳಿದು ಮಾಡುತ್ತಾನೆಯೋ ಅವನು ಅಮೃತತ್ತ್ವಕ್ಕೆ ಯೋಗ್ಯನಾಗಿರುತ್ತಾನೆ ಅಂದರೆ ಇಂತಹ ಕ್ಲೇಶಗಳಾವುವೂ ಇಲ್ಲದ ನಿರತಿಶಯವಾದ ಸುಖವಾದ ಅಮೃತತ್ತ್ವವನ್ನು ಸಾಧಿಸಲು ಶಕ್ತನಾಗುತ್ತಾನೆ ಆದರೆ ದುಃಖವನ್ನು ಸಹಿಸಲಾರದ ನಿನ್ನಂತಹವನಿಂದ ಅಮೃತತ್ತ್ವವನ್ನು ಸಾಧಿಸಲು ಆಗುವುದಿಲ್ಲ ಆತ್ಮನು ನಿತ್ಯನಾಗಿರುವುದರಿಂದ ಇವೆಲ್ಲವನ್ನೂ ಸಹಿಸಿಕೊಳ್ಳುವುದೇ ನಿನಗ ಈಗಿನ ಕರ್ತವ್ಯವಾಗಿದೆ.

**ಶ್ಲೋಕ 16**—ಆತ್ಮನು ನಿತ್ಯನೆಂದೂ, ದೇಹಕ್ಕೆ ನಾಶಹೊಂದುವುದೇ ಸ್ವಭಾವವೆಂದೂ ಮೊದಲೇ ಹೇಳಿ ಆಗಿದೆ ಅದನ್ನೇ ಮುಂದಿನ ಶ್ಲೋಕಗಳಲ್ಲಿ ಮತ್ತೆ ಸಮರ್ಥನೆ ಮಾಡಿ ತಿಳಿಸಿದ್ದಾರೆ-"ಅಸತ್ತಿಗೆ (ದೇಹಕ್ಕೆ) ಸದ್ಭಾವವಿಲ್ಲ (ಸ್ಥಿರವಾದ ಇರುವಿಕೆಯಿಲ್ಲ ) ಸತ್ತಿಗೆ (ಆತ್ಮಕ್ಕೆ) ಅಸದ್ಭಾವವಿಲ್ಲ (ಅಸ್ಥಿರತ್ವವು ಇಲ್ಲ ) ಇವೆರಡರ (ದೇಹಾತ್ಮಗಳ) ನಿರ್ಣಯವು ಯಥಾರ್ಥ ಜ್ಞಾನ ಸಂಪನ್ನರಾದ ತತ್ತ್ವದರ್ಶಿಗಳಿಂದ ಸಾಕ್ಷಾತ್ಕರಿಸಲ್ಪಟ್ಟಿದೆ "

ಅಂದರೆ-ಅಸತ್ತಾದ ದೇಹಕ್ಕೆ ಸ್ಥಿರವಾದ ಇರುವಿಕೆಯಿಲ್ಲ, ಮತ್ತು ಸತ್ತಾದ ಆತ್ಮಕ್ಕೆ ಅಸ್ಥಿರತ್ವವಿಲ್ಲ ಇವೆರಡಕ್ಕೂ ಇದೇ ಸ್ವರೂಪವೆಂದು ತತ್ತ್ವ ತಿಳಿದ ಜ್ಞಾನಿಗಳು ಸಾಕ್ಷಾತ್ಕರಿಸಿ ನಿಷ್ಕರ್ಷೆ ಮಾಡಿದ್ದಾರೆ ಸತ್-ಎಂದರೆ ನಾಶವಿಲ್ಲದಿರುವಿಕೆ ಅಸತ್-ಎಂದರ ನಾಶವಾಗುವಿಕೆ ಆತ್ಮಸ್ವರೂಪವು ಸತ್ತಾಗಿರುವುದರಿಂದ ಆದು ನಾಶರಹಿತವಾದುದು ದೇಹದ ಸ್ವರೂಪವು ಅಸತ್ತಾಗಿರುವುದರಿಂದ ಅದು ನಾಶವಾಗತಕ್ಕದ್ದು ಎಂದು ನಿಶ್ಚಯಿಸಲ್ಪಟ್ಟಿದೆ ಎಂದು ತಾತ್ಪರ್ಯ. ಇದನ್ನು ಶ್ರೀ ವ್ಯಾಸ ಮಹರ್ಷಿಯು ವಿಷ್ಣು ಪುರಾಣದಲ್ಲೂ ತಿಳಿಸಿಪ್ಪಾರೆ ದೇಹ ಮತ್ತು ಆತ್ಮಗಳ ಸ್ವಭಾವ ತಿಳಿಯದೆ ಮೋಹಗೊಂಡ ಅರ್ಜುನನ ಮೋಹ ಶಾಂತಿಗಾಗಿ ಶ್ರೀಕೃಷ್ಣನು ದೇಹಾತ್ಮರುಗಳ ಅಸ್ಥಿರತ್ವ, ಸ್ಥಿರತ್ವರೂಪವಾದ ಸ್ವಭಾವಗಳ ವಿವೇಕವನ್ನು ಇಲ್ಲಿ ಹೇಳಿದ್ದಾನ ಇದೇ ವಿಷಯವನ್ನೇ "ಗತಾಸೂನಗತಾಸೂಂಶ್ಚ ನಾನು ಶೋಚಂತಿ"-ಅಂದರೆ ಮರಣಹೊಂದುವ ದೇಹವನ್ನು ಕುರಿತಾಗಲಿ ಅವಿನಾಶಿಯಾದ ಆತ್ಮನನ್ನು ಕುರಿತಾಗಲಿ ಪಂಡಿತರು ಶೋಕಿಸುವುದಿಲ್ಲ-ಎಂದು 11 ನೇ ಶ್ಲೋಕದಲ್ಲಿ ಮೊದಲು ಪ್ರಾರಂಭಿಸಿ ಮುಂದಿನ ಶ್ಲೋಕಗಳಲ್ಲೂ ಮತ್ತೆ ಮತ್ತೆ ಸಮರ್ಥನೆ ಮಾಡಿ ತಿಳಿಸುತ್ತಾನೆ

**ಶ್ಲೋಕ 17**—ಆತ್ಮನ ಅವಿನಾಶಿತ್ವವು ಹೇಗೆ ಸಿದ್ಧವಾಗುತ್ತದೆ ಎಂಬುದನ್ನು ಈ ಶ್ಲೋಕವು ತಿಳಿಸುತ್ತದೆ "ಪ್ರಪಂಚದಲ್ಲಿರುವ ಈ ಅಚೇತನ ವಸ್ತುಗಳೆಲ್ಲಾ ಯಾವ ಚೇತನ ವಸ್ತುವಿನಿಂದ ವ್ಯಾಪಿಸಲ್ಪಟ್ಟಿವೆಯೋ ಅದು (ಆ ಆತ್ಮತತ್ತ್ವವು) ನಾಶರಹಿತವಾದುದೆಂದು ತಿಳಿ. ನಾಶರಹಿತವಾದ ಇದಕ್ಕ (ಈ ಆತ್ಮತತ್ತ್ವಕ್ಕೆ) ವಿನಾಶವನ್ನು ಉಂಟುಮಾಡಲು ಯಾವುದಕ್ಕೂ ಸಾಮರ್ಥ್ಯವಿಲ್ಲ."

ಅಂದರ ಲೋಕದಲ್ಲಿ ಶಸ್ತ್ರ, ಜಲ ಅಗ್ನಿ, ವಾಯು ಮುಂತಾದ ವಸ್ತುಗಳು, ಒಂದು ವಸ್ತುವನ್ನು ನಾಶಪಡಿಸುವಾಗ ಅದನ್ನು ಪೂರ್ತಿಯಾಗಿ ವ್ಯಾಪಿಸಿಕೊಂಡು ಅದನ್ನು ನಾಶಪಡಿಸುತ್ತವೆ ಅಂದರೆ ನಾಶಹೊಂದುವ ವಸ್ತುವು ವ್ಯಾಪಿಸಲ್ಪಟ್ಟು ನಾಶಮಾಡುವ ವಸ್ತುವು ಅದನ್ನು ವ್ಯಾಪಿಸಿಕೊಂಡು ಇರುವುದು ಲೋಕಾನುಭವವು ಆದರೆ ಆತ್ಮತತ್ತ್ವವು ಅತಿ ಸೂಕ್ಷ್ಮವಾಗಿರುವುದರಿಂದಲೂ, ಇತರ ಸಕಲ ಜಡ ಪದಾರ್ಥಗಳೂ ಅದಕ್ಕಿಂತ ಸ್ಥೂಲವಾಗಿರುವುದರಿಂದಲೂ, ಆತ್ಮಕ್ಕಿಂತ ಸೂಕ್ಷ್ಮವಾಗಿ ಅದನ್ನು ವ್ಯಾಪಿಸಿ ನಾಶಗೊಳಿಸುವ ಯಾವ ವಸ್ತುವೂ ಇಲ್ಲ. ಆತ್ಮನನ್ನು ಯಾವ ವಸ್ತುವೂ ನಾಶಗೊಳಿಸಲಾರದು ಆದ್ದರಿಂದ ಆತ್ಮತತ್ತ್ವಕ್ಕೆ ಎಂದಿಗೂ ನಾಶವಿಲ್ಲ

**ಶ್ಲೋಕ 18**—ದೇಹಾದಿಗಳಿಗೆ ನಾಶಹೊಂದುವುದೇ ಸ್ವಭಾವವೆಂದು .ಈ ಶ್ಲೋಕವು ತಿಳಿಸುತ್ತದೆ-"ನಾಶರಹಿತನಾದ, ಇಂದ್ರಿಯಾದಿಗಳಿಂದ ಗ್ರಹಿಸಲು ಅಸಾಧ್ಯನಾದ, ಶಾಶ್ವತನಾದ ಶರೀರಿಯ (ಆತ್ಮನ) ಈ ದೇಹಗಳು ನಾಶವುಳ್ಳವುಗಳೆಂದು ಹೇಳಲ್ಪಟ್ಟಿವ. ಆದ್ದರಿಂದ ಅರ್ಜುನ ! ನೀನು ಯುದ್ಧ ಮಾಡು "

ಈ ಶ್ಲೋಕದಲ್ಲಿ ದೇಹಾತ್ಮರುಗಳ ಪರಸ್ಪರ ವಿಲಕ್ಷಣತೆಯನ್ನು ವ್ಯಕ್ತವಾಗಿ ತಿಳಿಸಿದ್ದಾರೆ. ಕೆಲವು ಅಂಗಗಳಿಂದ ಕೂಡಿ ವೃದ್ಧಿಯಾಗಿರುವ ಮಡಕೆ ಮುಂತಾದ ವಸ್ತುಗಳು ನಶಿಸುವುದನ್ನು ನಾವು ನೋಡುತ್ತಿದ್ದೇವೆ. ಹಾಗೆಯೇ ಪಂಚಭೂತಗಳ ಸೇರುವಿಕೆಯಿಂದ ವೃದ್ಧಿ ಹೊಂದಿರುವ, ಕಣ್ಣಿಗೆ ಕಾಣುವ ಈ ದೇಹಗಳೂ ಕೂಡ ಹಲವು ಅಂಗಗಳಿಂದ ಕೂಡಿ ವೃದ್ಧಿಯಾಗಿ ಬೇರೆ ಬೇರೆ ಆಕಾರಗಳನ್ನು ಪಡೆಯುತ್ತಾ ನಾಶವಾಗುತ್ತವೆ. ಆತ್ಮನಾದರೋ ದೇಹದ ಹಾಗೆ ಪಂಚಭೂತಗಳ ಸಂಘಾತದಿಂದ ವೃದ್ಧಿ ಹೊಂದುವಂತಹುದಲ್ಲ. ಇವಕ್ಕೆ ಅವಯವ ಸಮುದಾಯವಿಲ್ಲ. ಎಲ್ಲಾ ದೇಹದಲ್ಲಿಯೂ, ದೇಹದ ಎಲ್ಲಾ ಭಾಗದಲ್ಲಿಯೂ "ನಾನು ಇದನ್ನು ತಿಳಿಯುತ್ತೇನೆ" ಎಂದು ದೇಹಕ್ಕಿಂತ ಬೇರೆಯಾಗಿ ಪ್ರಕಾಶಿಸುತ್ತದೆ. ಅಂದರೆ "ನಾನು ಈ ದೇಹವನ್ನು ಅರಿಯುತ್ತೇನೆ" ಎಂಬ ಅನುಭವವನ್ನು ಯಾವಾಗಲೂ ಪಡೆದಿದೆ; ಯಾವಾಗಲೂ ಒಂದೇ ಆಕಾರವುಳ್ಳದ್ದಾಗಿದೆ (ಜ್ಞಾನ ಸ್ವರೂಪವುಳ್ಳದ್ದಾಗಿದೆ), ದೇಹದ ಹಾಗೆ ಇದಕ್ಕೆ ಆಯಾ ಪ್ರದೇಶಗಳಲ್ಲಿ ಆಯಾ ಆಕಾರವು ತೋರಿಬರುವುದಿಲ್ಲ; ಮತ್ತು ಎಲ್ಲಾ ವಸ್ತುಗಳನ್ನೂ ವ್ಯಾಪಿಸಿ ವ್ಯಾಪಕನಾಗಿದೆ. ಹೀಗೆ ಏಕ ರೂಪವುಳ್ಳದ್ದಾಗಿಯೂ, ಅನೇಕ ಅವಯವಗಳ ಸಮುದಾಯವಿಲ್ಲದುದಾಗಿಯೂ ಪ್ರಮಾತಾವಾಗಿಯೂ, ಮತ್ತು ವ್ಯಾಪಕವಾಗಿಯೂ ಇರುವುದರಿಂದ ಆತ್ಮನು ನಿತ್ಯನು ಎಂಬುದು ಸಾಧಿಸಲ್ಪಟ್ಟಿದೆ—ದೇಹವಾದರೋ ಅನೇಕ ಅವಯವ ಸಮುದಾಯವನ್ನು ಹೊಂದಿರುವುದರಿಂದಲೂ, ಅನೇಕ ರೂಪಗಳನ್ನು ಹೊಂದುವುದರಿಂದಲೂ, ವ್ಯಾಪ್ಯವಾಗಿರುವುದರಿಂದಲೂ, ಅಂದರೆ ಆತ್ಮನಿಂದ ವ್ಯಾಪಿಸಲ್ಪಟ್ಟಿರುವುದರಿಂದಲೂ ಮತ್ತು ಶರೀರಿಯಾದ ಆತ್ಮನು ಕರ್ಮಫಲವನ್ನು ಅನುಭವಿಸುವುದಕ್ಕಾಗಿ ಉತ್ಪನ್ನವಾಗಿರುವುದರಿಂದಲೂ ನಾಶವುಳ್ಳದ್ದಾಗಿವೆ. ಆತ್ಮನಿಗೆ ಕರ್ಮ ಫಲವನ್ನು ಅನುಭವಿಸುವುದಕ್ಕಾಗಿ ಈ ದೇಹಗಳು ಉಂಟಾಗುವುದರಿಂದ ಆತ್ಮನ ಕರ್ಮವು ನಾಶವಾದಾಗ ಈ ದೇಹಗಳೂ ನಾಶವಾಗುತ್ತವೆ.

ಹೀಗೆ ದೇಹವು ವಿನಾಶ ಸ್ವಭಾವವುಳ್ಳದ್ದಾಗಿಯೂ, ಆತ್ಮನು ನಿತ್ಯನಾಗಿರುವ ಸ್ವಭಾವವುಳ್ಳವನಾಗಿಯೂ ಇರುವುದರಿಂದ ಇವೆರಡರ ವಿಷಯವಾಗಿ ಶೋಕಿಸಲು ಕಾರಣವಿಲ್ಲ. ಯುದ್ಧದಲ್ಲಿ ಶಸ್ತ್ರಪಾತವೇ ಮೊದಲಾದ ಕಠಿಣ ಸ್ಪರ್ಶವು ನಿನಗೂ, ಇತರರಿಗೂ ಅನಿವಾರ್ಯ ಪ್ರಾಪ್ತವಾಗುತ್ತದೆ. ಅದನ್ನು ಧೈರ್ಯದಿಂದ ಸಹಿಸಿಕೊಂಡು ಅಮೃತತ್ತ್ವ ಪ್ರಾಪ್ತಿಗೋಸ್ಕರ ಫಲಾಭಿಸಂಧಿ ರಹಿತನಾಗಿ ಯುದ್ಧ ರೂಪವಾದ ಈ ಕರ್ಮವನ್ನು ಮಾಡು ಎಂದು ಶ್ರೀ ಕೃಷ್ಣನು ಉಪದೇಶ ಮಾಡುತ್ತಾನೆ.

**ಶ್ಲೋಕ 19**—ಆತ್ಮನು ಕೊಲ್ಲುವವನೂ ಅಲ್ಲ ಮತ್ತು ಕೊಲ್ಲಲ್ಪಡುವವನೂ ಅಲ್ಲ ಎಂದು ಈ ಶ್ಲೋಕವು ತಿಳಿಸುತ್ತದೆ. "ಯಾವನು ಈ ಆತ್ಮವನ್ನು ಕೊಲ್ಲುವವನನ್ನಾಗಿ (ಕೊಲ್ಲಲು ಕಾರಣನೆಂದು) ತಿಳಿಯುತ್ತಾನೆಯೋ, ಯಾವನು ಇದನ್ನು ಕೊಲ್ಲಲ್ಪಟ್ಟುದನ್ನಾಗಿ ತಿಳಿಯುತ್ತಾನೆಯೋ ಅವರಿಬ್ಬರೂ ಸರಿಯಾಗಿ ತಿಳಿದವರಲ್ಲ. ಆತ್ಮವು ಕೊಲ್ಲುವುದೂ ಇಲ್ಲ ಕೊಲ್ಲಲ್ಪಡುವುದೂ ಇಲ್ಲ."

ಮೇಲೆ ತಿಳಿಸಿರುವ ಕಾರಣಗಳಿಂದ ಆತ್ಮನು ನಿತ್ಯನಾಗಿರುವುದರಿಂದ ಅವನನ್ನು ಕೊಲ್ಲುವಂತಹ ವಸ್ತು ಯಾವುದೂ ಇಲ್ಲ. ಅದೇ ಕಾರಣದಿಂದಲೇ ಆತ್ಮನು ಇತರ ಆತ್ಮಗಳನ್ನು ಕೊಲ್ಲತಕ್ಕವನೂ ಅಲ್ಲ. ಆದರೆ ಕೊಲ್ಲುವುದು ಎಂದರ ಏನು ? ಆತ್ಮವನ್ನು ಶರೀರದಿಂದ ವಿಯೋಗ ಮಾಡುವುದು (ಪ್ರತ್ಯೇಕ ಮಾಡುವುದು) ಎಂದು ಅರ್ಥವೇ ವಿನಹ ಆತ್ಮವನ್ನು ನಷ್ಟ ಮಾಡುವುದು ಎಂದು ಅರ್ಥವಲ್ಲ. ಆದರೆ ಶಾಸ್ತ್ರದಲ್ಲಿ ಯಾವ ಪ್ರಾಣಿಯನ್ನೂ ಕೊಲ್ಲಬೇಡ ಎಂದು ಹೇಳಿದೆಯಲ್ಲ ಅದು ಏಕೆ ಎಂದರೆ ಅಲ್ಲಿಯೂ ಕೂಡ ಪ್ರಾಣಿಯನ್ನು ಅದರ ಶರೀರದಿಂದ ವಿಯೋಗವಡಿಸಬೇಡ ಎಂಬುದೇ ಅರ್ಥ. ಶಾಸ್ತ್ರಗಳು ವಿಹಿತವಲ್ಲದ ಶರೀರ ವಿಯೋಗ ಮಾಡುವುದನ್ನು ನಿಷೇಧಿಸುತ್ತವೆ.

**ಶ್ಲೋಕ 20**—ಹೀಗೆ ಆತ್ಮನು ನಿತ್ಯನೂ ಪರಿಣಾಮ ರಹಿತನೂ ಆಗಿರುವುದರಿಂದ ಅವನಿಗೆ ಅಚೇತನವಾದ ದೇಹದ ಜನ್ಮ ಮರಣಾದಿ ಸಮಸ್ತ ಧರ್ಮಗಳು ಯಾವುವೂ ಇಲ್ಲವೆಂದು ಈ ಶ್ಲೋಕದಲ್ಲಿ ತಿಳಿಸಿದೆ.

"ಈ ಆತ್ಮನು ಎಂದೂ ಹುಟ್ಟುವುದಿಲ್ಲ; ಎಂದೂ ಸಾಯುವುದಿಲ್ಲ, ಒಂದು ಸಲ ಉಂಟಾಗಿ (ಹುಟ್ಟಿ) ಮತ್ತೆ (ಪುನಃ) ಇರುವುದಿಲ್ಲವೆಂಬುದಿಲ್ಲ. ಆತ್ಮನು ಜನ್ಮ ರಹಿತನು, ನಿತ್ಯನು, ಶಾಶ್ವತನು, ಸನಾತನನು (ಪುರಾತನನಾದವನು) ಆಗಿದ್ದಾನೆ. ಶರೀರವು ಕೊಲ್ಲಲ್ಪಟ್ಟರೂ ಈ ಆತ್ಮನು ಕೊಲ್ಲಲ್ಪಡುವುದಿಲ್ಲ".

ಇಲ್ಲಿ ಆತ್ಮನು ಹುಟ್ಟುವುದಿಲ್ಲ, ಸಾಯುವುದಿಲ್ಲ ಎನ್ನುವುದರ ಅಭಿಪ್ರಾಯವೇನೆಂದರೆ-ಇಂದು ಎಲ್ಲಾ ದೇಹಗಳಲ್ಲಿಯೂ ಉಂಟಾಗುತ್ತಿರುವ ಸರ್ವರಿಂದಲೂ ಅನುಭವಿಸಲ್ಪಡುತ್ತಿರುವ ಜನ್ಮ ಮತ್ತು ಮರಣಾದಿಗಳು ಎಂದಿಗೂ ಆತ್ಮನನ್ನು ಮುಟ್ಟುವುದಿಲ್ಲ ಎಂದು ಅರ್ಥ. ಒಂದು ಸಲ ಹುಟ್ಟಿ ಮತ್ತೆ ಇರುವುದಿಲ್ಲ ಎಂಬುದಿಲ್ಲ ಎಂದರೆ ಕಲ್ಪಾದಿಯಲ್ಲಿ ಈ ಆತ್ಮನು ಹುಟ್ಟಿ ಮತ್ತೆ ಕಲ್ಪದ ಅಂತ್ಯದಲ್ಲಿ ಇರುವುದಿಲ್ಲ ಎಂಬುದಿಲ್ಲ ಆತ್ಮನು ಕಲ್ಪದ ಮೊದಲು ಉತ್ಪನ್ನನಾಗುವುದೂ ಇಲ್ಲ, ಕಲ್ಪದ ಕೊನೆಯಲ್ಲಿ ನಾಶವಾಗುವುದೂ ಇಲ್ಲ ಈ ಆತ್ಮನು ಜನ್ಮರಹಿತನು. ಆದ್ದರಿಂದಲೇ ನಿತ್ಯನೂ ಶಾಶ್ವತನೂ ಆಗಿರುತ್ತಾನೆ ಪ್ರಕೃತಿಯಲ್ಲಿ ಉಂಟಾಗುತ್ತಿರುವ ಅವಿಶದವಾದ ನಿರಂತರವಾದ ಪರಿಣಾಮಗಳೂ ಕೂಡ ಆತ್ಮನಿಗೆ ಅನ್ವಯಿಸುವುದಿಲ್ಲ ಆದ್ದರಿಂದ ಆತ್ಮನು ಪುರಾತನನಾದವನು. ಹಾಗೆ ಪುರಾತನನಾದಾಗ್ಯೂ ಹೊಸಬನಾಗಿರುತ್ತಾನೆ. ಯಾವಾಗಲೂ ಪೂರ್ವದಲ್ಲಿ ಇಲ್ಲದವನಂತೆ (ಹೊಸದಾಗಿ) ಅನುಭವಿಸಲ್ಪಡುವನು. ಆದ್ದರಿಂದ ಶರೀರವು ಕೊಲ್ಲಲ್ಪಟ್ಟ ಮೇಲೂ ಈ ಆತ್ಮನು ಕೊಲ್ಲಲ್ಪಡುವುದಿಲ್ಲ.

**ಶ್ಲೋಕ – 21**

"ಯಾವನು ಈ ಆತ್ಮನನ್ನು ನಾಶರಹಿತನು, ನಿತ್ಯನು, ಜನ್ಮರಹಿತನು, ವ್ಯಯವಿಲ್ಲದವನು (ವೃದ್ಧಿಕ್ಷೀಣಾದಿಗಳಿಲ್ಲದವನು) ಎಂದು ತಿಳಿಯುತ್ತಾನೆಯೋ ಆ ಪುರುಷನು ಯಾರನ್ನು (ಯಾವ ಆತ್ಮನನ್ನು) ಹೇಗೆ ಕೊಲ್ಲುವನು ".

ಮೇಲೆ ತಿಳಿಸಿರುವಂತೆ ಆತ್ಮನು ನಾಶರಹಿತನೂ, ಜನ್ಮರಹಿತನೂ ವೃದ್ಧಿಕ್ಷೀಣಾದಿ ವ್ಯಯರಹಿತನೂ ಆಗಿರುವುದರಿಂದ ಈ ಆತ್ಮನನ್ನು ನಿತ್ಯನೆಂದು ಯಾವ ಪುರುಷನು ತಿಳಿಯುತ್ತಾನೆಯೋ ಆ ಮನುಷ್ಯನು ದೇವ, ಮನುಷ್ಯ, ಪ್ರಾಣಿ, ಗಿಡ ಮುಂತಾದ ಶರೀರಗಳಲ್ಲಿ ನೆಲಸಿರುವ ಆತ್ಮರುಗಳಲ್ಲಿ ಯಾವ ಆತ್ಮನನ್ನೇ ಆಗಲಿ ಹೇಗೆ ಕೊಲ್ಲಿಸುವನು ಮತ್ತು ಕೊಲ್ಲುವನು ಅಂದರೆ ಹೇಗೆ ನಾಶ ಮಾಡುವನು ? ಹೇಗೆ ತಾನೆ ಆತ್ಮನನು ಕೊಲ್ಲಲು ಸಾಧಕನಾಗುವನು ಎಂದು ಅರ್ಥ. ಅರ್ಜುನ ! ನೀನು ಈ ಆತ್ಮರುಗಳನ್ನು ಕೊಲ್ಲಿಸುವೆನು, ಕೊಲ್ಲುವೆನು ಎಂದು ಶೋಕಿಸುತ್ತಿರುವುದಕ್ಕೆ ನಿನಗೆ ಆತ್ಮ ಸ್ವರೂಪ ಯಥಾರ್ಥ ಜ್ಞಾನದ ಅರಿವಿಲ್ಲದಿರುವಿಕೆಯೇ ಕಾರಣ ಎಂದು ಅಭಿಪ್ರಾಯ.

**ಶ್ಲೋಕ 22—**

ಆತ್ಮರುಗಳು ನಿತ್ಯರಾಗಿರುವುದರಿಂದ, ಮರಣವೆಂಬುದು ಕೇವಲ ಶರೀರ ವಿಶ್ಲೇಷ ಅಂದರೆ ಜೀವವು ಶರೀರವನ್ನು ಬಿಟ್ಟು ಹೋಗುವಿಕೆ ಎಂದು ಮತ್ತು ಅದರಿಂದ ಆತ್ಮನಿಗೆ ಯಾವ ಕೇಡೂ ಇಲ್ಲವೆಂದೂ ನಾವು ತಿಳಿದಿದ್ದರೂ, ರಮಣೀಯವಾದ ಭೋಗಗಳನ್ನು ಅನುಭವಿಸಲು ಸಾಧನವಾದ ಶರೀರವು ನಾಶವಾದಾಗ " ಐಯ್ಯೋ ! ಇದು ಹೋಗುತ್ತದೆಯಲ್ಲಾ " ಎಂಬ ದುಃಖವು ಸಹಜವಾಗಿ ಉಂಟಾಗುತ್ತದೆ. ಶರೀರ ವಿಯೋಗ ರೂಪವಾದ ಶೋಕಕ್ಕೆ ಕಾರಣ ಇದ್ದೇ ಇರುತ್ತದೆಯಲ್ಲವೆ– ಎಂದರೆ ಹಾಗೆ ದುಃಖ ಪಡುವುದು ಉಚಿತವಲ್ಲ ಎಂದು ಈ ಶ್ಲೋಕದಲ್ಲಿ ಸಮಾಧಾನ ಹೇಳುತ್ತಾರೆ.

" ಮನುಷ್ಯನು ಹೇಗೆ ಜೀರ್ಣವಾದ (ಹಳೆಯ) ಬಟ್ಟೆಗಳನ್ನು ತ್ಯಜಿಸಿ ಬೇರೆ ಹೊಸ ಬಟ್ಟೆಗಳನ್ನು ಗ್ರಹಿಸುವನೋ ಹಾಗೆಯೇ ದೇಹದಲ್ಲಿರುವ ಈ ಜೀವಾತ್ಮನು ಜೀರ್ಣವಾದ ಶರೀರವನ್ನು ತ್ಯಜಿಸಿ ಬೇರೆ ಹೊಸ ಶರೀರವನ್ನು ಹೊಂದುತ್ತಾನೆ "

ಪರಿಣಾಮ ಪರಂಪರೆಯು ಅನಿವಾರ್ಯವಾದುದಾಗಿದೆ. ಆದ್ದರಿಂದ ಈ ವಿಷಯವಾಗಿ ಅಂದರೆ ದೇಹಗಳ ವಿನಾಶಕ್ಕಾಗಿ ನೀನು ಶೋಕಿಸುವುದು ಉಚಿತವಲ್ಲ.

### ಶ್ಲೋಕ 28—

"ಎಲೈ ಅರ್ಜುನನೇ! ಪ್ರಾಣಿಗಳ ಆದಿಯು ಅವ್ಯಕ್ತವಾಗಿದೆ. (ಅಂದರೆ ಮನುಷ್ಯಾದಿ ಪ್ರಾಣಿಗಳ ಜನ್ಮಕ್ಕೆ ಮೊದಲಿನ ಅವಸ್ಥೆಯು ಪ್ರತ್ಯಕ್ಷವಾಗಿ ಕಾಣುವುದಿಲ್ಲ) ಮಧ್ಯದ ಅವಸ್ಥೆಯು ವ್ಯಕ್ತವಾಗಿದೆ. (ಅಂದರೆ ಪ್ರಾಣಿಗಳು ಹುಟ್ಟಿದ ಮೇಲೆ ಅವುಗಳಿಗೆ ಈಗ ಇರುವ ಕೇವಲ ಮನುಷ್ಯತ್ವನೇ ಮೊದಲಾದ ಅವಸ್ಥೆ ಮಾತ್ರ ಪ್ರತ್ಯಕ್ಷವಾಗಿ ಕಾಣುತ್ತದೆ, ಮತ್ತು ಸತ್ತಮೇಲೆ ಉಂಟಾಗುವ ಅವಸ್ಥೆಯೂ ಅವ್ಯಕ್ತವಾಗಿದೆ (ಅಂದರೆ-ಸತ್ತ ಮೇಲೆ ಅವುಗಳಿಗೆ ಪ್ರಾಪ್ತವಾಗುವ ಉತ್ತರಾವಸ್ಥೆಯೂ ಕಾಣುವುದಿಲ್ಲ) ಇನ್ನು ಈ ವಿಷಯದಲ್ಲಿ ಚಿಂತೆಗೆ ಆಸ್ಪದವೆಲ್ಲಿಯದು—

ಹಿಂದಿನ ಶ್ಲೋಕದಲ್ಲಿ ವಿವರಿಸಿದಂತೆ ಸತ್‌ದ್ರವ್ಯಗಳಿಗೆ ಅವುಗಳ ಮೊದಲಿನ ಅವಸ್ಥೆಯು ಹೋಗಿ, ಎರಡನೆಯ ಅವಸ್ಥೆಯು ಪ್ರಾಪ್ತವಾಗುವುದನ್ನು ಪ್ರತ್ಯಕ್ಷವಾಗಿ ನೋಡುವುದರಿಂದ ನಮಗೆ ಸ್ವಲ್ಪ ದುಃಖ ವುಂಟಾಗಬಹುವುದು (ಅಂದರೆ ಮಡಕೆಯು ಒಡೆದು ಹೋಗಿ, ಮಡಕೆ ಚೂರುಗಳ ಅವಸ್ಥೆ ಮತ್ತು ಮಣ್ಣಿನ ಪುಡಿಗಳ ಅವಸ್ಥೆಯು ಪ್ರಾಪ್ತವಾದಾಗ ಅದನ್ನು ನೋಡಿ ನಮಗೆ ಸ್ವಲ್ಪ ದುಃಖವು ಉಂಟಾಗಬಹುದು) ಆದರೆ ಮನುಷ್ಯಾದಿ ಶರೀರಗಳು ನಾಶವಾದಾಗ, ಅಂದರೆ ಪ್ರಾಣಿಗಳ ಮರಣವು ಪ್ರಾಪ್ತವಾದಾಗ ಈ ಅಲ್ಪ ದುಃಖಕ್ಕೂ ಆಸ್ಪದವಿರುವುದಿಲ್ಲ ಏಕೆಂದರೆ ಅವುಗಳ ಅಂತಿಮ ಅವಸ್ಥೆಯು ನಮಗೆ ಕಾಣುವುದಿಲ್ಲ ಎಂಬ ಅಭಿಪ್ರಾಯು ಈ ಶ್ಲೋಕದಲ್ಲಿ ವಿವರಿಸಲ್ಪಟ್ಟಿದೆ.

ಮನುಷ್ಯಾದಿ ಪ್ರಾಣಿಗಳು ಮಡಕೆ ಮುಂತಾದ ವಸ್ತುಗಳ ಹಾಗೆ ಇಲ್ಲ ಅವುಗಳ ಪೂರ್ವಾವಸ್ಥೆಯು ಅಂದರೆ ಜನ್ಮಕ್ಕೆ ಹಿಂದಿನ ಅವಸ್ಥೆಯು ಪ್ರತ್ಯಕ್ಷವಾಗಿ ಕಾಣುವುದಿಲ್ಲ ಮತ್ತು ಅವುಗಳ ಉತ್ತರಾವಸ್ಥೆಯು ಅಂದರೆ ಸತ್ತ ಮೇಲಿನ ಅವಸ್ಥೆಯೂ ಪ್ರತ್ಯಕ್ಷವಾಗಿ ಕಾಣಿಸುವುದಿಲ್ಲ. ಕೇವಲ ಮನುಷ್ಯತ್ವವೆಂಬ ಮಧ್ಯದ ಅವಸ್ಥೆ ಮಾತ್ರ ಪ್ರತ್ಯಕ್ಷವಾಗಿ ಕಾಣುತ್ತಿದೆ ಮತ್ತು ಪ್ರಾಣಿಗಳು ತಮ್ಮ ತಮ್ಮ (ಪರಿಣಾಮ ಹೊಂದುವ) ಸ್ವಭಾವಗಳಿಂದ ಕೂಡಿವೆ. ಆದ್ದರಿಂದ ಅಂದರೆ ಮನುಷ್ಯಾದಿ ಜೀವಿಗಳ ಆದಿ ಅಂತ್ಯಗಳು ಅವ್ಯಕ್ತವಾಗಿರುವುದರಿಂದ ಅವುಗಳ ಹುಟ್ಟು ಸಾವುಗಳ ವಿಷಯದಲ್ಲಿ ಶೋಕಕ್ಕೆ ಕಾರಣವಿಲ್ಲವೆಂದು 26, 27, 28 ಮೂರು ಶ್ಲೋಕಗಳಿಂದ ತಿಳಿಸಿದ್ದಾರೆ.

### ಶ್ಲೋಕ 29

ಆತ್ಮನ ಯಥಾರ್ಥವಾದ ಸ್ವರೂಪವನ್ನು ತಿಳಿಯುವುದು ಸುಲಭ ಸಾಧ್ಯವಲ್ಲ ಎಂದು ಈ ಶ್ಲೋಕವು ತಿಳಿಸುತ್ತದೆ.

" ಯಾವನೋ ಒಬ್ಬನು (ಒಬ್ಬ ಪುಣ್ಯಾತ್ಮನು) ಈ ಆತ್ಮನನ್ನು ಆಶ್ಚರ್ಯದಿಂದ ನೋಡುತ್ತಾನೆ ಹಾಗೆಯೇ ಬೇರೆ ಯಾವನೋ ಒಬ್ಬನು (ಒಬ್ಬ ಪುಣ್ಯಾತ್ಮನು) ಈ ಆತ್ಮನನ್ನು ಆಶ್ಚರ್ಯದಿಂದ ಕೇಳುತ್ತಾನೆ ಹಾಗೆ ಕೇಳಿದರೂ ಕೂಡ ಯಾವನೊಬ್ಬನೂ ಈ ಆತ್ಮನನ್ನು ಯಥಾವತ್ತಾಗಿ ತಿಳಿಯುವುದಿಲ್ಲ "

ಅನಂತ ಜೀವರುಗಳಲ್ಲಿ ಮಹತ್ತರವಾದ ತಪಸ್ಸನ್ನುಮಾಡಿ ತನ್ನ ಪಾಪಗಳನ್ನೆಲ್ಲಾ ಹೋಗಲಾಡಿಸಿಕೊಂಡು, ಪುಣ್ಯವನ್ನು ಸಂಗ್ರಹಿಸಿಕೊಂಡಿರುವ ಯಾವನೋ ಒಬ್ಬ ಪುರುಷನು, ಮೇಲೆ ಹೇಳಿರುವ ಸ್ವಭಾವಗಳಿಂದ ಕೂಡಿರುವ ಮತ್ತು ತನಗಿಂತ ಬೇರೆಯಾದ ಸಮಸ್ತ ವಸ್ತುಗಳಿಗಿಂತ ವಿಜಾತೀಯವಾದ ರೂಪದಿಂದ ಕೂಡಿರುವ ಆತ್ಮನನ್ನು ಆಶ್ಚರ್ಯದಿಂದ ನೋಡುತ್ತಾನೆ. ಅದೇ ರೀತಿಯ ಯಾವನೋ ಒಬ್ಬ ಮಹಾಪುರುಷನು ಇತರರಿಗೆ ಆತ್ಮನ ವಿಷಯವನ್ನು ಆಶ್ಚರ್ಯದಿಂದ ತಿಳಿಸುತ್ತಾನೆ ಇದೇ ರೀತಿ ಯಾವನೋ ಒಬ್ಬನು ಆತ್ಮನ ವಿಷಯವನ್ನು ಕೇಳುತ್ತಾನೆ. ಹೀಗೆ ಕೇಳಿದರೂ ಆತ್ಮನು ವಾಸ್ತವವಾಗಿ ಹೇಗೆ ಇರುತ್ತಾನೆಂಬುದನ್ನು ನೋಡುವವರಲ್ಲಿಯೂ, ಆತನ ವಿಷಯವನ್ನು ಹೇಳುವವರಲ್ಲಿಯೂ, ಮತ್ತು ಅವನ ವಿಷಯವನ್ನು ಕೇಳುವವರಲ್ಲಿಯೂ ಕೂಡ. ಯಥಾರ್ಥವಾಗಿ ನೋಡುವಿಕೆಯೂ, ಯಥಾರ್ಥವಾಗಿ ಹೇಳುವಿಕೆಯೂ, ಮತ್ತು ಯಥಾರ್ಥವಾಗಿ ಕೇಳುವಿಕೆಯೂ ದುರ್ಲಭ ಎಂದು ಅಭಿಪ್ರಾಯ.

ಅಂದರೇನು, ದೇಹಕ್ಕಿಂತಲೂ ವಿಲಕ್ಷಣವಾದ, ಆಶ್ಚರ್ಯವಾದ ಸ್ವರೂಪವುಳ್ಳ ಈ ಆತ್ಮನನ್ನು ಸಾಕ್ಷಾತ್ಕರಿಸುವವನು ಬಹಳ ದುರ್ಲಭ, ಹಾಗೆ ಸಾಕ್ಷಾತ್ಕರಿಸಿದ ಮೇಲೆ ಅದನ್ನು ಇತರರಿಗೆ ಬೋಧಿಸುವವನು ಮತ್ತೂ ದುರ್ಲಭ; ಹಾಗೆ ಕೇಳಿದರೂ ಯಥಾರ್ಥವಾದ ಆತ್ಮನ ನಿಜಸ್ವರೂಪವನ್ನು ತಿಳಿದುಕೊಳ್ಳುವವನು ಇಲ್ಲವೇ ಇಲ್ಲವೆನ್ನಬಹುದು. ಆದ್ದರಿಂದ ಆತ್ಮನ ಯಥಾರ್ಥ ಸ್ವರೂಪವನ್ನು ತಿಳಿಯುವುದು ಸುಲಭಸಾಧ್ಯವಲ್ಲ. ನಾವು ನೋಡದ ವಸ್ತುವಿನ ವಿಚಾರವನ್ನು ಹೇಳಿದರೂ, ಕೇಳಿದರೂ ಆಶ್ಚರ್ಯವುಂಟಾಗುತ್ತದೆ ಆದ್ದರಿಂದ ಲೋಕದ ವಸ್ತುಗಳೆಲ್ಲಕ್ಕಿಂತಲೂ ಬೇರೆಯಾದ ಸ್ವರೂಪವನ್ನು ಹೊಂದಿರುವ ಆತ್ಮನ ವಿಷಯವನ್ನು ಹೇಳಿದರೂ, ಕೇಳಿದರೂ ನಮಗೆಲ್ಲಾ ಆಶ್ಚರ್ಯಕರವಾಗಿಯೇ ಇರುತ್ತದೆಯಲ್ಲವೇ !

**ಶ್ಲೋಕ—30**

ಸಮಸ್ತ ಪ್ರಾಣಿಗಳಲ್ಲಿ ಯಾರನ್ನು ಕುರಿತು ಶೋಕಿಸುವುದೂ ತರವಲ್ಲ ಎಂದು ಈ ಶ್ಲೋಕವು ತಿಳಿಸುತ್ತದೆ "ಸಮಸ್ತ ದೇಹಗಳಲ್ಲಿರುವ ದೇಹಿಯಾದ ಆತ್ಮನು ನಿತ್ಯವೂ (ಸದಾಕಾಲದಲ್ಲಿಯೂ) ವಧಿಸಲ್ಪಡುವವನಲ್ಲ ಆ ಕಾರಣದಿಂದ ಸಮಸ್ತ ಪ್ರಾಣಿಗಳನ್ನು ಕುರಿತು ಶೋಕಿಸುವುದು ಉಚಿತವಲ್ಲ"—

ದೇವಾದಿ ಸಮಸ್ತ ಜೀವರುಗಳ ದೇಹದಲ್ಲಿರುವ ಆತ್ಮನು ದೇಹವು ಕೊಲ್ಲಲ್ಪಟ್ಟರೂ ಕೂಡ ಸದಾಕಾಲದಲ್ಲಿಯೂ ಅವಧ್ಯನಾಗಿ ಅಂದರೆ ಕೊಲ್ಲಲ್ಪಡದವನಾಗಿ ಇರುತ್ತಾನೆ ಎಂಬುದನ್ನು ತಿಳಿ ಆದ್ದರಿಂದ ದೇವತೆಗಳಿಂದ ಹಿಡಿದು ಸ್ಥಾವರ ಪರ್ಯಂತ ಇರುವ ಸಮಸ್ತ ಪ್ರಾಣಿಗಳೂ ಅಂದರೆ ಜೀವಾತ್ಮರುಗಳೂ ಬೇರೆ ಬೇರೆ ಶರೀರಗಳನ್ನು ಹೊಂದಿದ್ದರೂ, ಮೇಲೆ ಹೇಳಿರುವ ಸೂಕ್ಷ್ಮತ್ವ, ಅಚ್ಛೇದ್ಯತ್ವವೇ ಮೊದಲಾದ ಸ್ವಭಾವದಿಂದ ಕೂಡಿರುವುದರಿಂದ ಸ್ವರೂಪತಃ ಸಮಾನರೂ ನಿತ್ಯರೂ ಆಗಿದ್ದಾರೆ ವಿಷಮತೆ ಮತ್ತು ಅನಿತ್ಯತೆ ಕೇವಲ ಶರೀರಕ್ಕೆ ಮಾತ್ರ ಸಂಬಂಧಪಟ್ಟವುಗಳಾಗಿವೆ. ಆದರೆ ಅದರೊಳಗಿರುವ ಯಾವ-ಆತ್ಮನಿಗೂ ನಾಶವೆಂಬುದು ಇಲ್ಲವೇ ಇರುವುದರಿಂದ ಭೀಷ್ಮರೇ ಮೊದಲಾದ ಶ್ರೇಷ್ಠಪುರುಷರನ್ನು ಕುರಿತು ಮಾತ್ರವೇ ಅಲ್ಲದೆ ದೇವಾದಿ ಸಮಸ್ತ ಪ್ರಾಣಿಗಳನ್ನು ಕುರಿತು ನೀನು ಶೋಕಿಸುವುದು ತರವಲ್ಲ.

**II ಕರ್ಮಯೋಗದ ನಿರೂಪಣೆ** (ಶ್ಲೋಕಗಳು 31–54)

**1. ಸ್ವಧರ್ಮವನ್ನು ಕರ್ಮಯೋಗವಾಗಿ ಆಚರಿಸುವುದೇ ನಿನ್ನ ಕರ್ತವ್ಯ.** (ಶ್ಲೋಕ 31–38)

**ಶ್ಲೋಕ 31**

ಕ್ಷತ್ರಿಯನಿಗೆ ಧರ್ಮಯುದ್ಧ ಮಾಡುವುದೇ ಸ್ವಧರ್ಮವು ಮತ್ತು ಶ್ರೇಯಸ್ಕರವು ಎಂದು ಈ ಶ್ಲೋಕವು ತಿಳಿಸುತ್ತದೆ

"ಸ್ವಧರ್ಮವನ್ನು ನೋಡಿದರೂ ನೀನು ಭಯಪಡಲು ಕಾರಣವಿಲ್ಲ ಏಕೆಂದರೆ ಕ್ಷತ್ರಿಯನಿಗೆ ಧರ್ಮಯುದ್ಧಕ್ಕಿಂತ ಶ್ರೇಯಸ್ಕರವಾದುದು ಬೇರೆ ಯಾವುದೂ ಇಲ್ಲ".

ದೇಹ ಮತ್ತು ಆತ್ಮಸ್ವರೂಪಗಳನ್ನು ಅರಿತ ಮೇಲೆ ನೀನು ಯುದ್ಧ ಮಾಡಲು ಭಯಪಡುವ ಕಾರಣವಿಲ್ಲವೆಂದು ಇಲ್ಲಿಯವರೆಗೆ ವಿವರಿಸಿ ಆಯಿತು ಇದಲ್ಲದೆ ನಿನ್ನ ಸ್ವಧರ್ಮವನ್ನು ಗಣನೆಗೆ ತಂದುಕೊಂಡರೂ ನೀನು ಯುದ್ಧಮಾಡಲು ಭಯಪಡಬೇಕಾಗಿಲ್ಲವೆಂದು ಮುಂದಿನ ಶ್ಲೋಕಗಳು ತಿಳಿಸುತ್ತವೆ. ಈಗ ಆರಂಭಿಸಿರುವ ಯುದ್ಧವು ಪ್ರಾಣಿಗಳನ್ನು ಕೊಲ್ಲುವುದರಲ್ಲಿ ಪರಿಣಮಿಸುವುದಾದರೂ ಕೂಡ ಅಗ್ನಿಷೋಮೀಯಾದಿ ಯಜ್ಞಗಳಂತೆ ಸ್ವಧರ್ಮವೆಂದು ಭಾವಿಸಲ್ಪಡಬೇಕೇ ವಿನಹ ಭಯಪಡಲು ಕಾರಣವಿಲ್ಲವು ಧರ್ಮವಾಗಿ ನ್ಯಾಯವಾಗಿ ಪ್ರಾಪ್ತವಾದ

ಯುದ್ಧಕ್ಕಿಂತ ಶ್ರೇಯಸ್ಕರವಾದುದು ಕ್ಷತ್ರಿಯನಿಗೆ ಬೇರೆ ಯಾವುದೂ ಇಲ್ಲ. ಶೌರ್ಯ, ತೇಜಸ್ಸು, ಧೃತಿ, ದಕ್ಷತೆ, ಯುದ್ಧದಲ್ಲಿ ಪಲಾಯನ ಮಾಡದಿರುವಿಕೆ, ದಾನ ಮತ್ತು ಈಶ್ವರ ಭಾವ ಇವುಗಳೆಲ್ಲವೂ ಕ್ಷತ್ರಿಯನಿಗೆ ಸ್ವಾಭಾವಿಕವಾದ ಕರ್ಮಗಳು ಎಂದು ಮುಂದೆ ಗೀತೆಯಲ್ಲಿಯೇ ಹೇಳಿದೆ ಅಗ್ನಿಷೋಮಿಯವೇ ಮೊದಲಾದ ಯಜ್ಞದಲ್ಲಿ ಉಂಟಾಗುವ ಪಶುವಧೆಯು ಹಿಂಸೆ ಯಲ್ಲ, ಏತಕ್ಕೆಂದರೆ ಅದರಿಂದ ಆ ಪಶುವಿಗೆ ನಿಕೃಷ್ಟವಾದ ಆಡಿನ ಶರೀರವು ಹೋಗಿ ಮಂಗಳಕರವಾದ ದೇಹವೂ ಸ್ವರ್ಗಾದಿ ಗಳ ಪ್ರಾಪ್ತಿಯೂ ಉಂಟಾಗುತ್ತದೆಯೆಂದು ವೇದದಲ್ಲಿ ಹೇಳಿದೆ ಇಲ್ಲಿ ಗೀತೆಯಲ್ಲಿಯೂ "ವಾಸಾಂಸಿ ಜೀರ್ಣಾನಿ" ಮುಂತಾದ ಶ್ಲೋಕಗಳಲ್ಲಿ ಯುದ್ಧದಲ್ಲಿ ಪ್ರಾಣತ್ಯಾಗ ಮಾಡುವವರಿಗೆ ಕಲ್ಯಾಣಮಯವಾದ ಶರೀರ ಪ್ರಾಪ್ತಿಯುಂಟೆಂದು ಹೇಳಿದೆ. ಆದ್ದರಿಂದ ಅಗ್ನಿಷೋಮಿಯಾದಿ ಯಜ್ಞಗಳಲ್ಲಿ ಉಂಟಾಗುವ ಪಶುವಧೆಯು ವೈದ್ಯನು ರೋಗಿಗಳನ್ನು ರಕ್ಷಿಸುವುದಕ್ಕಾಗಿ ಚಿಕಿತ್ಸೆಗಳನ್ನು ಮಾಡುವಂತೆ ಅವುಗಳ ರಕ್ಷಣೆಗಾಗಿ ಮಾಡಲ್ಪಡು ತ್ತವೆ ಎಂದು ಅಭಿಪ್ರಾಯ. ಧರ್ಮಪ್ರಾಪ್ತವಾದ ಈ ಯುದ್ಧದಲ್ಲಿ ಕೊಲ್ಲಲ್ಪಡುವವರೆಲ್ಲಾ ಉತ್ತಮಗತಿಯನ್ನು ಹೊಂದುತ್ತಾರೆಂದು ಹೇಳಿರುವುದರಿಂದ ಸ್ವಧರ್ಮವಾದ ಈ ಯುದ್ಧವು ಕ್ಷತ್ರಿಯನಾದ ನಿನಗೆ ಅವಕಾಶ ಸಿಕ್ಕಿರುವುದು ನಿನ್ನ ಅದೃಷ್ಟವೆಂದು ತಿಳಿಯ ಬೇಕೆಂದು ಈ ಶ್ಲೋಕದಲ್ಲಿ ಹೇಳಿದೆ.

'ತಾನಾಗಿಯೇ ಪ್ರಾಪ್ತವಾಗಿರುವ ಸ್ವರ್ಗದ ಬಾಗಿಲನ್ನು ತೆರೆದಂತಿರುವ, ಇಂತಹ (ಸ್ವಧರ್ಮರೂಪವಾದ) ಯುದ್ಧವನ್ನು ಭಾಗ್ಯಶಾಲಿಗಳಾದ ಕ್ಷತ್ರಿಯರು ಪಡೆಯುತ್ತಾರೆ"

ಯಾವ ಪ್ರಯತ್ನವೂ ಇಲ್ಲದೆ ತಾನಾಗಿಯೇ ಪ್ರಾಪ್ತವಾಗಿ ರುವ ವಿಘ್ನರಹಿತವಾದ ನಿರತಿಶಯ ಸುಖಕ್ಕೆ ಕಾರಣವಾದ ಇಂತಹ ಯುದ್ಧಮಾಡುವ ಅವಕಾಶವನ್ನು ಪುಣ್ಯವಂತನಾದ ಕ್ಷತ್ರಿಯನು ಹೊಂದುತ್ತಾನೆ ಇದು ನಿನಗೆ ಪ್ರಾಪ್ತವಾಗಿರು ವುದು ನಿನ್ನ ಅದೃಷ್ಟವೆಂಹೇ ಹೇಳಬೇಕು ಎಂದು ಅಭಿಪ್ರಾಯ

### ಶ್ಲೋಕ—33

''ಈಗ ಈ ಧರ್ಮರೂಪವಾದ ಯುದ್ಧವನ್ನು ನೀನು ಮಾಡದೇ ಹೋದರೆ ಆಗ ನೀನು ನಿನ್ನ ಸ್ವಧರ್ಮವನ್ನೂ ಕೀರ್ತಿ ಯನ್ನೂ ಕಳೆದುಕೊಂಡು ಪಾಪವನ್ನು ಪಡೆಯುವೆ''

ಕ್ಷತ್ರಿಯನಿಗೆ ಸ್ವಧರ್ಮರೂಪವಾದ ಈಗ ಪ್ರಾರಂಭಿಸಲ್ಪ ರುವ ಯುದ್ಧವನ್ನು ಮೋಹದಿಂದಲೂ, ಅಜ್ಞಾನದಿಂದಲೂ ನೀನು ಮಾಡದೆ ಹೋದರೆ ಆಗ ಪ್ರಾರಂಭಿಸಲ್ಪಟ್ಟ ಧರ್ಮಕಾರ್ಯ ವನ್ನು ಮಾಡದೆ ಇರುವುದರಿಂದ ಸ್ವಧರ್ಮಪಾಲನೆಯ ಫಲವಾದ ನಿರತಿಶಯವಾದ ಕೀರ್ತಿಯನ್ನೂ ಕಳೆದುಕೊಳ್ಳುತ್ತೀಯೆ ಮತ್ತು ನಿರತಿಶಯವಾದ ಪಾಪವನ್ನು ಹೊಂದುತ್ತೀಯೆ

### ಶ್ಲೋಕ—34

"ಅಷ್ಟು ಮಾತ್ರವಲ್ಲದೆ ನಿನ್ನ ಈ ಎಂದೂ ನಾಶವಾಗಲಾರ ದಂತಹ ಅಪಕೀರ್ತಿಯನ್ನು ಜನರು ಹೇಳಿಕೊಳ್ಳುವರು ಎಲ್ಲ ರಿಂದ ಸನ್ಮಾನಿಸಲ್ಪಟ್ಟವನಿಗಾದರೋ ಅಪಕೀರ್ತಿಯೆಂಬುದು ಸಾವಿಗಿಂತ ಅಧಿಕವಾದುದು''.

ನಿರತಿಶಯವಾದ ಸುಖ ಮತ್ತು ಕೀರ್ತಿಯ ಹಾನಿ ಮಾತ್ರ ವಲ್ಲದೆ ''ಅರ್ಜುನನು ಯುದ್ಧವು ಪ್ರಾರಂಭವಾಗುತ್ತಲೇ ಓಡಿ ಹೋದನು'' ಎಂದು ಸಮರ್ಥರೂ ಅಸಮರ್ಥರೂ ಆದ ಸರ್ವ ಜನರೂ ಹೇಳಿಕೊಳ್ಳುವರು ಈ ವಿಧವಾದ ಅಪಕೀರ್ತಿಯನ್ನು ಎಂದೂ ಅಳಿಸಲಾಗುವುದಿಲ್ಲ ಮತ್ತು ಇದು ಸರ್ವದೇಶ, ಸರ್ವ ಕಾಲಗಳಲ್ಲೂ ವ್ಯಾಪಿಸಿಕೊಳ್ಳುತ್ತದೆ ಆದರೆ ಅದರಿಂದ ನನಗೇನು ಎಂದರೆ ಶೌರ್ಯ, ವೀರ್ಯ ಪರಾಕ್ರಮಾದಿಗಳಿಂದ ಸಮಸ್ತರಿಂದಲೂ ಸನ್ಮಾನಿಸಲ್ಪಟ್ಟವನಿಗೆ, ಅದಕ್ಕೆ ವ್ಯತಿರಿಕ್ತವಾದ ಹೇಡಿತನದಿಂದ ಉಂಟಾಗುವ ಅಪಯಶಸ್ಸು ಸಾವಿಗಿಂತ ಮಿಗಿಲಾದದು ಈ ವಿಧವಾದ ಅಪಯಶಸ್ಸಿಗಿಂತ ಮರಣವೇ ನಿನಗೆ ಶ್ರೇಯಸ್ಕರ ವಾದುದು ಎಂದು ಅಭಿಪ್ರಾಯ

### ಶ್ಲೋಕ—35

ಬಂಧು ಜನಗಳ ಮೇಲಿನ ಪ್ರೀತಿಯಿಂದಲೂ, ಕರುಣೆ ಯಿಂದಲೂ ಯುದ್ಧದಿಂದ ನಿವೃತ್ತನಾದ ನನಗೆ (ಅರ್ಜುನನಿಗೆ) ಅಪಯಶಸ್ಸು ಹೇಗೆ ಪ್ರಾಪ್ತವಾಗುತ್ತದೆ ಎಂದರೆ–ಅದಕ್ಕೆ ಉತ್ತರ ವನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ

''ಮಹಾರಥಿಗಳಾದವರೆಲ್ಲಾ ನಿನ್ನನ್ನು ಭಯದಿಂದ ಯುದ್ಧದಿಂದ ತಟಸ್ಥನಾದವನೆಂದು ತಿಳಿಯುತ್ತಾರೆ ಇದರಿಂದ ಯಾರಿಗೆ ನೀನು ಸನ್ಮಾನ್ಯನಾಗಿದ್ದೆಯೋ ಅವರಿಗೆ ಇನ್ನು ಮುಂದೆ ತುಚ್ಛನೆನಿಸುವೆ''.

ಕರ್ಣದುರ್ಯೋಧನರೇ ಮೊದಲಾದ ಮಹಾರಥಿಗಳು ಈ ಯುದ್ಧಕ್ಕೆ ಮೊದಲು ನಿನ್ನನ್ನು ಶೂರನಾದ ವೈರಿ ಎಂದು ಬಹು ಮಾನಿಸಿ ಗೌರವಿಸುತ್ತಿದ್ದರು. ಈಗ ಈ ಯುದ್ಧವು ಪ್ರಾರಂಭ

ವಾದ ಮೇಲೆ ನೀನು ಯುದ್ಧ ಮಾಡುವುದನ್ನು ನಿಲ್ಲಿಸುವುದರಿಂದ ಅವರು ನಿನ್ನನ್ನು ಬಹಳ ನಿಕೃಷ್ಟವಾಗಿ ಕಾಣುವರು ಮತ್ತು ಅವರಿಂದ ನೀನು ಸುಲಭವಾಗಿ ಕೈವಿಯಾಗಿ ಹಿಡಿಯಲ್ಪಡುವ ಸ್ಥಿತಿಯನ್ನು ಹೊಂದುತ್ತೀಯೆ. ಮಹಾರಥಿಗಳಾದ ಅವರು ನೀನು ಭಯಗೊಂಡು ಯುದ್ಧದಿಂದ ನಿವೃತ್ತನಾಗಿರುತ್ತೀಯೆ ಎಂದು ತಿಳಿಯುವರು. ಏಕೆಂದರೆ ವೀರರಾದವರು ಶತ್ರುಗಳ ಭಯದಿಂದಲ್ಲದೆ ಬಂಧು ಸ್ನೇಹಾದಿ ಕಾರಣಗಳಿಂದ ನಿವೃತ್ತರಾಗುವ ಸಂಭವವಿಲ್ಲ.

**ಶ್ಲೋಕ—36**

ಈ ಶ್ಲೋಕದಲ್ಲಿ ಯುದ್ಧಮಾಡಲು ಹಿಂಜರಿಯುವುದರಿಂದ ಆಗುವ ಅವಮಾನಗಳನ್ನು ಇನ್ನೂ ವಿಶದವಾಗಿ ತಿಳಿಸುತ್ತಾರೆ.

"ನಿನ್ನ ಶತ್ರುಗಳು ನಿನ್ನ ಸಾಮರ್ಥ್ಯವನ್ನು ನಿಂದಿಸುತ್ತಾ ನಿನ್ನನ್ನು ಕುರಿತು ಅನೇಕ ಹೇಳಬಾರದಂತಹ ಹೀನವಾದ ಮಾತುಗಳನ್ನು ಹೇಳುವರು ನಿನಗೆ ಇದಕ್ಕಿಂತ ದುಃಖಕರವಾದುದು ಮತ್ತೆ ಯಾವುದುಂಟು

ಮೇಲೆ ಹೇಳಿದುದು ಮಾತ್ರವಲ್ಲದೆ ನಿನ್ನ ಶತ್ರುಗಳಾದ ಧೃತರಾಷ್ಟ್ರನ ಮಕ್ಕಳು ವೀರಯೋಧರ ಮುಂದೆಲ್ಲಾ ನಿನ್ನ ವಿಷಯವಾಗಿ ಅನೇಕ ಹೇಳಬಾರದ ಹೀನ ಮಾತುಗಳನ್ನು ಹೇಳುವರು ; "ಶೂರರಾದ ನಮ್ಮ ಮುಂದೆ ಈ ಪಾರ್ಥನು ಒಂದು ಕ್ಷಣವೂ ನಿಲ್ಲಲು ಶಕ್ತನಲ್ಲ. ಅವನ ಸಾಮರ್ಥ್ಯವೆಲ್ಲಾ ನಮ್ಮ ಮುಂದಲ್ಲ, ಬೇರೆ ಕಡೆಗಳಲ್ಲಿ" ಎಂಬಿವೇ ಮುಂತಾದ ಅವಹೇಳನವಾದ ಮಾತನ್ನಾಡುವರು ನಿನಗೆ ಇದಕ್ಕಿಂತ ದುಃಖಕರವಾದದ್ದು ಮತ್ತೇನಾದರೂ ಇದೆಯೇ ? ಈ ವಿಧವಾದ ದುರ್ವಚನಗಳನ್ನು ಕೇಳುವುದಕ್ಕಿಂತ ಸಾಯುವುದೇ ಮೇಲೆಂದು ನೀನೇ ಭಾವಿಸುತ್ತೀಯೆ

**ಶ್ಲೋಕ—37**

ಮೇಲೆ ಹೇಳಿದ ಕಾರಣಗಳಿಂದ ಶೂರನಾದವನಿಗೆ ಧರ್ಮಯುದ್ಧದಲ್ಲಿ ತಾನು ಇತರರನ್ನು ಜಯಿಸುವುದಾಗಲಿ ಅಥವಾ ಇತರರಿಂದ ತಾನು ಕೊಲ್ಲಲ್ಪಡುವುದಾಗಲೀ ಎರಡೂ ಕಲ್ಯಾಣಕರವಾದುದಾಗಿ ಆಗುತ್ತದೆ ಎಂದು ಈ ಶ್ಲೋಕದಲ್ಲಿ ತಿಳಿಸಿದ್ದಾರೆ. ಎಲೈ ಕುಂತಿಪುತ್ರನೇ ! ನೀನು (ಯುದ್ಧದಲ್ಲಿ) ಕೊಲ್ಲಲ್ಪಟ್ಟೆಯಾದರೆ ನಿನಗೆ ಸ್ವರ್ಗ ಪ್ರಾಪ್ತಿಯಾಗುವುದು, ಅಥವ ನೀನು ಜಯಿಸಿದೆಯಾದರೆ ಪೃಥ್ವಿಯನ್ನು ಆಳುವೆ. ಆದ್ದರಿಂದ ಯುದ್ಧಮಾಡಬೇಕೆಂಬ ನಿಶ್ಚಯವನ್ನು ಮಾಡಿಕೊಂಡು ಅರ್ಜುನನೇ, ಎದ್ದು ನಿಲ್ಲು".

ಧರ್ಮಯುದ್ಧದಲ್ಲಿ ಇತರರಿಂದ ಕೊಲ್ಲಲ್ಪಟ್ಟೆಯಾದರೆ ಆಗ ಅದರಿಂದ ಪರಮ ಶ್ರೇಯಸ್ಸನ್ನು ಹೊಂದುತ್ತೀಯೆ. ಅಂದರೆ ಪರಲೋಕದಲ್ಲಿ ಉತ್ತಮವಾದ ಗತಿಯನ್ನು ಪಡೆಯುವೆ. ಹಾಗಿಲ್ಲದೆ ನೀನು ಶತ್ರುಗಳನ್ನು ಜಯಿಸಿದೆಯಾದರೆ ಆಗ ನಿಷ್ಕಂಟಕವಾದ (ಶತ್ರುಗಳ ಬಾಧೆಯಿಲ್ಲದ) ರಾಜ್ಯವನ್ನು ಅನುಭವಿಸುತ್ತೀಯೆ ಇಷ್ಟು ಮಾತ್ರವಲ್ಲದೆ ಫಲಾಭಿಸಂಧಿರಹಿತವಾಗಿ ಮಾಡಲ್ಪಡುವ ಧರ್ಮಯುದ್ಧವು ಪರಮಶ್ರೇಯ ಪ್ರಾಪ್ತಿಗೆ ಉಪಾಯವಾಗಿದೆ ಆದ್ದರಿಂದ ನೀನು ಇದೇ ಯುದ್ಧವನ್ನು ಫಲಾಪೇಕ್ಷೆ ರಹಿತವಾಗಿ ಮಾಡಿದೆಯಾದರೆ ಆಗ ನೀನು ಪರಮ ಶ್ರೇಯಸ್ಸನ್ನು ಪಡೆಯುವೆ ಆದ್ದರಿಂದ ಧರ್ಮಯುದ್ಧಕ್ಕಾಗಿ ಮಾಡುವ ಕರ್ಮವು ಪರಮಪುರುಷಾರ್ಥವಾದ ಮೋಕ್ಷಕ್ಕೆ ಸಾಧನವು ಎಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಯುದ್ಧಮಾಡಲು ಎದ್ದು ನಿಲ್ಲು. ಕುಂತೀಪುತ್ರನಾದ ನಿನಗೆ ಇದೇ ಯೋಗ್ಯವಾದುದು ಎಂದು ಅಭಿಪ್ರಾಯ

**ಶ್ಲೋಕ—38**

ಹಿಂದಿನ ಶ್ಲೋಕದಲ್ಲಿ ಇಹಲೋಕದ ಸುಖಾನುಭವ ಮತ್ತು ಪರಲೋಕದ ಉತ್ತಮಗತಿ ಪ್ರಾಪ್ತಿ ಎಂಬ ಎರಡು ಶ್ರೇಯಸ್ಸನ್ನು ತಿಳಿಸಿದರು. ಅವೆರಡಕ್ಕಿಂತ ಉತ್ತಮವಾದ ಶ್ರೇಯಸ್ಸು ಮೋಕ್ಷಸಾಧನೆಯಾಗಿರುವುದರಿಂದ ಮುಮುಕ್ಷುವಾದವನು ಅಂದರೆ ಮೋಕ್ಷದಲ್ಲಿ ಇಚ್ಛೆ ಉಳ್ಳವನು ಯುದ್ಧವು ಮೋಕ್ಷಸಾಧನವಾಗಬೇಕಾದರೆ ಯಾವ ರೀತಿ ಯುದ್ಧಮಾಡಬೇಕು ಎಂಬುದನ್ನು ಈ ಶ್ಲೋಕವು ತಿಳಿಸುತ್ತದೆ– "ಸುಖದುಃಖ, ಲಾಭನಷ್ಟ ಮತ್ತು ಜಯಅಪಜಯ ಇವುಗಳನ್ನೆಲ್ಲಾ ಸಮನಾಗಿ ಭಾವಿಸಿಕೊಂಡು, ಅನಂತರ (ಕೇವಲ) ಯುದ್ಧ ಮಾಡುವುದಕ್ಕಾಗಿ ಸನ್ನದ್ಧನಾಗು. (ಈ ರೀತಿ ಮಾಡಿದರೆ) ನೀನು ಪಾಪವನ್ನು ಹೊಂದುವುದಿಲ್ಲ"

ಕೆಳಗೆ ಹೇಳುವ ಭಾವನೆಗಳೊಂದಿಗೆ ಕೂಡಿದವನಾಗಿ ಯುದ್ಧವನ್ನು ಮಾಡಿದರೆ ಅದು ಮೋಕ್ಷ ಸಾಧನವಾಗುತ್ತದೆ ಮತ್ತು ಅದರಿಂದ ನಿನಗೆ ಪಾಪವು ಉಂಟಾಗುವುದಿಲ್ಲ—

(1) ಆತ್ಮನು ದೇಹಕ್ಕಿಂತ ಭಿನ್ನನಾದವನು ದೇಹದ ಸಮಸ್ತ ಸ್ವಭಾವಗಳ ಸಂಪರ್ಕವಿಲ್ಲದವನು ಮತ್ತು ನಿತ್ಯನು ಎಂದು ತಿಳಿದವನಾಗಬೇಕು (ಅಂದರೆ ಮೊದಲು ಆತ್ಮನ ನಿಜ

ಸ್ವರೂಪ ಜ್ಞಾನವನ್ನು ಪಡೆಯಬೇಕು) (ii) ಯುದ್ಧದಲ್ಲಿ ಅನಿವಾರ್ಯವಾಗಿ ಉಂಟಾಗುವ ಶಸ್ತ್ರಪಾತಾದಿಗಳಿಂದ ಪ್ರಾಪ್ತವಾಗುವ ಸುಖದುಃಖಗಳೇನು, ಧನಾದಿಗಳ ಲಾಭ ನಷ್ಟಗಳೇನು ಮತ್ತು ಜಯಅಪಜಯಾದಿಗಳೇನು ಇವುಗಳಲ್ಲಿ ವಿಕಾರ ರಹಿತನಾಗಿ ಇರಬೇಕು (ಅವುಗಳಿಂದ ನಿನ್ನ ಮನಸ್ಸು ಚಲಿಸಕೂಡದು) (iii) ಹಾಗೆಯೇ ಸ್ವರ್ಗಾದಿ ಫಲಗಳಲ್ಲಿಯೂ ಆಸಕ್ತಿರಹಿತನಾಗಿರಬೇಕು (ಅವುಗಳಲ್ಲಿ ಆಸೆ ಇರಕೂಡದು) (iv) ಕೇವಲ ಕರ್ತವ್ಯ ಬುದ್ಧಿಯಿಂದ ಯುದ್ಧಮಾಡಲು ಪ್ರಾರಂಭಿಸಬೇಕು —ಹೀಗೆ ಅಂದರೆ ಈ ಭಾವನೆಗಳೊಂದಿಗೆ ಯುದ್ಧಮಾಡಿದರೆ ನಿನಗೆ ಪಾಪವು ಉಂಟಾಗುವುದಿಲ್ಲ ಅಂದರೆ ನಿನಗೆ ದುಃಖರೂಪವಾದ ಸಂಸಾರವು ಪ್ರಾಪ್ತವಾಗುವುದಿಲ್ಲ ನೀನು ಸಂಸಾರ ಬಂಧನದಿಂದ ಮುಕ್ತನಾಗುವೆ

## (2) ಮೋಕ್ಷಸಾಧನ ರೂಪವಾದ ಕರ್ಮಯೋಗದ ವರ್ಣನೆ—

(ಶ್ಲೋಕಗಳು 39 ರಿಂದ 53)

ಇಲ್ಲಿಯವರೆಗೆ ಶ್ರೀಕೃಷ್ಣನು ಆತ್ಮನ ನಿಜಸ್ವರೂಪವೇನು ಎಂಬುದನ್ನು ಅರ್ಜುನನಿಗೆ ವಿವರಿಸಿ ತಿಳಿಸಿದನು. ಇನ್ನು ಮುಂದೆ ಆತ್ಮಯಥಾರ್ಥ ಜ್ಞಾನದೊಂದಿಗೆ ಮಾಡುವ, ಮೋಕ್ಷಸಾಧನಭೂತವಾದ ಕರ್ಮಯೋಗದ ವರ್ಣನೆಯನ್ನು ಪ್ರಾರಂಭಿಸುತ್ತಾನೆ

### ಶ್ಲೋಕ—39

"ಇಲ್ಲಿಯವರೆಗೆ ನಿನಗೆ ತಿಳಿಸಿದ ಬುದ್ಧಿಯು ಸಾಂಖ್ಯವಿಷಯಕವಾದ ಬುದ್ಧಿಯು (ಅಂದರೆ ಆತ್ಮಸ್ವರೂಪಜ್ಞಾನ ವಿಷಯಕವಾದ ಬುದ್ಧಿಯು ಹೇಳಲ್ಪಟ್ಟಿತು ಈಗ ಯಾವ ಬುದ್ಧಿಯನ್ನು ಪಡೆದರೆ ನೀನು ಕರ್ಮಬಂಧನವನ್ನು ಹೋಗಲಾಡಿಸಿಕೊಳ್ಳುವೆಯೋ ಆ ಯೋಗ ಬುದ್ಧಿಯನ್ನು ಅಂದರೆ ಕರ್ಮಯೋಗ ವಿಷಯಕವಾದ ಬುದ್ಧಿಯನ್ನು ತಿಳಿಸುವೆನು ಕೇಳು"—

ಸಾಂಖ್ಯ ಎಂದರೆ ಬುದ್ಧಿ ಎಂದು ಅರ್ಥ. ಬುದ್ಧಿಯಿಂದ ತಿಳಿಯಲ್ಪಡುವ ಆತ್ಮತತ್ತ್ವವೇ ಸಾಂಖ್ಯವು. ತಿಳಿಯಲ್ಪಡಬೇಕಾದ ಆತ್ಮತತ್ತ್ವದ ವಿಷಯದಲ್ಲಿ, ತಿಳಿಯಬೇಕಾದ ಬುದ್ಧಿಯನ್ನೆಲ್ಲಾ ಗೀತೆಯ 2ನೇ ಅಧ್ಯಾಯದ 12ನೇ ಶ್ಲೋಕದಿಂದ ಅಂದರೆ "ನತ್ವೇವಾಹಂ" ಎಂಬ ಶ್ಲೋಕದಿಂದ ಆರಂಭಿಸಿ, 30ನೇ ಶ್ಲೋಕವಾದ "ತಸ್ಮಾತ್ ಸರ್ವಾಣಿ ಭೂತಾನಿ'' ಎನ್ನುವವರೆಗೂ ಹೇಳಿ ಮುಗಿಸಿ ಆಯಿತು ಈಗ ಆತ್ಮಜ್ಞಾನದಿಂದ ಕೂಡಿದ ಮೋಕ್ಷಸಾಧನಭೂತವಾದ ಕರ್ಮಾನುಷ್ಠಾನಕ್ಕಾಗಿ ಯಾವ ಬುದ್ಧಿಯನ್ನು ಹೇಳಬೇಕೋ ಅದನ್ನು ಇಲ್ಲಿ 'ಯೋಗ' ಶಬ್ದದಿಂದ ಹೇಳಿದ್ದಾರೆ ಅಂದರೆ ಇಲ್ಲಿ ಯೋಗ ಎಂದರೆ ಬುದ್ಧಿಯೋಗವೆಂದು ಅರ್ಥ. ಮುಂದೆ ಈ ಅಧ್ಯಾಯದ 49 ನೇ ಶ್ಲೋಕದಲ್ಲಿ "ಬುದ್ಧಿಯೋಗಾತ್" ಎಂಬ ಪದವು ಹೇಳಲ್ಪಟ್ಟಿದೆ ಮುಂದೆ ಅಲ್ಲಿ ಯೋಗ ಶಬ್ದದಿಂದ ಯಾವ ಬುದ್ಧಿಯು ಹೇಳಲ್ಪಟ್ಟಿದೆಯೋ ಆ ಬುದ್ಧಿಯನ್ನು ಈಗ ಹೇಳುವೆನು ಕೇಳು ಈ ಬುದ್ಧಿಯಿಂದ ಕೂಡಿದವನಾದರೆ ಕರ್ಮಬಂಧನವನ್ನು ಹೋಗಲಾಡಿಸಿಕೊಳ್ಳಲು ಶಕ್ತನಾಗುವೆ ಕರ್ಮದ ಮೂಲಕ ಉಂಟಾಗುವ ಬಂಧನವನ್ನು "ಕರ್ಮಬಂಧ" ಎಂದು ಹೇಳಿದ್ದಾರೆ ಕರ್ಮಬಂಧನವೆಂದರೆ (ಕರ್ಮದಿಂದ ಉಂಟಾಗುವ) ಸಂಸಾರ ಬಂಧನವೆಂದು ಅರ್ಥ

### ಶ್ಲೋಕ—40

ಮುಂದೆ ಹೇಳುವ ಬುದ್ಧಿಯಿಂದ ಕೂಡಿದ ಕರ್ಮಾನುಷ್ಠಾನದ ಮಾಹಾತ್ಮ್ಯವನ್ನು ಅಂದರೆ ಕರ್ಮಯೋಗದ ಮಾಹಾತ್ಮ್ಯೆವನ್ನು ಈ ಶ್ಲೋಕದಲ್ಲಿ ತಿಳಿಸುತ್ತಾರೆ

''ಇಲ್ಲಿ (ಅಂದರೆ ಈ ಕರ್ಮಯೋಗದಲ್ಲಿ) ಪ್ರಾರಂಭಿಸಿದುದಕ್ಕೆ ನಾಶವು (ಫಲವಿಲ್ಲದೇ ಇರುವ ನಾಶವು) ಇಲ್ಲ, ದೋಷವೂ ಇಲ್ಲ (ಅಂದರೆ ಪ್ರಾರಂಭಿಸಿ ಅರ್ಧದಲ್ಲೇ ಕಾರ್ಯವನ್ನು ಬಿಟ್ಟುದಕ್ಕಾಗಿ ದೋಷವೂ (ಪಾಪವೂ, ಇಲ್ಲ), ಈ (ಕರ್ಮಯೋಗವೆಂಬ) ಧರ್ಮದ ಅಲ್ಪ ಅನುಷ್ಠಾನವೂ ಕೂಡ ಮಹತ್ತರವಾದ ಭಯದಿಂದ (ನಮ್ಮನ್ನು) ರಕ್ಷಿಸುತ್ತದೆ (ಅಂದರೆ ಹಿಂದಿನ ಶ್ಲೋಕದಲ್ಲಿ ಹೇಳಿದ ಕರ್ಮಬಂಧನವೆಂಬ ಸಂಸಾರಭಯದಿಂದ ರಕ್ಷಿಸುತ್ತದೆ)''

ಈ ಕರ್ಮಯೋಗದಲ್ಲಿ ಅಭಿಕ್ರಮನಾಶವಿಲ್ಲ ಅಭಿಕ್ರಮ ಎಂದರೆ ಆರಂಭವೆಂದೂ ನಾಶವೆಂದರೆ ಫಲಸಾಧನತೆಯ ನಾಶವೆಂದೂ ಅರ್ಥ ಆರಂಭಿಸಿದ ಕರ್ಮಯೋಗವು ಪೂರ್ಣವಾಗುವುದಕ್ಕೆ ಮೊದಲೇ ಮಧ್ಯದಲ್ಲಿ ತಡೆಯುಂಟಾದಾಗ್ಯೂ ಕೂಡ ಅದು ನಿಷ್ಫಲವಾಗುವುದಿಲ್ಲ (ಅಂದರೆ ಅದಕ್ಕೆ ಫಲವುಂಟು ಎಂದು ಅರ್ಥ) ಮತ್ತು ಹೀಗೆ ಕರ್ಮವು ಪ್ರಾರಂಭಿಸಲ್ಪಟ್ಟು ಮಧ್ಯೆ ತಡೆಯುಂಟಾಗಿ ಆರಂಭಿಸಿದ ಕಾರ್ಯವು ಬಿಡಲ್ಪಡುವುದರಿಂದ ಯಾವ ಪಾಪವೂ (ದೋಷವೂ) ಉಂಟಾಗುವುದಿಲ್ಲ ಈ ಕರ್ಮಯೋಗವೆಂಬ ಧರ್ಮದ ಅಲ್ಪ ಅಂಶವೂ ಕೂಡ ಮಹತ್ತಾದ ಭಯದಿಂದ ಅಂದರೆ ಸಂಸಾರ ಭಯದಿಂದ ಕಾಪಾಡುತ್ತದೆ.

ಇದೇ ವಿಷಯವನ್ನು "ಪಾರ್ಥ ಆ ಕರ್ಮಯೋಗಿಗೆ ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಎಂದೂ ನಾಶ ವುಂಟಾಗುವುದಿಲ್ಲ" ಎಂದು ಮುಂದೆ ಆರನೇ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳಿದ್ದಾರೆ. ಇತರ ಲೌಕಿಕ, ವೈದಿಕ ಸಾಧನ ಗಳಿಗೆ ತಡೆ ಉಂಟಾದರೆ (ಅಂದರೆ ಅವುಗಳು ಪೂರ್ಣವಾಗುವು ದಕ್ಕೆ ಮೊದಲೇ ತಡೆ ಉಂಟಾಗಿ ಆರಂಭಿಸಿದ ಆ ಕಾರ್ಯಗಳು ಅರ್ಧ ದಲ್ಲೇ ಬಿಡಲ್ಪಟ್ಟರೆ) ಆಗ ಅವುಗಳಿಂದ ಫಲ ವುಂಟಾಗುವುದಿಲ್ಲ ಮತ್ತು ಅದರೊಂದಿಗೆ ಪಾಪಕ್ಕೆ (ದೋಷಕ್ಕೆ ಕಾರಣವೂ ಉಂಟಾಗುತ್ತದೆ

(ಇಲ್ಲಿ ಕಾಮ್ಯ ಕರ್ಮಗಳಿಗೂ, ಬುದ್ಧಿಯೋಗದಿಂದ ಕೂಡಿ ಕರ್ಮಯೋಗವಾಗಿ ಮಾಡುವ ಕರ್ಮಗಳಿಗೂ ಇರುವ ವ್ಯತ್ಯಾಸ ವನ್ನು ತಿಳಿಸಿದ್ದಾರೆ ಕರ್ಮಯೋಗಾನುಷ್ಠಾನದಲ್ಲಿ ಕರ್ಮವನ್ನು ಆರಂಭ ಮಾಡಿ ಕಾರಣಾಂತರದಿಂದ ಮುಂದುವರಿಸಲಾಗದೆ ವಿಘ್ನ ವುಂಟಾಗಿ ಕರ್ಮವು ಅರ್ಧದಲ್ಲೇ ಬಿಡಲ್ಪಟ್ಟರೂ ಕೂಡ ಅದಕ್ಕೆ ಫಲವುಂಟು ಮತ್ತು ಅದರಿಂದ ಯಾವ ವಿಧವಾದ ದೋಷವೂ ತೋರಿದರೆಯೂ ಉಂಟಾಗುವುದಿಲ್ಲ; ಆದರೆ ಕಾಮ್ಯ ಕರ್ಮಗಳನ್ನು ಪೂರ್ಣವಾಗಿ ಮಾಡದೇ ಹೋದರೆ ಅದಕ್ಕೆ ಯಾವ ಫಲವೂ ಲಭಿಸುವುದಿಲ್ಲ ಮತ್ತು ಅದರಿಂದ ವಿರೋಧ ಫಲಗಳು ಉಂಟಾಗಿ ತೊಂದರೆ ಪಡಬೇಕಾದ ಸಂಭವವೂ ಉಂಟು ಆದ್ದರಿಂದ ಕರ್ಮ ಯೋಗವನ್ನು ಸ್ವಲ್ಪ ಅನುಷ್ಠಿಸಿದರೂ ಅದಕ್ಕೆ ಮಹತ್ತರವಾದ ಫಲವುಂಟೇ ವಿನಃ ಅದರಿಂದ ಎಂದೂ ಯಾವ ವಿಧವಾದ ಕೇಡೂ ಸಂಭವಿಸುವುದಿಲ್ಲ ಎಂದು ಮೋಕ್ಷ ಸಾಧನಭೂತವಾದ ಕರ್ಮ ಯೋಗದ ಮಹಾತ್ಮೆಯನ್ನು ವರ್ಣಿಸಿದ್ದಾರೆ.)

ಈ ಶ್ಲೋಕದಲ್ಲಿ ಕಾಮ್ಯಕರ್ಮ ವಿಷಯವಾದ ಬುದ್ಧಿಗಿಂತ ಮೋಕ್ಷ ಸಾಧನವಾದ ಕರ್ಮ ಯೋಗದ ಬುದ್ಧಿಯು ಶ್ರೇಷ್ಠ ವಾದುದೆಂದು ಹೇಳಿದ್ದಾರೆ.

"ಅರ್ಜುನನೆ ! (ಈ ಕರ್ಮಯೋಗದ ಅನುಷ್ಠಾನದಲ್ಲಿ) ವ್ಯವಸಾಯಾತ್ಮಿಕ ಬುದ್ಧಿಯು (ಆತ್ಮ ಯಾಥಾತ್ಮ್ಯ ನಿಶ್ಚಯ ಪೂರ್ವಕವಾದ ಬುದ್ಧಿಯು) ಒಂದೇ ಆಗಿದೆ ಅವ್ಯವಸಾಯಿಗಳ (ಅಂತಹ ನಿಶ್ಚಯ ಬುದ್ಧಿ ರಹಿತವಾದವರ) ಬುದ್ಧಿಯು ನಾನಾ ಪ್ರಕಾರವುಳ್ಳದ್ದಾಗಿಯೂ ಅನಂತವಾಗಿಯೂ ಇದೆ " —

ಮೋಕ್ಷಾರ್ಥಿಯು ಮಾಡುವ ಶಾಸ್ತ್ರೀಯವಾದ ಸರ್ವ ಕರ್ಮಗಳ ವ್ಯವಸಾಯಾತ್ಮಿಕ ಬುದ್ಧಿಯು ಒಂದೇ ಆಗಿದೆ ವ್ಯವಸಾಯಾತ್ಮಿಕ ಬುದ್ಧಿ ಎಂದರೆ ಏನು ?-ಮುಮುಕ್ಷುಗಳಿಂದ ಮಾಡಲ್ಪಡುವ ಕರ್ಮಗಳಲ್ಲಿರುವ ಬುದ್ಧಿಯೇ ವ್ಯವಸಾಯಾತ್ಮಿಕ ಬುದ್ಧಿಯು ವ್ಯವಸಾಯ ಎಂದರೆ ನಿಶ್ಚಯ ಜ್ಞಾನ ಆತ್ಮನ ಯಥಾರ್ಥ ಸ್ವರೂಪ ನಿಶ್ಚಯ ಪೂರ್ವಕವಾದ ಬುದ್ಧಿಯೇ ವ್ಯವಸಾಯಾತ್ಮಿಕ ಬುದ್ಧಿಯು. ಕಾಮ್ಯ ಕರ್ಮ ವಿಷಯಕ ವಾದ ಬುದ್ಧಿಯು ಅವ್ಯವಸಾಯಾತ್ಮಿಕ ಬುದ್ಧಿಯು, ಅಂದರೆ ಆತ್ಮಸ್ವರೂಪ ಯಥಾರ್ಥ ನಿಶ್ಚಯಜ್ಞಾನವಿಲ್ಲದ ಬುದ್ಧಿಯು ಕಾಮ್ಯ ಕರ್ಮದ ಅಧಿಕಾರಿಗೆ ದೇಹಭಿನ್ನವಾದ ಆತ್ಮನ ಅಸ್ತಿತ್ವದ ಇರುವಿಕೆಯ ಜ್ಞಾನ ಮಾತ್ರ ಇದ್ದರೆ ಸಾಕು ಆತ್ಮ ಸ್ವರೂಪದ ಯಥಾರ್ಥ ನಿಶ್ಚಯ ಜ್ಞಾನವಿರಬೇಕಾದ ಅಪೇಕ್ಷೆಯಿಲ್ಲ. ಆತ್ಮಸ್ವರೂಪದ ನಿಶ್ಚಯ ಜ್ಞಾನವಿಲ್ಲವೇ ಹೋದಾಗ್ಯೂ ಶಾಸ್ತ್ರ ವಿರೋಧವಿಲ್ಲದಂತೆ, ಸ್ವರ್ಗಾದಿ ಫಲಗಳ ಆಸೆಹೊಂದಿ ಅವುಗಳಿಗೆ ಬೇಕಾದ ಸಾಧನಾನುಷ್ಠಾನವನ್ನು ಮಾಡಿ, ಆ ಸಾಧನೆಗಳಿಂದ ಉಂಟಾಗುವಫಲಗಳನ್ನು ಹೊಂದಬಲ್ಲನು.

ಮುಮುಕ್ಷು ವಾದವನು ಸರ್ವಕರ್ಮಗಳನ್ನೂ ಮೋಕ್ಷಫಲ ಒಂದಕ್ಕಾಗಿಯೇ ಮಾಡುತ್ತಾನೆ. ಅವನ ವ್ಯವಸಾಯಾತ್ಮಿಕ ಬುದ್ಧಿಯು ಒಂದೇ ಆದ ಮೋಕ್ಷ ಫಲಕ್ಕೆ ಸಾಧನರೂಪ ಕರ್ಮ ಗಳ ವಿಷಯವಾದ ಬುಧಿಯಾಗಿರುವುದರಿಂದ ಒಂದೇ ಆಗಿದೆ. ಶಾಸ್ತ್ರಗಳು ಮೋಕ್ಷಫಲ ಒಂದನ್ನೇ ವಿಷಯವಾಗಿ ಹೊಂದಿ

ರುವುದರಿಂದ ಸರ್ವಕರ್ಮಗಳ ವಿಷಯವಾದ ವ್ಯವಸಾಯಾತ್ಮಿಕ ಬುದ್ಧಿಯೂ ಒಂದೇ ಆಗಿರುತ್ತದೆ.

ಅವರೆ ಕಾಮ್ಯ ಕರ್ಮವಿಷಯವಾದ ಅವ್ಯವಸಾಯಾತ್ಮಿಕ ಬುದ್ಧಿಯು ಅನೇಕಫಲಗಳನ್ನು ವಿಷಯವಾಗಿ ಹೊಂದಿರುವುದರಿಂದ ಅನೇಕವಾಗಿದೆ. ಸ್ವರ್ಗ, ಪುತ್ರ, ಪಶು, ಅನ್ನ ಮುಂತಾದ ಅನೇಕ ಫಲಗಳಿಗಾಗಿ ಕರ್ಮ ಮಾಡುವ ಅಧಿಕಾರಿಗಳ ಬುದ್ಧಿಯು, ಫಲಗಳು ಅನಂತವಾಗಿರುವಕಾರಣ ಅನಂತವಾಗಿರುತ್ತವೆ ಮತ್ತು ಅನೇಕ ಶಾಖೆಗಳನ್ನೂ ಹೊಂದಿರುತ್ತದೆ. ಆದ್ದರಿಂದ ಅವ ವಸಾಯಿಗಳ ಬುದ್ಧಿಯು ಅನಂತವಾಗಿಯೂ ಬಹಳ ಶಾಖೆಗಳಿಂದ ಕೂಡಿದ್ದಾಗಿಯೂ ಇರುತ್ತವೆ.

ಒಟ್ಟಿನಲ್ಲಿ ಅಭಿಪ್ರಾಯವೇನೆಂದರೆ ನಿತ್ಯ ನೈಮಿತ್ತಿಕ ಕರ್ಮಗಳಲ್ಲಿ ಯಾವ ಪ್ರಧಾನ ಮತ್ತು ಅಪ್ರಧಾನಫಲಗಳು ಶ್ರುತಿಯಲ್ಲಿ ಹೇಳಿವೆಯೋ ಅವೆಲ್ಲವನ್ನೂ ಪರಿತ್ಯಾಗ ಮಾಡಿ, ಮೋಕ್ಷ ಫಲಒಂದನ್ನೇ ಶಾಸ್ತ್ರಗಳುಉದ್ದೇಶಿಸಿವೆ ಎಂಬುದನ್ನು ತಿಳಿದು ಕೊಂಡು, ಕೇವಲ ಮೋಕ್ಷರೂಪ ಫಲಕ್ಕಾಗಿ ಸಮಸ್ತ ಕರ್ಮಗಳನ್ನು ಅನುಷ್ಠಾನ ಮಾಡಬೇಕು ಸ್ವವರ್ಣೋಚಿತವಾದ ಕರ್ಮಗಳು ಯಾವುಯಾವುದುಂಟೋ ಅವೆಲ್ಲವನ್ನೂ ಅವುಗಳ ಫಲವನ್ನು ಪರಿತ್ಯಾಗಮಾಡಿ. ಮೋಕ್ಷ ಫಲಸಾಧನಗಳೆಂದು ಭಾವಿಸಿ ನಿತ್ಯನೈಮಿತ್ತಿಕಕರ್ಮಗಳೊಂದಿಗೆ ಸೇರಿಸಿ ಕೊಂಡು ಯಥಾ ಶಕ್ತಿಅನುಷ್ಠಾನಮಾಡಬೇಕು.

**ಶ್ಲೋಕಗಳು 42;43;44**—ಈ ಮೂರು ಶ್ಲೋಕಗಳಲ್ಲಿ ಕಾಮ್ಯಕರ್ಮ ಅಧಿಕಾರಿಗಳನ್ನು ನಿಂದಿಸಿದ್ದಾರೆ

"ವೇದದಲ್ಲಿರುವ ಕೇವಲ ಸ್ವರ್ಗಾದಿ ಫಲಗಳ ವಿಷಯವಾದ ವಾದಗಳಲ್ಲಿಯೇ ಆಸಕ್ತರಾಗಿ, ಅದಕ್ಕಿಂತ ಬೇರೆ ಏನೂ ಇಲ್ಲ ಎಂದು ವಾದಿಸುವವರಾಗಿ, ವಿಷಯಾಸಕ್ತರಾಗಿ ಸ್ವರ್ಗ ಪರಾಯಣರಾಗಿ (ಸ್ವರ್ಗವೇ ಮೇಲಾದ ಫಲವೆಂದು ತಿಳಿದವರಾಗಿ) ಮತ್ತು ಜನ್ಮ ಮತ್ತು ಕರ್ಮರೂಪ ಫಲಗಳನ್ನು ಕೊಡುವ ಕೇವಲ ಕ್ರಿಯಾ ಕಲಾಪ ಬಾಹುಳ್ಯವುಳ್ಳ ಭೋಗ ಐಶ್ವರ್ಯಾದಿಫಲ ಪ್ರಾಪ್ತಿಗಾಗಿ ಅನೇಕ ಕರ್ಮಗಳಲ್ಲಿ ಆಸಕ್ತರಾಗಿ ಇರುವ ಅಲ್ಪಜ್ಞರು, ಪುಷ್ಪದಂತೆ ರಮಣೀಯವಾಗಿ ತೋರುವ ಯಾವ ಮಾತುಗಳನ್ನು ಆಡುತ್ತಾರೆಯೋ ಆ ಮಾತುಗಳಿಂದ ಅಪಹೃತವಾದ ಮನಸ್ಸುಳ್ಳವರಾಗಿ ಭೋಗ ಐಶ್ವರಾದಿಗಳಲ್ಲೇ ಶ್ರದ್ಧೆ ಉಳ್ಳವರಾಗಿರುವ ಮನುಷ್ಯರ ಮನಸ್ಸಿನಲ್ಲಿ ನಿಶ್ಚಯಾತ್ಮಕ ಬುದ್ಧಿಯು (ಆತ್ಮಸ್ವರೂಪ ಯಥಾರ್ಥನಿಶ್ಚಯ ರೂಪಬುದ್ಧಿಯು) ಉತ್ಪನ್ನವಾಗುವುದಿಲ್ಲ."

ವೇದದಲ್ಲಿರುವ ಸ್ವರ್ಗಾದಿಫಲ ವಿಷಯವಾದ ವಾಕ್ಯಗಳಲ್ಲಿ ಆಸಕ್ತರಾಗಿರುವವರೇ ವೇದವಾದರತರು ಅಲ್ಪಜ್ಞರಾದ ಈ ವೇದವಾದರತರು ಸ್ವರ್ಗಾದಿಫಲಗಳಲ್ಲಿ ಅತ್ಯಂತ ಆಸಕ್ತರಾಗಿರುವುದರಿಂದ ಸ್ವರ್ಗಾದಿ ಫಲಗಳಿಗಿಂತ ಮಿಗಿಲಾದ ಫಲವು ಬೇರೆ ಯಾವುದೂ ಇಲ್ಲ ಎಂದು ವಾದಿಸುತ್ತಾರೆ. ಕಾಮಾಸಕ್ತಚಿತ್ತರೂ ಸ್ವರ್ಗಪರಾಯಣರೂ ಆದ ಆ ಕಾಮಾತ್ಮರು ತತ್ವಜ್ಞಾನರಹಿತರಾಗಿರುವುದರಿಂದ, ಸ್ವರ್ಗಾದಿಫಲಗಳು ಮುಗಿದನಂತರ ಪುನರ್ಜನ್ಮ ಕರ್ಮಗಳೆಂಬ ಫಲಗಳನ್ನು ಕೊಡುವಂತಹ, ಕೇವಲ ಕಾರ್ಯಕಲಾಪಗಳಿಂದ ತುಂಬಿರುವ, ಕ್ರಿಯಾವಿಶೇಷ ಪ್ರಚುರತೆಯುಳ್ಳ ಆಭೋಗೈಶ್ವರ್ಯಾದಿಗಳನ್ನು ಕುರಿತು ಪುಷ್ಪಮಾತ್ರ ಫಲವುಳ್ಳ ಆ ಮಾತ ರಮಣೀಯವಾಗಿರುವ (ಅಂದರೆ ಮೊದಲು ಸುಖಕರವಾಗಿಯೂ ಸುಂದರವಾಗಿಯೂ ಕಾಣಿಸುವ) ಮಾತುಗಳನ್ನು ಆಡುತ್ತಾರೆ. ಇವರ ಈ ಭೋಗೈಶ್ವರ್ಯ ವಿಷಯಕವಾದ ಮಾತುಗಳಿಂದ ಭೋಗೈಶ್ವರ್ಯ ಪ್ರಸಕ್ತರಾದ ಮನುಷ್ಯರ ಆತ್ಮಜ್ಞಾನವು ಅಪಹರಿಸಲ್ಪಟ್ಟಿದೆ ಆದ್ದರಿಂದ ಅವರ ಮನಸ್ಸಿನಲ್ಲಿ ಮೇಲೆ ಹೇಳಿದ ವ್ಯವಸಾಯಾತ್ಮಿಕ ಬುದ್ಧಿಯು ಅಂದರೆ ಆತ್ಮಸ್ವರೂಪ ಯಥಾರ್ಥ ನಿಶ್ಚಯ ಬುದ್ಧಿಯು ಉದಯವಾಗುವುದಿಲ್ಲ ಮನಸ್ಸಿನಲ್ಲಿ ಆತ್ಮಜ್ಞಾನವು ಚೆನ್ನಾಗಿ ಪ್ರತಿಷ್ಠಿತ ವಾಗುವುದರಿಂದ ಮನಸ್ಸಿಗೆ ಸಮಾಧಿ ಎಂದು ಹೆಸರು. ಆದರೆ ಅವರ ಮನಸ್ಸಿನಲ್ಲಿ (ವೇದವಾದರತರ ಮಾತುಗಳಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರಮನಸ್ಸಿನಲ್ಲಿ) ಮೋಕ್ಷಸಾಧನ ರೂಪವಾದ, ಆತ್ಮಸ್ವರೂಪಯಥಾರ್ಥ ನಿಶ್ಚಯ ಜ್ಞಾನದಿಂದ ಕೂಡಿದ ಕರ್ಮವಿಷಯವಾದ ಬುದ್ಧಿಯು ಎಂದಿಗೂ ಉತ್ಪನ್ನವಾಗುವುದಿಲ್ಲ ಆದ್ದರಿಂದ ಮುಮುಕ್ಷುಗಳು ಕಾಮ್ಯಕರ್ಮಗಳೊಂದಿಗೆ ಸಂಗಹೊಂದಬಾರದು ಅಂದರೆ ಕಾಮ್ಯಕರ್ಮಗಳಲ್ಲಿ ಆಸಕ್ತಿಹೊಂದಬಾರದು ಎಂದು ಅಭಿಪ್ರಾಯ

**ಶ್ಲೋಕ 45**– ಸಹಸ್ರ ಮಾತಾಪಿತರುಗಳಿಗಿಂತ ಅಧಿಕವಾಗಿ ಪ್ರೀತಿ ಹೊಂದಿ ಆತ್ಮರುಗಳ ಉಜ್ಜೀವನಕ್ಕಾಗಿಯೇ ಪ್ರವೃತ್ತಿ ಹೊಂದಿರುವ ವೇದಗಳು, ಅತ್ಯಲ್ಪ ಫಲವುಳ್ಳ, ಪುನರ್ಜನ್ಮವನ್ನುಂಟು ಮಾಡುವಂತಹ ಈ ಕರ್ಮಗಳನ್ನು ಏತಕ್ಕಾಗಿ ಹೇಳುತ್ತವೆ ? ಅಥವಾ ವೇದಗಳಲ್ಲಿ ಹೇಳಿರುವ ಈ ಕರ್ಮಗಳು ತ್ಯಜಿಸತಕ್ಕವುಗಳು ಎಂದು ಏನಾದರೂ ಹೇಳಿದೆಯೇ ಎಂಬ ಶಂಕೆಗಳಿಗೆ ಈ ಶ್ಲೋಕದಲ್ಲೂ ಮುಂದಿನ ಶ್ಲೋಕದಲ್ಲೂ ಉತ್ತರ ಹೇಳಿದ್ದಾರೆ.

"ವೇದಗಳು ಮೂರು ಗುಣಗಳು (ಸತ್ತ್ವರಜಸ್ತಮೋ ಗುಣಗಳ) ವಿಷಯ ಹೇಳುತ್ತವೆ ಅರ್ಜುನ! ನೀನು ಈ ತ್ರಿಗುಣಗಳ ಅಧಿಕತೆ ಇಲ್ಲದವನಾಗಿ, ನಿತ್ಯ ಸತ್ವಗುಣಯುಕ್ತನಾಗಿ, ದಂದ್ವರಹಿತನಾಗಿ, ಯೋಗಕ್ಷೇಮಾಸಕ್ತಿ ಇಲ್ಲದವನಾಗಿ, ಆತ್ಮ ಪರಾಯಣನಾಗಿರು"

ಸತ್ತ್ವರಜಸ್ತಮೋಗುಣಗಳಿಗೆ ತ್ರಿಗುಣಗಳೆಂದು ಹೆಸರು ಈ ಮೂರುಗುಣಗಳ ಪ್ರಾಚುರ್ಯತೆವುಳ್ಳವರೆಲ್ಲಾ ತ್ರೈಗುಣ್ಯರೆಂದು ಕರೆಯಲ್ಪಟ್ಟಿದ್ದಾರೆ. ವೇದಗಳು ಈ ತ್ರೈಗುಣ್ಯರಾದ ಮನುಷ್ಯರ ವಿಷಯವಾಗಿ ವಿಚಾರ ಮಾಡುತ್ತವೆ ತಮೋಗುಣ ಅಧಿಕವಾಗಿವುಳ್ಳವರಮೇಲೂ, ರಜೋಗುಣ ಅಧಿಕವಾಗಿ ವುಳ್ಳವರಮೇಲೂ ಮತ್ತು ಸತ್ವಗುಣ ಅಧಿಕವಾಗಿ ವುಳ್ಳವರಮೇಲೂ ವಾತ್ಸಲ್ಯಹೊಂದಿ ವೇದಗಳು ಅವರೆಲ್ಲರಿಗೂ ಹಿತೋಪದೇಶ ಮಾಡಿವೆ. ಹೀಗೆ ವೇದಗಳು ಆಯಾಜನರಿಗೆ ಅವರವರಲ್ಲಿರುವ ಸತ್ತ್ವಾದಿಗುಣಗಳ ತಾರತಮ್ಯಗಳಿಗೆ ಅನುಗುಣವಾಗಿ ಸ್ವರ್ಗಾದಿ ಫಲಗಳ ಸಾಧನರೂಪವಾದ ಹಿತಗಳನ್ನು ಉಪದೇಶ ಮಾಡದೇ ಇದ್ದರೆ, ಆಗ ರಜಸ್ತಮೋಗುಣಗಳು ಅಧಿಕವಾಗಿರುವ ಕಾರಣ, ಸಾತ್ವಿಕ ಫಲವಾದ ಮೋಕ್ಷದಲ್ಲಿ ಆಸೆ ಯಿಲ್ಲದವರು ತಮ್ಮ ಇಷ್ಟವಾದ ಫಲಗಳಿಗೆ ಸಾಧನಗಳನ್ನು ತಿಳಿಯದೆ, ವಿಷಯಾಭಿಲಾಶೆಯಿಂದ ಅನ್ಯವಶರಾಗಿ, ಅಪಾಯಗಳಲ್ಲಿ ಉಪಾಯಗಳೆಂಬ ಭ್ರಾಂತಿಹೊಂದಿ ಪ್ರವೇಶಿಸಿ ನಷ್ಟ ಹೊಂದುವರು. ಆದ್ದರಿಂದ ಈ ವೇದಗಳು ತ್ರಿಗುಣಗಳನ್ನು ಹೊಂದಿರುವವರ ವಿಷಯವಾಗಿ ವಿಚಾರ ಮಾಡಿವೆ ಆದರೆ ನೀನು ತ್ರಿಗುಣರಹಿತನಾಗು ಈಗ ನಿನ್ನಲ್ಲಿ ಸತ್ವಗುಣ ಅಧಿಕವಾಗಿದ್ದಿ ಠಾದರೆ ಅದನ್ನು ವೃದ್ಧಿಪಡಿಸಿಕೊ. ಒಂದರೊಂದಿಗೆ ಒಂದು ಸೇರಿಕೊಂಡಿರುವ ಈ ಮೂರು ಗುಣಗಳ ಪ್ರಾಚುರ್ಯವುಳ್ಳವನಾಗಬೇಡ. ಸಮಸ್ತ ಸಾಂಸಾರಿಕ ಸ್ವಭಾವಗಳಿಂದ ರಹಿತನಾಗಿ ಅಂದರೆ ಸುಖ ದುಃಖ ಶೀತೋಷ್ಣಾದಿ ದ್ವಂದ್ವಗಳಿಂದ ಬಿಡಲ್ಪಟ್ಟವನಾಗಿ ನಿರ್ದ್ವಂದನಾಗಿರು ಮತ್ತು ರಜಸ್ತಮೋಗುಣಗಳೆರಡರಿಂದ ರಹಿತನಾಗಿ, ನಿತ್ಯವೂ ಸತ್ವಗುಣವನ್ನೇ ಅಧಿಕವಾಗಿ ಹೊಂದಿರುವವನಾಗು ಇದು ಹೇಗೆಂದರೆ— ನಿರ್ಯೋಗಕ್ಷೇಮನಾಗಿ ಆತ್ಮಪರಾಯಣನಾಗಿರು ಎನ್ನುತ್ತಾರೆ ಹೊಂದದೇ ಇರುವ ವಸ್ತುವನ್ನು ಹೊಂದುವುದೇ ಯೋಗವು ಮತ್ತು ಹೊಂದಿರುವ ವಸ್ತುವನ್ನು ಸಂರಕ್ಷಿಸುವುದೇ ಕ್ಷೇಮವು ಆತ್ಮ ಸ್ವರೂಪಕ್ಕೂ, ಅದರ ಪ್ರಾಪ್ತಿಗೆ ಬೇಕಾದ ಉಪಾಯಗಳಿಗೂ ವ್ಯತಿರಿಕ್ತವಾದ ಅರ್ಥಗಳನ್ನು ಹೊಂದುವ ಯೋಗವನ್ನು ಮತ್ತು ಹೊಂದಿರುವ ಆ ಅರ್ಥಗಳ ಸಂರಕ್ಷಣೆಯನ್ನು ಬಿಟ್ಟು ಆತ್ಮ ಸ್ವರೂಪಾನ್ವೇಷಣಪರನಾಗು. ಹೀಗೆ ಮಾಡುತ್ತಿದ್ದರೆ ನಿನ್ನಲ್ಲಿರುವ ರಜಸ್ತಮೋಗುಣಗಳ ಪ್ರಾಬಲ್ಯ ನಷ್ಟವಾಗಿ ಸತ್ವಗುಣವು ವೃದ್ಧಿ ಹೊಂದುತ್ತದೆ.

**ಶ್ಲೋಕ 46** ವೇದದಲ್ಲಿ ಪ್ರತಿಪಾದಿಸಿರುವ ಸಮಸ್ತ ವಿಷಯಗಳೂ ಎಲ್ಲರಿಗೂ ಉಪಾದೇಯಗಳಲ್ಲ ಎಂಬುದನ್ನು ಒಂದು ನಿದರ್ಶನದ ಮೂಲಕ ಈ ಶ್ಲೋಕದಲ್ಲಿ ತಿಳಿಸಿದ್ದಾರೆ

"ಸರ್ವಕಡೆಗಳಲ್ಲೂ ನೀರು ಪರಿಪೂರ್ಣವಾಗಿ ತುಂಬಿರುವ ಜಲಾಶಯದಲ್ಲಿ ಎಷ್ಟು ಮಾತ್ರ ಪ್ರಯೋಜನವೋ ಅಷ್ಟು ಮಾತ್ರವೇ ನೀರು ಬೇಕಾಗಿರುವಂತೆ ವೇದ ವಿದನಾದ ಮುಮುಕ್ಷುವಿಗೆ ಸಮಸ್ತ ವೇದಗಳಲ್ಲಿ ಎಷ್ಟು ಅಂಶವು ಅವಶ್ಯಕವೋ ಅಷ್ಟೇ ಗ್ರಹಿಸತಕ್ಕದ್ದು"

ಸಮಸ್ತ ಜನರ ಸಮಸ್ತ ವಿಧವಾದ ಉಪಯೋಗಕ್ಕಾಗಿ ಕಟ್ಟಲ್ಪಟ್ಟು ಸಮಸ್ತ ಕಡೆಗಳಲ್ಲೂ ನೀರಿನಿಂದ ಪರಿಪೂರ್ಣವಾಗಿ ತುಂಬಿರುವ ತಟಾಕದಲ್ಲಿ ದಾಹ ಹೊಂದಿರುವ ಮನುಷ್ಯನು ತನಗೆ ಎಷ್ಟು ನೀರುಬೇಕೋ ಅಷ್ಟನ್ನು ಮಾತ್ರ ಕುಡಿಯುತ್ತಾನೆಯೇ ವಿನ. ತಟಾಕದಲ್ಲಿರುವ ಎಲ್ಲ ನೀರನ್ನೂ ಕುಡಿಯುವುದಿಲ್ಲ ಹಾಗೆಯೇ ವೇದಾರ್ಥ ತಿಳಿದ ಬ್ರಾಹ್ಮಣನು ಅಂದರೆ ವೈದಿಕನಾದ ಮುಮುಕ್ಷುವು ಸಮಸ್ತ ವೇದಗಳಲ್ಲಿ ಮೋಕ್ಷಸಾಧನೆಗೆ ಎಷ್ಟು ಬೇಕೋ ಅಷ್ಟು ವಿಷಯಗಳನ್ನು ಮಾತ್ರ ಗ್ರಹಿಸಬೇಕೇವಿನಹ ಇತರ ವಿಷಯಗಳನ್ನು ಗ್ರಹಿಸಕೂಡದು

(ಈ ಎರಡು ಶ್ಲೋಕಗಳ ತಾತ್ಪರ್ಯವೇನೆಂದರೆ-ವೈದ್ಯನು ಎಲ್ಲಾ ರೋಗಿಗಳಿಗೂ ಔಷಧ ಚಿಕಿತ್ಸೆಗಳನ್ನು ಇಟ್ಟಿರುವಂತೆ ವೇದಗಳೂ ಸತ್ವರಜಸ್ತಮೋ ಗುಣಗಳ ಪ್ರಾಚುರ್ಯವುಳ್ಳ ಮೂರುವಿಧ ಅಧಿಕಾರಿಗಳನ್ನು ಕುರಿತು ಉಪದೇಶ ಮಾಡಿವೆ ಆದ್ದರಿಂದ ರೋಗಿಯು ತನ್ನ ರೋಗನಿವಾರಣೆಗೆ ತನಗೆ ಯಾವ ಔಷದ ಬೇಕೋ ಅದನ್ನು ಮಾತ್ರ ಸೇವಿಸುವಂತೆ, ದಾಹ ಹೊಂದಿದವನು ತಟಾಕದಿಂದ ತನ್ನ ಬಾಯಾರಿಕೆ ಅಡಗಲು ಎಷ್ಟು ಬೇಕೋ ಅಷ್ಟು ಮಾತ್ರನೀರು ಕುಡಿಯುವಂತೆ, ಮೋಕ್ಷಾರ್ಥಿಯಾದವನು ವೇದಗಳಲ್ಲಿ ಮೋಕ್ಷಸಾಧನೆಗೆ ಬೇಕಾಗಿರುವ ಉಪದೇಶಗಳನ್ನು ಮಾತ್ರ ಗ್ರಹಿಸತಕ್ಕದ್ದು. ಇತರ ಅಧಿಕಾರಿಗಳಿಗೆ ಹೇಳಿರುವ ಉಪದೇಶಗಳನ್ನು ಗ್ರಹಿಸಕೂಡದು ಎಂದು ಅಭಿಪ್ರಾಯ)

**ಶ್ಲೋಕ 47**—ಸತ್ವಗುಣವನ್ನು ಹೊಂದಿರುವ ಮುಮುಕ್ಷುವು ಯಾವುದನ್ನು ಗ್ರಹಿಸಬೇಕು ಎಂದು ವಿಷಯವನ್ನು ಈ ಶ್ಲೋಕದಲ್ಲಿ ಹೇಳಿದ್ದಾರೆ

"ನಿನಗೆ ಕರ್ಮಮಾಡುವುದಕ್ಕೆ ಮಾತ್ರ ಅಧಿಕಾರವಿದೆ ಎಂದಿಗೂ ಅದರ ಫಲದಲ್ಲಿ (ಅಧಿಕಾರ) ಇಲ್ಲ. ಆದ್ದರಿಂದ ಕರ್ಮಕ್ಕೂ ಅದರ ಫಲಕ್ಕೂ ನೀನು ಕಾರಣನಾಗಬೇಡ. (ನೀನೆ ಕಾರಣನೆಂದು ತಿಳಿಯಬೇಡ) ಕರ್ಮಮಾಡದೇ ಇರುವ ಪ್ರವೃತ್ತಿಯಲ್ಲಿ ಸಂಗ ಹೊಂದಬೇಡ "

ಸದಾ ಸತ್ವಗುಣಭರಿತನಾದ ನಿನಗೆ ಯಾವುದಾದರೂ ಫಲ ವಿಶೇಷಗಳ ಸಂಬಂಧ ಹೊಂದಿರುವ ನಿತ್ಯ ನೈಮಿತ್ತಿಕ ಕಾಮ್ಯ ಕರ್ಮಗಳಲ್ಲಿ ಕೇವಲ ಕರ್ಮ ಮಾಡುವುದಕ್ಕೆ ಮಾತ್ರ ಅಧಿಕಾರವಿದೆ ಆಯಾ ಕರ್ಮಗಳಿಗೆ ಸಂಬಂಧಪಟ್ಟವುಗಳಾಗಿ ತಿಳಿದು ಬರುವ ಫಲಗಳಲ್ಲಿ ನಿನಗೆ ಎಂದೂ ಅಧಿಕಾರವಿಲ್ಲ ಏತಕ್ಕೆಂದರೆ ಫಲಸಹಿತವಾಗಿ (ಅಂದರೆ ಫಲಾಸಕ್ತಿಯೊಂದಿಗೆ) ಮಾಡುವ ಕರ್ಮಗಳು ಬಂಧನರೂಪಗಳಾಗಿವೆ ಮತ್ತು ಫಲಾಸಕ್ತಿ ರಹಿತವಾಗಿ ಕೇವಲ ನನ್ನ (ಪರಮಾತ್ಮನ) ಆರಾಧನೆಯ ರೂಪದಲ್ಲಿ ಮಾಡುವ ಕರ್ಮಗಳು ಮೋಕ್ಷ ಕೊಡುವಂಥವುಗಳಾಗಿವೆ

ನೀನು ಕರ್ಮಕ್ಕೂ ಅದರ ಫಲಕ್ಕೂ ಕಾರಣನು ಆಗಬೇಡ (ಅಂದರೆ ನೀನೇ ಕಾರಣನೆಂದು ತಿಳಿಯಬೇಡ) ನಿತ್ಯಸತ್ತ್ವಗುಣಭರಿತನಾದ ಮುಮುಕ್ಷುವಾದ ನೀನು ಅನುಷ್ಠಿಸುವ ಕರ್ಮಗಳಲ್ಲಿ ನಿನ್ನ ಅಕರ್ತೃತ್ವವನ್ನೂ (ಅಂದರೆ ನೀನೇ ಕರ್ತನಲ್ಲ ಎಂಬುದನ್ನೂ) ಅನುಸಂಧಾನ ಮಾಡಬೇಕು ಅದರೊಂದಿಗೆ ಭೋಜನ ಮಾಡುವುದು ಮುಂತಾದ ಕರ್ಮಗಳಿಂದ ಉಂಟಾಗುವ ಹಸಿವನ್ನು ಅಡಗಿಸಿಕೊಳ್ಳುವಿಕೆ ಮುಂತಾದ ಫಲಗಳಿಗೂ ಕೂಡ ನೀನು ಕಾರಣನಲ್ಲ ಎಂಬುದನ್ನೂ ಅನುಸಂಧಾನ ಮಾಡಬೇಕು. ಅವೆರಡೂ ಅಂದರೆ ಕರ್ಮ ಮತ್ತು ಅದರ ಫಲ ಎರಡೂ ಯಾರಿಗೆ ಸೇರಿದವು ? ಅವುಗಳು ತ್ರಿಗುಣಗಳಿಗೆ ಸೇರಿವೆಯೇ ಅಥವ ಸರ್ವೇಶ್ವರನಾದ ನನಗೆ ಸೇರಿವೆಯೇ ಎಂಬ ವಿಷಯವು ಮುಂದೆ ಹೇಳಲ್ಪಡುತ್ತದೆ. ಈಗ ಈ ರೀತಿಯಾಗಿ ಅನುಸಂಧಾನ ಮಾಡುತ್ತಾ (ಅಂದರೆ ಕರ್ಮವೂ ಅದರ ಫಲವೂ ನನಗೆ ಸೇರಿದ್ದಲ್ಲ ಎಂದು ಅನುಸಂಧಾನ ಮಾಡುತ್ತಾ) ಕರ್ಮ ಮಾಡುವವನಾಗು. 'ನಾನು ಯುದ್ಧ ಮಾಡುವುದಿಲ್ಲ' ಎಂದು ನೀನು ಹೇಳುವ ಹಾಗೆ ಕರ್ಮ ಮಾಡದೇ ಇರುವ ಪ್ರವೃತ್ತಿಯಲ್ಲಿ ಸಂಗ ಹೊಂದಬೇಡ ಮೇಲೆ ಹೇಳಿದ ರೀತಿಯಲ್ಲಿ ಯುದ್ಧಾದಿ ಕರ್ಮಗಳನ್ನು ಮಾಡುವುದರಲ್ಲೇ ಆಸಕ್ತಿವುಳ್ಳವನಾಗು ಎಂದು ಅಭಿಪ್ರಾಯ

(ಕರ್ಮ ಮಾಡು ಎಂದು ಹೇಳಿ, ಕರ್ಮಕ್ಕೆ ಕಾರಣನಾಗಬೇಡ ಎಂದು ಉಪದೇಶ ಮಾಡಿರುವುದರಿಂದ ಇಲ್ಲಿ ಒಂದಕ್ಕೊಂದು ಪರಸ್ಪರ ವಿರೋಧವಾದ ಉಪದೇಶಗಳಾಗಲಿಲ್ಲವೇ ಎಂದರೆ ಅದಕ್ಕೆ ಉತ್ತರವಾಗಿ ಕರ್ಮಕ್ಕೆ ಕಾರಣನಾಗಬೇಡ ಎಂಬುದಕ್ಕೆ ಕರ್ಮಕ್ಕೆ ನೀನೇ ಕಾರಣನೆಂದು ತಿಳಿದುಕೊಂಡು ಕರ್ಮ ಮಾಡಬೇಡ ಎಂದು ಅರ್ಥ ಹೇಳಿದ್ದಾರೆ ಕರ್ಮಕ್ಕೆ ಕರ್ತೃ ನಾನು ಎಂದೂ ಕರ್ಮದ ಫಲ ನನಗೆ ಎಂದೂ ಭಾವಿಸಿಕೊಂಡು ಕರ್ಮ ಮಾಡಬೇಡ. ಅಕರ್ತೃತ್ವಾನುಸಂಧಾನದೊಂದಿಗೆ ಕರ್ಮ ಮಾಡು , ಫಲಾಸಕ್ತಿರಹಿತನಾಗಿ ಕರ್ಮ ಮಾಡು ಎಂದು ಉತ್ತರ ಹೇಳಿದ್ದಾರೆ ಆದ್ದರಿಂದ ಕರ್ಮ ಮಾಡಬೇಕು ಆದರೆ ಅದನ್ನು ಮಾಡುವಾಗ ಅಕರ್ತೃತ್ವಾನುಸಂಧಾನವೂ, ಫಲಾಭಿಸಂಧಿರಹಿತತ್ವವೂ ಇರಬೇಕು ಎಂಬುದೇ ಈ ಶ್ಲೋಕದ ಉಪದೇಶ )

**ಶ್ಲೋಕ 48**—ಹಿಂದಿನ ಶ್ಲೋಕದ ಅಭಿಪ್ರಾಯವನ್ನೇ ಇಲ್ಲಿ ಸ್ಪಷ್ಟಪಡಿಸಿ ಹೇಳಿದ್ದಾರೆ-"ಧನಂಜಯನೇ ! ಯೋಗಸ್ಥನಾಗಿ (ಚಿತ್ತಸ್ವಾಸ್ಥ್ಯವುಳ್ಳವನಾಗಿ ) ಸಂಗವನ್ನು ತೊರೆದು, ಕರ್ಮದ ಸಿದ್ಧಿ ಅಸಿದ್ಧಿಗಳಲ್ಲಿ ಸಮಭಾವ ಹೊಂದಿ ಕರ್ಮ ಮಾಡು ಈ ಸಮತ್ವ ಭಾವನೆಯೇ (ಚಿತ್ತಸ್ವಾಸ್ಥ್ಯವೇ) ಯೋಗವೆಂದು ಹೇಳಲ್ಪಡುತ್ತದೆ '.

ರಾಜ್ಯ ಮತ್ತು ಬಂಧುಗಳು ಮುಂತಾದವರಲ್ಲಿ ಆಸಕ್ತಿಯನ್ನು ತೊರೆದು ಯುದ್ಧಾದಿ ಕರ್ಮಗಳನ್ನು ಯೋಗಸ್ಥನಾಗಿ ಮಾಡು, ಕರ್ಮ ಮಾಡುವುದರಿಂದ ಉಂಟಾಗುವ ಸಿದ್ಧಿ ಅಸಿದ್ಧಿಗಳಲ್ಲಿ (ಜಯ ಅಪಜಯಗಳಲ್ಲಿ) ಸಮಭಾವಹೊಂದಿ ಕರ್ಮಮಾಡು. ಹೀಗೆ ಸಿದ್ಧಿ ಅಸಿದ್ಧಿಗಳಲ್ಲಿ ಸಮಭಾವನೆ ಹೊಂದಿರುವಿಕೆಯೇ "ಯೋಗಸ್ಥ" ಎಂದು ಇಲ್ಲಿ ಯೋಗಶಬ್ದದಿಂದ ಹೇಳಲ್ಪಟ್ಟಿದೆ ಯೋಗ ಎಂದರೆ ಸಿದ್ಧಿ ಅಸಿದ್ಧಿಗಳಲ್ಲಿ ಸಮತ್ವ ರೂಪವಾದ ಚಿತ್ತ ಸಮಾಧಾನವು ಎಂದು ಅರ್ಥ.

**ಶ್ಲೋಕ 49** "ಸುಖದುಃಖೆ ಸಮೇಕೃತ್ವಾ," "ವ್ಯವಸಾಯಾತ್ಮಿಕಾಬುದ್ಧಿ." ಮುಂತಾದ ಶ್ಲೋಕಗಳಲ್ಲಿ ಮೇಲೆಯೇ ಈ ಬುದ್ಧಿಯೋಗವೂ ಮತ್ತು ಸಮತ್ವಬುದ್ಧಿಯೂ ಹೇಳಿ ಆಗಿದ್ದಾಗ್ಯೂ ಈಗ ಮತ್ತೆ ಅದನ್ನೇ ಏಕೆಹೇಳುತ್ತಾರೆ ಎಂದರೆ ಅದಕ್ಕೆ ಉತ್ತರವಾಗಿ ಬುದ್ಧಿಯೋಗದ ಮಹತ್ವವನ್ನು ನೋಡಿದರೆ ಅದನ್ನು ಎಷ್ಟುಸಲ ಹೇಳಿದರೂ ಸಾಲದು ಎಂದು ಅದರ ಮಹತ್ವವನ್ನು ಈ ಶ್ಲೋಕದಲ್ಲಿ ಹೇಳಿದ್ದಾರೆ.

"ಧನಂಜಯನೇ! ಬುದ್ಧಿ ಯೋಗದಿಂದ ಕೂಡಿನ ಕರ್ಮಕ್ಕಿಂತಲೂ ಇತರ ಸಾಧಾರಣ ಕರ್ಮವು ಅತ್ಯಂತ ನಿಕೃಷ್ಟವಾದುದಾಗಿದೆ ಕರ್ಮ ಮಾಡುವಾಗ ಬುದ್ಧಿಯನ್ನು (ಬುದ್ಧಿಯೋಗವನ್ನು) ಆಶ್ರಯಿಸು ಫಲವನ್ನೇ ಕಾರಣವಾಗಿ ಹೊಂದಿ ಕರ್ಮ ಮಾಡುವವರು ದೀನರು ಕರ್ಮ ಮಾಡುವಾಗ ಪ್ರಧಾನ ಫಲದಲ್ಲಿ ಅನಾಸಕ್ತನಾಗಿರುವಿಕೆ ಮತ್ತು ಮಧ್ಯದಲ್ಲಿ ಉಂಟಾಗತಕ್ಕ ಫಲಗಳ ಸಿದ್ಧಿ ಅಸಿದ್ಧಿಗಳಲ್ಲಿ ಸಮಚಿತ್ತನಾಗಿ ಅಂದರೆ ಸಮಾಧಾನಚಿತ್ತನಾಗಿ ಇರುವಿಕೆಯೇ ಬುದ್ಧಿಯೋಗವು. ಇಂತಹ ಬುದ್ಧಿಯೋಗದಿಂದ ಕೂಡಿ ಮಾಡುವ ಕರ್ಮಗಳಿಗಿಂತ ಅದಿಲ್ಲದೆ ಮಾಡುವ ಕರ್ಮಗಳು ಅತ್ಯಂತ ನಿಕೃಷ್ಟವಾದವುಗಳಾಗಿವೆ ಇವೆರಡರಲ್ಲಿ ಪರಸ್ಪರ ಉತ್ಕೃಷ್ಟತೆ, ನಿಕೃಷ್ಟತೆಗಳು ಅತ್ಯಂತ ಮಹತ್ತರವಾಗಿವೆ (ಅಂದರೆ ಅವೆರಡರ ವ್ಯತ್ಯಾಸ ಮಹತ್ತರವಾದುದು ಎಂದು ಅಭಿಪ್ರಾಯ) ಹೇಗೆಂದರೆ ಮೇಲೆ ಹೇಳಿದ ಬುದ್ಧಿ ಯೋಗಯುಕ್ತವಾದ ಕರ್ಮಗಳು ಸಮಸ್ತ ಸಾಂಸಾರಿಕ ದುಃಖಗಳನ್ನು ಸಂಪೂರ್ಣವಾಗಿ ನಿವಾರಣೆ ಮಾಡಿ ಪರಮ ಪುರುಷಾರ್ಥರೂಪವಾದ ಮೋಕ್ಷಪ್ರಾಪ್ತಿಯನ್ನು ಉಂಟುಮಾಡುತ್ತದೆ, ಇತರ ಕರ್ಮಗಳು (ಫಲದಲ್ಲಿ ಆಸೆಹೊಂದಿ ಮಾಡುವ ಕರ್ಮಗಳು) ಅಪರಿಮಿತ ದುಃಖರೂಪವಾದ ಸಂಸಾರ ಪ್ರಾಪ್ತಿಯನ್ನು ಉಂಟುಮಾಡುತ್ತವೆ ಆದ್ದರಿಂದ ಕರ್ಮಮಾಡುವಾಗ ಮೇಲೆ ಹೇಳಿದ ಬುದ್ಧಿಯೋಗವನ್ನು ಆಶ್ರಯಿಸು ಅಂದರೆ ಆ ಬುದ್ಧಿಯೋಗದಲ್ಲೇ ಇರುವವನಾಗಿ ಕರ್ಮಾಚರಣೆಮಾಡು. ಫಲವನ್ನು ಕಾರಣವಾಗಿ ಹೊಂದಿ ಕರ್ಮ ಮಾಡುವ ಮನುಷ್ಯರು ಕೃಪಣರು ಅಂದರೆ ಅವರು ಸಂಸಾರಿಗಳಾಗಿ ಆಗುವರು.

**ಶ್ಲೋಕ 50** "ಬುದ್ಧಿಯೋಗ ಯುಕ್ತರಾಗಿ ಕರ್ಮ ಮಾಡುವವರು ಇಲ್ಲಿಯೇ (ಮೋಕ್ಷಕ್ಕೆ ಪ್ರತಿಬಂಧಕಗಳಾದ) ಪುಣ್ಯಪಾಪಗಳೆರಡನ್ನೂ ಕಳೆದು ಕೊಳ್ಳುವರು ಆದ್ದರಿಂದ ನೀನು ಬುದ್ಧಿಯೋಗಕ್ಕಾಗಿ ಪ್ರಯತ್ನಮಾಡು ಕರ್ಮಾನುಷ್ಠಾನಗಳಲ್ಲಿ ಬುದ್ಧಿಯೋಗವೇ ಕುಶಲತೆಯು."

ಬುದ್ಧಿಯೋಗ ಯುಕ್ತನಾಗಿ ನೀನು ಕರ್ಮಮಾಡಿದರೆ ಅನಾದಿ ಕಾಲದಿಂದ ಸಂಚಿತನಾಗಿರುವ ಬಂಧಕ್ಕೆ ಕಾರಣಗಳಾದ ಅನಂತ ಸುಕೃತ ದುಷ್ಕೃತಗಳೆರಡನ್ನೂ ನೀನು ಕಳೆದುಕೊಳ್ಳುವೆ ಆದ್ದರಿಂದ ಮೇಲೆ ಹೇಳಿದ ಬುದ್ಧಿಯೋಗಕ್ಕಾಗಿ ಪ್ರಯತ್ನ ಮಾಡು ಕರ್ಮಗಳನ್ನು ಮಾಡುವಾಗ ಈ ಬುದ್ಧಿಯೋಗವೇ ಕುಶಲತೆಯು-ಅಂದರೆ ಅತ್ಯಂತ ಸಾಮರ್ಥ್ಯವುಳ್ಳದ್ದು. ಅಂದರೆ ಈ ಬುದ್ಧಿಯೋಗವು ಅತ್ಯಂತ ಸಾಮರ್ಥ್ಯದಿಂದ ಸಾಧ್ಯವಾಗತಕ್ಕದ್ದು ಎಂದು ಅರ್ಥ.

**ಶ್ಲೋಕ 51** "ಮನುಷ್ಯರು ಬುದ್ಧಿಯೋಗದಿಂದ ಕೂಡಿದವರಾಗಿ ಕರ್ಮದಿಂದುಂಟಾಗುವ ಫಲಗಳನ್ನು ತ್ಯಾಗಮಾಡಿ (ಫಲದಲ್ಲಿ ಆಸಕ್ತಿಹೊಂದದೆ ಕರ್ಮಮಾಡಿ) ಜನ್ಮವೆಂಬ ಬಂಧನದಿಂದ ಚೆನ್ನಾಗಿ ಬಿಡಲ್ಪಟ್ಟವರಾಗಿ, ಕ್ಲೇಶರಹಿತವಾದ ಪದವನ್ನು ಅಂದರೆ ಮೋಕ್ಷವನ್ನು ಪಡೆಯುತ್ತಾರಲ್ಲವೆ ?"

ಬುದ್ಧಿಯೋಗಯುಕ್ತನಾದ ಪುರುಷನು, ಕರ್ಮದಿಂದುಂಟಾಗುವ ಫಲಗಳನ್ನು ತ್ಯಜಿಸಿ, (ಅದರಲ್ಲಿ ನಿರಾಸಕ್ತನಾಗಿ) ಕರ್ಮ ಮಾಡುತ್ತಾ, ಆದರಿಂದ ಜನ್ಮರೂಪ ಬಂಧನದಿಂದ ಸಂಪೂರ್ಣವಾಗಿ ಮುಕ್ತಿಹೊಂದಿ ಕ್ಲೇಶರಹಿತವಾದ ಮೋಕ್ಷವನ್ನು ಹೊಂದುತ್ತಾನೆ ಎಂಬುದು ಸಮಸ್ತ ಉಪನಿಷತ್ತುಗಳಲ್ಲಿಯೂ ಪ್ರಸಿದ್ಧವಾಗಿದೆ.

**ಶ್ಲೋಕ 52** "ಯಾವಾಗ ನಿನ್ನ ಬುದ್ಧಿಯು ಅಲ್ಪ ಅಸ್ಥಿರ ಫಲಗಳಲ್ಲಿ ಆಸೆ ಎಂಬ ಮೋಹರೂಪ ಕಲ್ಮಷವನ್ನು (ಮೋಹವನ್ನು) ದಾಟುತ್ತದೆಯೋ ಆಗ ಇಲ್ಲಿಯವರೆಗೆ ಹೇಳಲ್ಪಟ್ಟ ಮತ್ತು ಮುಂದೆ ಹೇಳಲ್ಪಡುವ (ಎಲ್ಲಾ ಪ್ರಕಾರವಾದ ಫಲಗಳಿಂದ) ವಿರಕ್ತಿಯನ್ನು ನೀನಾಗಿಯೇ ಹೊಂದುವೆ."

ಮೇಲೆ ಹೇಳಿದ ರೀತಿಯಲ್ಲಿ ಕರ್ಮಾಚರಣೆ ಮಾಡುತ್ತಾ ಮಾಡುತ್ತಾ ಅದರ ಮೂಲಕ ಪಾಪರಹಿತನಾದ ಮೇಲೆ ನಿನ್ನ ಬುದ್ಧಿಯು ಯಾವಾಗ ಅತ್ಯಲ್ಪ ಫಲಗಳಲ್ಲಿ ಆಸಕ್ತಿ ಹೊಂದುವುದರಿಂದ ಉಂಟಾಗುವ ಮೋಹರೂಪ ಕಲ್ಮಷವನ್ನು ದಾಟುತ್ತದೆಯೋ, ಆಗ ಸ್ವಾಭಾವಿಕವಾಗಿ ನಾನು ಇಲ್ಲಿಯವರೆಗೆ ಹೇಳಿದ ಮತ್ತು ಇನ್ನು ಮುಂದೆ ಹೇಳುವ ಸಮಸ್ತ ಫಲಾದಿಗಳಲ್ಲಿಯೂ ನೀನಾಗಿಯೇ ವಿರಕ್ತಿ ಹೊಂದುವೆ.

**ಶ್ಲೋಕ 53**

"ನತ್ವೇವಾಹಂ" ಎಂದು ಆರಂಭಿಸಿ ಆತ್ಮ ಯಥಾರ್ಥ ಸ್ವರೂಪವನ್ನು ಮೊದಲು ತಿಳಿಸಿ, ಅನಂತರ "ಯೋಗೇತ್ವಿಮಾಂಶೃಣು" ಎಂದು ಆರಂಭಿಸಿ ಆತ್ಮಯಾಥಾತ್ಮ್ಯ ಜ್ಞಾನಪೂರ್ವಕ ಬುದ್ಧಿಯೋಗದಿಂದ ಕೂಡಿದ ಕರ್ಮಯೋಗವನ್ನು ತಿಳಿಸಿ, ಈಗ ಆ ಕರ್ಮಾನುಷ್ಠಾನಕ್ಕೆ ಗುರಿಯಾದ ಯೋಗವೆಂಬ ಫಲದ ವರ್ಣನೆ ಮಾಡುತ್ತಾರೆ "ಮೇಲೆ ಹೇಳಲ್ಪಟ್ಟ ಉಪದೇಶವನ್ನು ಕೇಳಿ ವಿಶೇಷ ವಿವೇಕದಿಂದಕೂಡಿದ (ಚೆನ್ನಾಗಿ ಪರಿಪಕ್ವವಾದ) ನಿನ್ನ ಬುದ್ಧಿಯು ಯಾವಾಗ ತಾನಾಗಿಯೇ ಏಕರೂಪವುಳ್ಳುದಾಗಿ (ಒಂದೇ ಪ್ರಯೋಜನವನ್ನು ಉದ್ದೇಶವಾಗಿಹೊಂದಿ) ಮನಸ್ಸಿನಲ್ಲಿ ಚಾಂಚಲ್ಯವನ್ನು ಹೊಂದದೆ ನಿಶ್ಚಲವಾಗಿ (ಸ್ಥಿರವಾಗಿ) ನಿಲ್ಲುವುದೋ, ಆಗ ನೀನು (ಆತ್ಮದರ್ಶನರೂಪ) ಯೋಗವನ್ನು ಹೊಂದುವೆ."

ಶ್ರುತಿ ಎಂದರೆ ಕೇಳುವುದು; ನಾನು ಹೇಳಿದ ಉಪದೇಶಗಳನ್ನು ಕೇಳಿದುದರ ಫಲವಾಗಿ ಸಕಲೇತರ ವಸ್ತುಗಳಿಗಿಂತ ವಿಜಾತೀಯವಾಗಿರುವ, ನಿತ್ಯವಾದ, ನಿರತಿಶಯ ಸೂಕ್ಷ್ಮವಾದ ಆತ್ಮತತ್ತ್ವ ವಿಷಯವು ವಿಶೇಷವಾಗಿ ನಿನ್ನ ಮನಸ್ಸಿನಲ್ಲಿ ನಾಟಿ, ನಿನ್ನ ಬುದ್ಧಿಯು ತಾನಾಗಿಯೇ ಅಚಲವಾಗಿ ಏಕರೂಪವಾಗಿ (ಅಂದರೆ ಮೋಕ್ಷ ಒಂದನ್ನೇ ಪ್ರಯೋಜನವಾಗಿ ಹೊಂದಿರುವುದಾಗಿ) ಯಾವಾಗ ಆಗುತ್ತದೆಯೋ ಆಗ ನೀನು ಸಂಗರಹಿತನಾಗಿ ಕರ್ಮಮಾಡುತ್ತೀಯೆ. ಆದರಿಂದ ನಿನ್ನ ಮನಸ್ಸು ಪರಿಶುದ್ಧವಾಗುತ್ತದೆ ಮತ್ತು ಅದರ ಫಲವಾಗಿ ನೀನು ಆತ್ಮಾವಲೋಕನ ಯೋಗವನ್ನು ಹೊಂದುತ್ತೀಯೆ ಅಭಿಪ್ರಾಯವೇನೆಂದರೆ-ಶಾಸ್ತ್ರಜ್ಞಾನದಿಂದ ಆತ್ಮಯಾಥಾತ್ಮ್ಯ ಜ್ಞಾನವುಂಟಾಗುತ್ತದೆ. ಈ ಆತ್ಮಜ್ಞಾನದಿಂದ ಕೂಡಿದ ಕರ್ಮಯೋಗವು ಸ್ಥಿತ ಪ್ರಜ್ಞತೆ ಎಂಬ ಜ್ಞಾನ ನಿಷ್ಠೆಯನ್ನು ಉಂಟುಮಾಡುತ್ತದೆ ಜ್ಞಾನನಿಷ್ಠಾರೂಪವಾದ ಸ್ಥಿತ ಪ್ರಜ್ಞತೆಯಾದರೋ ಯೋಗವೆಂಬ ಆತ್ಮ ಸಾಕ್ಷಾತ್ಕಾರವನ್ನು ಸಾಧಿಸಿಕೊಡುತ್ತದೆ.

## 3. ಸ್ಥಿತಪ್ರಜ್ಞನ ಲಕ್ಷಣ

### (ಶ್ಲೋಕಗಳು 54 ರಿಂದ 72)

ಎರಡನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಮೊದಲು ಸಾಂಖ್ಯ ಬುದ್ಧಿಯನ್ನು ಅಂದರೆ ದೇಹಾತ್ಮರುಗಳ ವಿಲಕ್ಷಣತೆಯನ್ನೂ, ದೇಹವು ಅನಿತ್ಯವು ಆತ್ಮನು ನಿತ್ಯನು ಎಂಬ ಜ್ಞಾನವನ್ನು ತಿಳಿಸಿದನು ; ಅನಂತರ ಯೋಗ ಬುದ್ಧಿಯನ್ನು ಅಂದರೆ ಫಲಸಂಗ ಮತ್ತು ಕರ್ತೃತ್ವ ಜ್ಞಾನ ರಹಿತನಾಗಿ ಕರ್ಮಮಾಡುವ ಬುದ್ಧಿಯೋಗವೆಂಬ ಕರ್ಮಯೋಗವನ್ನು ವಿವರಿಸಿದನು ; ಈಗ ಮುಂದಿನ ಶ್ಲೋಕಗಳಿಂದ ಇದರಿಂದ ಉಂಟಾಗುವ ಸ್ಥಿತ ಪ್ರಜ್ಞತೆಯನ್ನೂ, ಸ್ಥಿತ ಪ್ರಜ್ಞನ ಲಕ್ಷಣವನ್ನೂ ವಿವರಿಸಿ ಈ ಅಧ್ಯಾಯವನ್ನು ಮುಕ್ತಾಯ ಮಾಡಿದ್ದಾನೆ.

ಇಲ್ಲಿಯವರೆಗೆ ಶ್ರೀ ಕೃಷ್ಣನು ಮಾಡಿದ ಉಪದೇಶಗಳನ್ನೆಲ್ಲಾ ಕೇಳಿದ ಅರ್ಜುನನು, ಆಸಕ್ತಿ ರಹಿತವಾದ ಕರ್ಮಾನುಷ್ಠಾನ ರೂಪ ಕರ್ಮಯೋಗದ ಮೂಲಕ ಸಿದ್ಧಿಸಲ್ಪಡುವ ಮತ್ತು (ಆತ್ಮ ಸಾಕ್ಷಾತ್ಕಾರ ರೂಪ) ಯೋಗಕ್ಕೆ ಸಾಧನ ಭೂತವಾದ ಸ್ಥಿತ ಪ್ರಜ್ಞತೆಯ ಸ್ವರೂಪವನ್ನೂ ಮತ್ತು ಸ್ಥಿತ ಪ್ರಜ್ಞನ ಕರ್ಮಾನುಷ್ಠಾನ ಪ್ರಕಾರವನ್ನೂ ಹೇಳಬೇಕೆಂದು ಕೇಳುತ್ತಾನೆ.

**ಶ್ಲೋಕ 54** ಅರ್ಜುನನು ಕೇಳುತ್ತಾನೆ "ಸಮಾಧಿಯಲ್ಲಿರುವ ಸ್ಥಿತ ಪ್ರಜ್ಞನಸ್ವರೂಪವನ್ನು ತಿಳಿಸುವ ಶಬ್ದವಾವುದು (ಅಂದರೆ ಆತನ ಸ್ವರೂಪವೆಂತಹುದು) ಅವನು ಯಾವ ರೀತಿ ಮಾತನಾಡುತ್ತಾನೆ? ಅವನು (ಧ್ಯಾನಕ್ಕೆ) ಹೇಗೆ ಕುಳಿತುಕೊಳ್ಳುತ್ತಾನೆ? (ಅವನ ಮಾನಸಿಕ ವ್ಯಾಪಾರವೆಂತಹುದು?) ಅವನ ಕಾಯಿಕ ವ್ಯಾಪಾರಗಳೆಲ್ಲಾ ಯಾವ ರೀತಿ ಇರುತ್ತವೆ?"

ಸ್ಥಿತಪ್ರಜ್ಞನೆಂದರೆ ನಿಶ್ಚಲವಾದ ಬುದ್ಧಿಯುಳ್ಳವನು ಎಂದು ಅರ್ಥ. ಸಮಾಧಿಯಲ್ಲಿರುವ ಅಂದರೆ ಮೇಲೆ ಹೇಳಿದ ಚಿತ್ತವೃತ್ತಿಯುಳ್ಳ (ಮನಸ್ಸನ್ನು ನಿಗ್ರಹಿಸಿ ವಶಪಡಿಸಿಕೊಂಡಿರುವ) ಸ್ಥಿತ ಪ್ರಜ್ಞನ ಸ್ವರೂಪವೆಂತಹುದು? ಅವನ ಲಕ್ಷಣವೇನು? ಸ್ಥಿತ

ಪ್ರಜ್ಞನು ಯಾವ ರೀತಿ ಮಾತನಾಡುತ್ತಾನೆ? ಅಂದರೆ ಅವನ ವಾಚಿಕ ವ್ಯಾಪಾರವೆಂತಹುದು ಎಂದು ಅರ್ಥ ಆಸ್ತೀತ ಯಾವ ಆಸನದಲ್ಲಿ ಕುಳಿತು ಧ್ಯಾನಮಾಡುತ್ತಾನೆ-ಅಂದರೆ ಅವನ ಮಾನಸಿಕ ವ್ಯಾಪಾರವೆಂತಹುದು ಮತ್ತು ಅವನ ಕಾಯಿಕ ಅಂದರೆ ಶಾರೀರಿಕ ವ್ಯಾಪಾರಗಳೆಲ್ಲಾ ಯಾವ ರೀತಿ ಇರುತ್ತವೆ? ಈ ವಿಷಯಗಳನ್ನೆಲ್ಲಾ ನನಗೆ ತಿಳಿಸು ಎಂದು ಅರ್ಜುನ ಶ್ರೀಕೃಷ್ಣ ನನ್ನು ಕೇಳುತ್ತಾನೆ ಇಲ್ಲಿ ಅರ್ಜುನನು ಸ್ಥಿತಪ್ರಜ್ಞನ ಸ್ವರೂಪ ವೆಂತಹುದು ? ಅವನ ವಾಚಿಕ, ಕಾಯಿಕ, ಮಾನಸಿಕ ವ್ಯಾಪಾರ ಗಳೆಲ್ಲಾ ಯಾವ ರೀತಿ ಇರುತ್ತವೆ? ಎಂದು ನಾಲ್ಕು ಪ್ರಶ್ನೆ ಗಳನ್ನು ಕೇಳಿದ್ದಾನೆ

## ಸ್ಥಿತಪ್ರಜ್ಞತೆಯ ನಾಲ್ಕು ಅವಸ್ಥೆಗಳು
## (ಶ್ಲೋಕಗಳು 55 ರಿಂದ 58)

ಸ್ಥಿತಪ್ರಜ್ಞನಾದ ಪುರುಷನ ಆಚರಣೆಯ ವರ್ಣನೆ ಮಾಡಿದರೆ ಅವನ ಸ್ವರೂಪದ ವರ್ಣನೆ ಮಾಡಿದಂತಾಗುತ್ತದೆ. ಆದ್ದರಿಂದ ಮುಂದಿನ ಶ್ಲೋಕಗಳಲ್ಲಿ ಶ್ರೀ ಕೃಷ್ಣನು ಸ್ಥಿತಪ್ರಜ್ಞನ ಆಚರಣೆ ಅನುಷ್ಠಾನಗಳ ವರ್ಣನೆ ಮಾಡಿದ್ದಾನೆ.

ಸ್ಥಿತ ಪ್ರಜ್ಞತ್ವವೆಂಬ ಜ್ಞಾನ ನಿಷ್ಠೆಯಲ್ಲಿ ನಾಲ್ಕು ಅವಸ್ಥೆ ಗಳಿವೆ ಈ ನಾಲ್ಕು ಅವಸ್ಥೆಗಳನ್ನು ಪಾತಂಜಲಯೋಗ ಸೂತ್ರದಲ್ಲಿ ಯತಮಾನಾವಸ್ಥೆ, ವ್ಯತಿರೇಕಾವಸ್ಥೆ, ಏಕೇಂದ್ರಿಯಾವಸ್ಥೆ ಮತ್ತು ವಶೀಕಾರಾವಸ್ಥೆ ಎಂದು ಕರೆದಿದ್ದಾರೆ ವಶೀಕಾರಾವಸ್ಥೆ ಎಂಬುದೇ ಸ್ಥಿತ ಪ್ರಜ್ಞತೆ ಮೇಲಿನ ಅವಸ್ಥೆ ಮಿಕ್ಕ ಮೂರು ಅವಸ್ಥೆಗಳೂ ಕೆಳಗಿನ ಅವಸ್ಥೆಗಳಾಗಿವೆ ಶ್ರೀ ಕೃಷ್ಣನು ಇಲ್ಲಿ 55ನೇ ಶ್ಲೋಕದಲ್ಲಿ ಮೊದಲು ಅತ್ಯಂತ ಮೇಲಾದ, ಸರ್ವೋತ್ಕೃಷ್ಟವಾದ ನಾಲ್ಕನೇ ಅವಸ್ಥೆಯಾದ ವಶೀಕಾರಾವಸ್ಥೆಯನ್ನು ತಿಳಿಸಿದ್ದಾನೆ ಅನಂತರ 56,57,58 ನೇ ಶ್ಲೋಕಗಳಲ್ಲಿ ಕ್ರಮೇಣ ಮೂರನೆಯ ಅವಸ್ಥೆಯಾದ ಏಕೇಂದ್ರಿಯಾವಸ್ಥೆಯನ್ನೂ, ಎರಡನೆಯ ಅವಸ್ಥೆಯಾದ ವ್ಯತಿರೇಕಾವಸ್ಥೆಯನ್ನೂ ಮತ್ತು ಮೊದಲನೆಯ ಅವಸ್ಥೆಯಾದ ಯತಮಾನಾವಸ್ಥೆಯನ್ನೂ ಒಂದೊಂದಾಗಿ ವಿವರಿಸಿದ್ದಾನೆ.

### ಶ್ಲೋಕ 55

ಈ ಶ್ಲೋಕದಲ್ಲಿ ಮೊದಲು ಸ್ಥಿತ ಪ್ರಜ್ಞತೆಯ ನಾಲ್ಕನೇ ಅವಸ್ಥೆಯನ್ನು ತಿಳಿಸಿದ್ದಾನೆ ಇದೇ ಸ್ಥಿತ ಪ್ರಜ್ಞತೆಯ ಸರ್ವೋತ್ಕೃಷ್ಟವಾದ ಅವಸ್ಥೆ. "ಅರ್ಜುನನೇ ! ಮನಸ್ಸಿನಲ್ಲಿ ಆತ್ಮನಲ್ಲೇ ಪ್ರೀತಿ ಹೊಂದಿದವನಾಗಿ (ಮನಸ್ಸಿನಲ್ಲಿ ಆತ್ಮ ಸ್ವರೂಪ ಚಿಂತನೆಯಲ್ಲೇ ಸಂತುಷ್ಟನಾಗಿ), ಯಾವಾಗ ಮನಸ್ಸಿನಲ್ಲಿ ಉಂಟಾಗುವ ಇತರ ಸಮಸ್ತ ಆಸೆಗಳನ್ನೂ ಸಂಪೂರ್ಣವಾಗಿ (ನಿಶ್ಶೇಷವಾಗಿ) ತ್ಯಾಗಮಾಡುತ್ತಾನೋ, ಆಗ ಅವನು ಸ್ಥಿತ ಪ್ರಜ್ಞನೆಂದು ಕರೆಸಿಕೊಳ್ಳುವನು".

"ಆತ್ಮನಾ ಆತ್ಮನಿ ಏವ ತುಷ್ಟಃ" ಎಂದರೆ ಮನಸ್ಸಿನಲ್ಲಿ ಆತ್ಮಾವಲೋಕನ ಮಾಡುವುದರಿಂದ ಸಂತುಷ್ಟನಾಗಿರುವಿಕೆ. ಆ ಸಂತೋಷದಿಂದ ಅದಕ್ಕೆ ವ್ಯತಿರಿಕ್ತವಾದ ಇತರ ಮನೋಗತ ಆಸೆಗಳನ್ನೆಲ್ಲಾ ಯಾವಾಗ ಸಂಪೂರ್ಣವಾಗಿ ತ್ಯಜಿಸುತ್ತಾನೆಯೋ ಆಗ ಇವನು ಸ್ಥಿತ ಪ್ರಜ್ಞನೆಂದು ಕರೆಸಿಕೊಳ್ಳುತ್ತಾನೆ. ಇದೇ ಸ್ಥಿತಪ್ರಜ್ಞತೆಯ ಪರಿಪೂರ್ಣವಾದ ಅವಸ್ಥೆ ಇದನ್ನು ಪಡೆದ ಜ್ಞಾನಿಯು ಆತ್ಮನೊಂದರಲ್ಲೇ ತನ್ನ ಮನಸ್ಸನ್ನು ನಿಲ್ಲಿಸಿ ಅದರಲ್ಲೇ ಪ್ರೀತಿ ಹೊಂದಿ ಆದರ ಮನನದಲ್ಲೇ ಸಂತುಷ್ಟನಾಗಿ ಇರುತ್ತಾನೆ. ಇತರ ಸಮಸ್ತ ಆಸೆಗಳನ್ನೆಲ್ಲಾ ಸಂಪೂರ್ಣವಾಗಿ ಅಂದರೆ ಅದರ ವಾಸನೆಯೂ ಇಲ್ಲದಂತೆ ತ್ಯಜಿಸುತ್ತಾನೆ ಈ ಅವಸ್ಥೆಯನ್ನು ಪಡೆದವನು ಆತ್ಮಸಾಕ್ಷಾತ್ಕಾರವನ್ನು ಪಡೆಯುತ್ತಾನೆ.

**ಶ್ಲೋಕ 56** ಈ ಶ್ಲೋಕದಲ್ಲಿ ಮೇಲೆಹೇಳಿದ ಸ್ಥಿತ ಪ್ರಜ್ಞನ ಸರ್ವೋತ್ಕೃಷ್ಟವಾದ ನಾಲ್ಕನೇ ಅವಸ್ಥೆಗೆ ಹಿಂದಿನ ಅವಸ್ಥೆ ಯಾವ ಮೂರನೇ ಅವಸ್ಥೆಯು ಹೇಳಲ್ಪಡುತ್ತದೆ "ದುಃಖದಲ್ಲಿ ಉದ್ವೇಗರಹಿತವಾದ ಮನಸ್ಸನ್ನು ಹೊಂದಿದವನಾಗಿ, ಸುಖದಲ್ಲಿ ಆಸೆಯಿಲ್ಲದವನಾಗಿ, ರಾಗಭಯ ಕ್ರೋಧ ರಹಿತನಾಗಿ, ಇರುವ ಮುನಿಯು ಸ್ಥಿರಬುದ್ಧಿಯುಳ್ಳವನೆಂದು ಕರೆಯಲ್ಪಡುತ್ತಾನೆ"

ಪ್ರಿಯ ವಸ್ತುವಿನ ವಿಯೋಗವೇ ಮೊದಲಾದ ದುಃಖಕ್ಕೆ ಕಾರಣಗಳು ಬಂದೊದಗಿದರೂ ದುಃಖವುಳ್ಳವನಾಗುವುದಿಲ್ಲ. ಪ್ರಿಯವಾದ ವಸ್ತುಗಳು ಪ್ರಾಪ್ತವಾದಾಗಲೂ ಕೂಡ ಅವುಗಳಲ್ಲಿ ಆಸೆಯಿಲ್ಲದವನಾಗಿರುತ್ತಾನೆ. ರಾಗ, ಭಯ ಕ್ರೋಧರಹಿತ ನಾಗಿರುತ್ತಾನೆ ಅಂದರೆ—ಪ್ರಾಪ್ತವಾಗದೇ ಇರುವ ವಸ್ತುವಿನಲ್ಲಿ ವಿಶೇಷವಾಗಿ ಆಸೆಹೊಂದಿರುವಿಕೆಯೇ ರಾಗವು, ಅಂತಹ ರಾಗ ವಿಲ್ಲದವನಾಗಿರುತ್ತಾನೆ ಪ್ರಿಯವಸ್ತುವಿನ ಅಗಲಿಕೆ ಮತ್ತು ಅಪ್ರಿಯ ವಸ್ತುವಿನ ಪ್ರಾಪ್ತಿ ಉಂಟಾದೀತೆಂಬ ಜ್ಞಾನದಿಂದ ಬರುವ ದುಃಖವೇ ಭಯವು ಅಂತಹ ಭಯವಿಲ್ಲದವನಾಗಿರುತ್ತಾನೆ ಪ್ರಿಯವಸ್ತುಗಳ ಅಗಲಿಕೆಗೂ, ಅಪ್ರಿಯ ವಸ್ತುಗಳ ಪ್ರಾಪ್ತಿಗೂ ಕಾರಣರಾದ ಇತರ ಚೇತನರಿಗೆ ತಾನು ದುಃಖವನ್ನು ಉಂಟು ಮಾಡಬೇಕು ಎಂಬ ಮನೋವಿಕಾರವೇ ಕ್ರೋಧವು, ಅಂತಹ ಕ್ರೋಧವಿಲ್ಲದವನಾಗಿರುತ್ತಾನೆ ಹೀಗಿರುವ ಮುನಿಯು ಅಂದರೆ ಆತ್ಮವನ್ನು ಕುರಿತು ಮನನಮಾಡುತ್ತಿರುವವನು ಸ್ಥಿತಪ್ರಜ್ಞನೆಂದು

ಕರೆಯಲ್ಪಟ್ಟಿದ್ದಾನೆ ಇದೇ (ಏಕೇಂದ್ರಿಯಾವಸ್ಥೆ ಎಂಬ) ಮೂರನೇ ಅವಸ್ಥೆಯು

**ಶ್ಲೋಕ 57** ಈ ಶ್ಲೋಕದಲ್ಲಿ ಮೇಲಿನ ಶ್ಲೋಕದಲ್ಲಿ ಹೇಳಿದ ಸ್ಥಿತಪ್ರಜ್ಞನ ಮೂರನೇ ಅವಸ್ಥೆಯು ಹೇಳಲ್ಪಡುತ್ತದೆ

"ಯಾವ ಎಲ್ಲಾ ವಿಷಯಗಳಲ್ಲೂ ಸಂಗವಿಲ್ಲದವನಾಗಿ (ಉದಾಸೀನನಾಗಿ) ಆಯಾ ಶುಭಾಶುಭಗಳನ್ನು ಹೊಂದಿಯೂ ಅವುಗಳಲ್ಲಿ ಸಂತೋಷವಾಗಲಿ ದುಃಖವಾಗಲಿ ಹೊಂದದವನಾಗಿ ಇರುತ್ತಾನೆಯೋ ಅವನ ಬುದ್ಧಿಯು ಸ್ಥಿರವಾಗಿರುತ್ತದೆ"

ಯಾವನು ಸಮಸ್ತಪ್ರಿಯ ವಿಷಯಗಳಲ್ಲಿ ಉದಾಸೀನನಾಗಿರುತ್ತಾನೆಯೋ ಅಂದರೆ ತನಗೆ ಪ್ರಿಯವಾದದ್ದು ಲಭಿಸಿದರೂ ಅದರಲ್ಲಿ ಅಧಿಕ ಸ್ನೇಹವನ್ನಿಡುವುದಿಲ್ಲವೋ ಮತ್ತು ಪ್ರಿಯವಸ್ತುವನ್ನು ಹೊಂದುವ ಶುಭವು ತನಗೆ ಪ್ರಾಪ್ತವಾದಾಗ ಅದಕ್ಕಾಗಿ ಸಂತೋಷವನ್ನಾಗಲೀ, ಪ್ರಿಯವಸ್ತುವನ್ನು ಅಗಲುವ ಅಶುಭವು ತನಗೆ ಪ್ರಾಪ್ತವಾದಾಗ ಅದಕ್ಕಾಗಿ ದುಃಖವನ್ನಾಗಲಿ ಹೊಂದದೆ ಇರುವನೋ ಅವನೂ ಕೂಡ ಸ್ಥಿತಪ್ರಜ್ಞನಾಗುತ್ತಾನೆ ಇದೇ (ವ್ಯತಿರೇಕಾವಸ್ಥೆ ಎಂಬ) ಎರಡನೇ ಅವಸ್ಥೆಯು

**ಶ್ಲೋಕ 58** ಈ ಶ್ಲೋಕದಲ್ಲಿ ಮೇಲಿನ ಶ್ಲೋಕದಲ್ಲಿ ಹೇಳಿದ ಸ್ಥಿತಪ್ರಜ್ಞನ ಎರಡನೇ ಅವಸ್ಥೆಗೆ ಹಿಂದಿನ ಅವಸ್ಥೆಯು ಅಂದರೆ ಮೊದಲನೇ ಅವಸ್ಥೆಯು ಹೇಳಲ್ಪಡುತ್ತದೆ "ಹೇಗೆ ಆಮೆಯು ಎಲ್ಲಾ ಕಡೆಗಳಿಂದಲೂ ತನ್ನ ಅಂಗಗಳನ್ನು ಒಳಕ್ಕೆ ಎಳೆದು ಕೊಳ್ಳುತ್ತದೆಯೋ ಹಾಗೆ ಯಾವಾಗ ಇವನು ಎಲ್ಲಾ ಕಡೆಗಳಿಂದಲೂ ತನ್ನ ಇಂದ್ರಿಯಗಳನ್ನು ಇಂದ್ರಿಯಗಳ ವಿಷಯಗಳಿಂದ ಒಳಕ್ಕೆ ಎಳೆದುಕೊಳ್ಳುತ್ತಾನೆಯೋ ಆಗ ಇವನ ಪ್ರಜ್ಞೆಯು ಪ್ರತಿಷ್ಠಿತವಾಗುತ್ತದೆ (ಬುದ್ಧಿಯು ಸ್ಥಿರವಾಗುತ್ತದೆ.) ಯಾವಾಗ ತನ್ನ ಇಂದ್ರಿಯಗಳು ವಿಷಯಗಳನ್ನು ಸ್ಪರ್ಶಿಸಲು ಯತ್ನಿಸುತ್ತವೆಯೋ, ಆಗ ಕೂಡಲೆ ಕೂರ್ಮವು ತನ್ನ ಅಂಗಗಳನ್ನು ಒಳಕ್ಕೆ ಎಳೆದುಕೊಳ್ಳುವ ಹಾಗೆ ವಿಷಯಗಳಿಂದ ಎಲ್ಲಾ ಕಡೆಯಿಂದಲೂ ಇಂದ್ರಿಯಗಳನ್ನು ಹಿಂದಕ್ಕೆ ಎಳೆದುಕೊಂಡು, ಮನಸ್ಸನ್ನು ಜೀವಾತ್ಮನಲ್ಲಿ (ಅಂದರೆ ಆತ್ಮನ ದಿವ್ಯಸ್ವರೂಪವನ್ನು ಅನುಸಂಧಾನ ಮಾಡುವುದರಲ್ಲಿ) ನಿಲ್ಲಿಸುತ್ತಾನೆಯೋ ಅವನೂ ಕೂಡ ಸ್ಥಿತಪ್ರಜ್ಞನಾಗುತ್ತಾನೆ (ಮನಸ್ಸು ಇಂದ್ರಿಯಗಳನ್ನು ವಿಷಯದಲ್ಲಿ ಪ್ರವರ್ತಿಸುವಂತೆ ಪ್ರೇರೇಪಿಸುತ್ತದೆ ಆದ್ದರಿಂದ ಇಂದ್ರಿಯಗಳನ್ನು ವಿಷಯಗಳಲ್ಲಿ ಪ್ರವರ್ತಿಸದಂತೆ ತಡೆಯಬೇಕಾದರೆ ಅದನ್ನು ಪ್ರೇರಿಸುವ ಆ ಮನಸ್ಸನ್ನು ಆತ್ಮನ ದಿವ್ಯ ಸ್ವರೂಪ ಚಿಂತನದಲ್ಲಿ ನೆಲೆಸುವಂತೆ ಮಾಡಬೇಕು ಎಂದು ಅಭಿಪ್ರಾಯ) ಇದೇ ಸ್ಥಿತ ಪ್ರಜ್ಞತೆಯ ಯತಮಾನಾವಸ್ಥೆ ಎಂಬ, ಮೊದಲನೆಯ ಅವಸ್ಥೆಯು.

ಹೀಗೆ ನಾಲ್ಕು ಶ್ಲೋಕಗಳಿಂದ ಸ್ಥಿತಪ್ರಜ್ಞತೆ ಎಂಬ ಜ್ಞಾನ ನಿಷ್ಠೆಯ ನಾಲ್ಕು ಅವಸ್ಥೆಗಳು ಹೇಳಲ್ಪಟ್ಟಿವೆ. ಅವುಗಳ ಕ್ರಮವು ಮೇಲಿನ ಅವಸ್ಥೆಯಿಂದ ಕೆಳಗಿನ ಅವಸ್ಥೆಗಳಿಗೆ ಬರುವಂತೆ ಗೀತೆಯಲ್ಲಿ ವಿವರಿಸಿದೆ ಆದರೆ ಸಾಧಕನು ಅವುಗಳನ್ನು ಕೆಳಗಿನಿಂದ ಮೇಲಕ್ಕೆ ಹಂತಹಂತವಾಗಿ ಹತ್ತುವಂತೆ ತಿಳಿದುಕೊಂಡು ಅಭ್ಯಾಸ ಮಾಡಬೇಕು ಆಗ ಒಂದು ಅವಸ್ಥೆಯಿಂದ ಮತ್ತೊಂದು ಅವಸ್ಥೆ ಪ್ರಾಪ್ತವಾಗುತ್ತದೆ ಈ ನಾಲ್ಕು ಅವಸ್ಥೆಗಳನ್ನು ಕ್ರಮವಾಗಿ ಯತಮಾನಾವಸ್ಥೆ ವ್ಯತಿರೇಕಾವಸ್ಥೆ, ಏಕೇಂದ್ರಿಯಾವಸ್ಥೆ ಮತ್ತು ವಶೀಕಾರಾವಸ್ಥೆ ಎಂದು ಪಾತಂಜಲಿ ಯೋಗಸೂತ್ರದಲ್ಲಿ ಕರೆದಿದ್ದಾರೆ

(I) ಯತಮಾನಾವಸ್ಥೆ ಎಂಬ ಮೊದಲನೆಯ ಅವಸ್ಥೆ– ಸ್ಥಿತಪ್ರಜ್ಞತೆ ಎಂಬ ಜ್ಞಾನ ನಿಷ್ಠೆಯನ್ನು ಹೊಂದಲು ಅಪೇಕ್ಷಿಸುವವನು ಮೊದಲು ಇಂದ್ರಿಯಗಳನ್ನು ವಿಷಯಗಳಲ್ಲಿ ಪ್ರವರ್ತಿಸದಂತೆ ತಡೆಯಬೇಕು ಮತ್ತು ಇಂದ್ರಿಯಗಳನ್ನು ನಿಯಮಿಸುವ ಮನಸ್ಸನ್ನು ಆತ್ಮ ಚಿಂತನೆಯಲ್ಲಿ ನಲಿಗೊಳಿಸುವ ಪ್ರಯತ್ನ ಮಾಡಬೇಕು ಇದು 58 ನೇ ಶ್ಲೋಕದಲ್ಲಿ ವಿವರಿಸಲ್ಪಟ್ಟಿದೆ.

(II) ವ್ಯತಿರೇಕಾವಸ್ಥೆ ಎಂಬ ಎರಡನೆಯ ಅವಸ್ಥೆ ಬಾಹ್ಯೇಂದ್ರಿಯಗಳನ್ನು ಬಲಾತ್ಕಾರವಾಗಿ ನಿಗ್ರಹಿಸಿದರೂ, ಕಷ್ಟಸುಖಗಳು ಉಂಟಾದಾಗ ರಾಗದ್ವೇಷಾದಿಗಳಿಂದ ಕಲುಷಿತವಾದ ಮನಸ್ಸಿನಲ್ಲಿ ದುಃಖಸುಖಾದಿ ವಿಕಾರಗಳು ಉಂಟಾಗುತ್ತವೆ. ಆದರೆ ಅವುಗಳಿಗೆ ಆಸ್ಪದ ಕೊಡದ ಸುಖದುಃಖಾದಿಗಳನ್ನು ಉದಾಸೀನ ಭಾವನೆಯಿಂದ ನೋಡಬೇಕು ಅವಲ್ಲದರಲ್ಲೂ ಸಂಗವಿಲ್ಲದವನಾಗಿ ಸುಖದುಃಖಗಳು ಪ್ರಾಪ್ತವಾದ ಕಾಲದಲ್ಲಿ ಮನಸ್ಸಿನಲ್ಲಿ ಉಂಟಾಗುವ ರಾಗ ದ್ವೇಷಾದಿಗಳನ್ನು ಹೋಗಲಾಡಿಸಲು ಪ್ರಯತ್ನಿಸಬೇಕು, ಇದು 51 ನೇ ಶ್ಲೋಕದಲ್ಲಿ ವಿವರಿಸಲ್ಪಟ್ಟಿದೆ

(III) ಏಕೇಂದ್ರಿಯಾವಸ್ಥೆ ಎಂಬ ಮೂರನೇ ಅವಸ್ಥೆ– ರಾಗದ್ವೇಷಾದಿಗಳನ್ನು ಹೋಗಲಾಡಿಸಿದ ಮೇಲೆ ಬಾಹ್ಯೇಂದ್ರಿಯಗಳು ಚೆನ್ನಾಗಿ ಜಯಿಸಲ್ಪಡುತ್ತವೆ. ಆದರೆ ಮನಸ್ಸೆಂಬ ಅಂತರಿಂದ್ರಿಯವು ಅನಾದಿಕಾಲದಿಂದ ವಿಷಯಗಳನ್ನು ಅನುಭವಿಸಿರುವುದರ ಫಲವಾಗಿ ಅವುಗಳ ವಾಸನೆಗಳನ್ನು ಹೊಂದಿರುವುದರಿಂದ ಆತ್ಮಚಿಂತನೆಯಲ್ಲಿ ನೆಲೆಗೊಳ್ಳುವುದಿಲ್ಲ ಆದ್ದರಿಂದ ನಿರತಿಶಯ ಆನಂದ ಸ್ವರೂಪನಾದ ಆತ್ಮನನ್ನು ಪ್ರೀತಿಸುವಂತೆ ಮಾಡಲು ಮನಸ್ಸನ್ನು ಆತ್ಮಚಿಂತನೆಯಲ್ಲೇ ಮೇಲೆ ಮೇಲೆ ಪ್ರವರ್ತಿಸುವಂತೆ ಮಾಡಿ ಮನಸ್ಸಿನಲ್ಲಿರುವ ಇತರ ವಾಸನೆಗಳನು ಹೋಗಲಾಡಿಸಲು ಪ್ರಯತ್ನಿಸಬೇಕು ಕಷ್ಟದಲ್ಲಿ ಉದ್ವೇಗಗೊಳ್ಳದವನಾಗಿಯೂ ಸುಖದಲ್ಲಿ ಆಸೆಯಿಲ್ಲದವನಾಗಿಯೂ ಇರಬೇಕು. ಇಷ್ಟ ವಸ್ತುಗಳಲ್ಲಿ ಆಸೆಯಾಗಲೀ, ಇಷ್ಟವಿಯೋಗ ಅನಿಷ್ಟ ಪ್ರಾಪ್ತಿಯಾದೀತೆಂಬ ಭಯವಾಗಲೀ, ಇಷ್ಟವಿಯೋಗಕ್ಕೂ ಅನಿಷ್ಟಪ್ರಾಪ್ತಿಗೂ ಕಾರಣರಾದ ಚೇತನರ ಮೇಲೆ ಕೋಪವಾಗಲೀ ಹೊಂದಕೂಡದು. ಮತ್ತು ಆತ್ಮಸ್ವರೂಪವನ್ನು ಸರ್ವದಾ ಮನನ ಮಾಡುತ್ತಿರಬೇಕು. ಹೀಗೆ ಮನಸ್ಸೆಂಬ ಅಂತರಿಂದ್ರಿಯವನ್ನು ಜಯಿಸಲು ಪ್ರಯತ್ನಿಸುವ ಈ ಅವಸ್ಥೆಯೇ ಏಕೇಂದ್ರಿಯಾವಸ್ಥೆ ಎಂಬ ಮೂರನೆಯ ಅವಸ್ಥೆಯು. ಇದು 56 ನೇ ಶ್ಲೋಕದಲ್ಲಿ ವಿವರಿಸಲ್ಪಟ್ಟಿದೆ.

(IV) ವಶೀಕಾರಾವಸ್ಥೆ ಎಂಬ ನಾಲ್ಕನೇ ಅವಸ್ಥೆ — ಮನಸ್ಸಿನಲ್ಲಿ ಅನಾದಿ ಕಾಲದಿಂದಲೂ ಪ್ರಾಪ್ತವಾಗಿರುವ ಎಲ್ಲಾ ವಾಸನೆಗಳೂ ನಿಶ್ಶೇಷವಾಗಿ ಕಳೆದು ಹೋದ ಮೇಲೆ ಪರವು ವೈರಾಗ್ಯವು ಪ್ರಾಪ್ತವಾಗುತ್ತದೆ ಈ ಅವಸ್ಥೆಯನ್ನು ಪಡೆದ ಜ್ಞಾನಿಯು ಆತ್ಮ ಒಂದರಲ್ಲೇ ತನ್ನ ಮನಸ್ಸನ್ನು ನಿಲ್ಲಿಸಿ ಸಂತುಷ್ಟನಾಗಿರುತ್ತಾನೆ. ಅದಕ್ಕಿಂತ ಬೇರೆಯಾದ ಇತರ ಸಕಲ ಕಾಮಗಳನ್ನೂ ಸಂಪೂರ್ಣವಾಗಿ ತ್ಯಾಗ ಮಾಡುತ್ತಾನೆ ಎಲ್ಲಾ ಬಾಹ್ಯೇಂದ್ರಿಯಗಳನ್ನು ವಶಪಡಿಸಿಕೊಳ್ಳುವುದು ಮಾತ್ರವಲ್ಲದೆ, ಮನಸ್ಸನ್ನೂ ಜೀವಾತ್ಮ ಸ್ವರೂಪಾನು ಸಂಧಾನದಲ್ಲಿ ನೆಲೆಸುವಂತೆ ಮಾಡಿ ಆತ್ಮನಲ್ಲೇ ಮನಸ್ಸನ್ನು ವಶಪಡಿಸುತ್ತಾನೆ. ಇದೇ ವಶೀಕಾರಾವಸ್ಥೆ ಎಂಬ ನಾಲ್ಕನೇ ಅವಸ್ಥೆ. ಇದು 55 ನೇ ಶ್ಲೋಕದಲ್ಲಿ ವಿವರಿಸಲ್ಪಟ್ಟಿದೆ ಈ ಅವಸ್ಥೆಯನ್ನು ಪಡೆದವನು ಯೋಗವೆಂಬ ಆತ್ಮ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ.

ಅರ್ಜುನನು 54 ನೇ ಶ್ಲೋಕದಲ್ಲಿ ಕೇಳಿರುವ ನಾಲ್ಕು ಪ್ರಶ್ನೆಗಳ ಉತ್ತರವೂ "ಆತ್ಮನ್ಯೇವಾತ್ಮನಾತುಷ್ಟ" ಎಂಬ ಒಂದು ವಾಕ್ಯದಲ್ಲೇ ಅಡಗಿದೆ ಎನ್ನಬಹುದು. ಇತರ ಆಸೆಗಳನ್ನೆಲ್ಲಾ ತೊರೆದು ಕೇವಲ ಆತ್ಮಾನುಸಂಧಾನದಲ್ಲಿ ಸಂತುಷ್ಟನಾಗಿರುವಿಕೆಯೇ ಸ್ಥಿತ ಪ್ರಜ್ಞನ ಲಕ್ಷಣವು ಅವನು ಕಾಯೇನ ವಾಚಾ ಮನಸಾ ಆತ್ಮ ಸ್ವರೂಪ ಚಿಂತನೆಯನ್ನೇ ಮಾಡುತ್ತಿರುತ್ತಾನೆ. ಅಂದರೆ ಅವನು ಆತ್ಮ ಸ್ವರೂಪದ ವಿಷಯವನ್ನೇ ಮಾತಾಡುತ್ತಾನೆ ಆತ್ಮಾನುಸಂಧಾನವೇ ಅವನ ಮಾನಸಿಕ ವ್ಯಾಪಾರ ಮತ್ತು ಆತ್ಮ ಸ್ವರೂಪ ಸಾಕ್ಷಾತ್ಕಾರಕ್ಕೆ ಬೇಕಾದ ಪ್ರವೃತ್ತಿಯೇ ಅವನ ಕಾಯಿಕ ವ್ಯಾಪಾರವಾಗಿರುತ್ತದೆ.

## ಸ್ಥಿತಪ್ರಜ್ಞತೆಯನ್ನು ಹೊಂದುವುದು ಬಹಳ ಕಷ್ಟ

**(ಶ್ಲೋಕಗಳು 59-60)** ಮೇಲಿನ ನಾಲ್ಕು ಶ್ಲೋಕಗಳಲ್ಲಿ ಸ್ಥಿತಪ್ರಜ್ಞತೆಯ ಸ್ವರೂಪ ಮತ್ತು ಅವಸ್ಥಾ ಭೇದಗಳು ಹೇಳಲ್ಪಟ್ಟವು ಈಗ ಮುಂದಿನ ಎರಡು ಶ್ಲೋಕಗಳಿಂದ ಆ ಜ್ಞಾನ ನಿಷ್ಠೆಯನ್ನು ಹೊಂದುವುದು ಸುಲಭ ಸಾಧ್ಯವಲ್ಲವೆಂದು ಹೇಳುತ್ತಾರೆ

**ಶ್ಲೋಕ 59** "ವಿಷಯಗಳೆಂಬ ಆಹಾರವನ್ನು ಹೊಂದದಂತೆ ಇಂದ್ರಿಯಗಳನ್ನು ನಿಗ್ರಹಿಸಿದ ದೇಹಿಯ ವಿಷಯಾನುಭವಗಳು ಇಚ್ಛೆಯನ್ನು ಬಿಟ್ಟು ನಿವೃತ್ತಿಯಾಗುತ್ತವೆ (ಅಂದರೆ ಇಂದ್ರಿಯಗಳು ತಮಗೆ ಆಹಾರಗಳಾದ ವಿಷಯಾನುಭವಗಳನ್ನು ಹೊಂದದೆ ಇರುವುದರಿಂದ ವಿಷಯಾನುಭವಗಳು

ಮಾತ್ರ ನಿವೃತ್ತಿಯಾಗುತ್ತವೆ. ಆದರೆ ಅವುಗಳನ್ನು ಅನುಭವಿಸಬೇಕೆಂಬ ಆಸೆಯು ನಿವೃತ್ತಿಯಾಗುವುದಿಲ್ಲ) ಇವನಲ್ಲಿರುವ ಆಸೆಯೂ ಕೂಡ ಅವುಗಳಿಗಿಂತ ಶ್ರೇಷ್ಠನಾದ ಆತ್ಮನಸ್ವರೂಪವನ್ನು ಸಾಕ್ಷಾತ್ಕರಿಸಿದ ತಕ್ಷಣ ನಿವೃತ್ತಿಯಾಗುತ್ತದೆ."

ಇಲ್ಲಿ ನಿರಾಹಾರಸ್ಯ ಎಂಬುದಕ್ಕೆ ಆಹಾರವಿಲ್ಲದವನ ಎಂದು ಅರ್ಥವಲ್ಲ. ಇಂದ್ರಿಯಗಳಿಗೆ ಆಹಾರವು ಶಬ್ದಾದಿ ವಿಷಯಗಳು ಅಂತಹ ಆಹಾರಗಳನ್ನು ಅವುಗಳಿಗೆ ಹಾಕದೆ ಯಾವನು ಇಂದ್ರಿಯಗಳನ್ನು ನಿರಾಹಾರವನ್ನಾಗಿ ಮಾಡುವನೋ ಅಂದರೆ ವಿಷಯಗಳನ್ನು ಅನುಭವಿಸದಂತೆ ಇಂದ್ರಿಯಗಳನ್ನು ತಡೆದು ನಿಗ್ರಹಿಸುವನೋ ಅವನ ನಿವೃತ್ತಿಯಾದ ಆ ವಿಷಯಗಳು ಇಚ್ಛೆಯನ್ನು ಬಿಟ್ಟು ನಿವೃತ್ತಿಸುತ್ತವೆ. ರಸ ಎಂದರೆ ಆಸೆಯು (ರಾಗವು) ವಿಷಯಾನುಭವವು ಮಾತ್ರ ನಿವೃತ್ತಿಯಾಗುವುದೇ ವಿನಃ ಅದರಲ್ಲಿರುವ ಆಸೆಯ ನಿವೃತ್ತಿಯಾಗುವುದಿಲ್ಲ ಎಂದು ಅರ್ಥ. ಅವರ ವಿಷಯಗಳಿಗಿಂತಲೂ ಅತ್ಯಂತ ಶ್ರೇಷ್ಠನೂ ಅತಿಶಯ ಸುಖರೂಪನೂ ಆಗಿರುವ ಆತ್ಮನ ಸಾಕ್ಷಾತ್ಕಾರವುಂಟಾದರೆ ಈ ವಿಷಯರಾಗವೂ (ವಿಷಯಗಳಲ್ಲಿರುವ ಆಸೆಯೂ) ಸಂಪೂರ್ಣವಾಗಿ ನಾಶವಾಗುತ್ತದೆ.

**ಶ್ಲೋಕ 60** ಇಂದ್ರಿಯಗಳನ್ನು ಜಯಿಸುವುದು ಬಹಳ ಕಷ್ಟ ಎಂದು ಈ ಶ್ಲೋಕದಲ್ಲಿ ಹೇಳಿದ್ದಾರೆ

"ಎಲೈ ಕುಂತಿಪುತ್ರನೇ! (ಆತ್ಮದರ್ಶನಕ್ಕಾಗಿ) ಪ್ರಯತ್ನ ಮಾಡುತ್ತಿರುವ ವಿವೇಕಿಯಾದ ಪುರುಷನ ಮನಸ್ಸನ್ನೂ ಕೂಡ ಪ್ರಬಲವಾದ ಇಂದ್ರಿಯಗಳು ಬಲ ಪೂರ್ವಕವಾಗಿ ಎಳೆದುಕೊಳ್ಳುತ್ತವೆ"

ಆತ್ಮದರ್ಶನವಿಲ್ಲವೆ ವಿಷಯಗಳಲ್ಲಿರುವ ಆಸೆಯು ಹೋಗುವುದಿಲ್ಲ. ಹೀಗೆ ವಿಷಯರಾಗವು ನಿವೃತ್ತಿಯಾಗದೇ ಇರುವುದರಿಂದ ಇಂದ್ರಿಯಗಳನ್ನು ಜಯಿಸಲು ಪ್ರಯತ್ನಿಸುವ ವಿವೇಕಶಾಲಿಯಾದ ಪುರುಷನ ಪ್ರಬಲವಾದ ಇಂದ್ರಿಯಗಳು ಅವನ ಮನಸ್ಸನ್ನು ಬಲಾತ್ಕಾರವಾಗಿ ಅಪಹರಿಸುತ್ತವೆ (ಅಂದರೇನು, ಇಂದ್ರಿಯಗಳನ್ನು ಜಯಿಸಬೇಕಾದರೆ ವಿಷಯಗಳಲ್ಲಿರುವ ಆಸೆಯು ಹೋಗಬೇಕೆಂದೂ, ಅದು ಹೋಗಬೇಕಾದರೆ ಆತ್ಮದರ್ಶನವಾಗ ಬೇಕೆಂದೂ ಹೇಳಿದ ಹಾಗೆ ಆಯಿತು) ಹೀಗೆ ಇಂದ್ರಿಯ ಜಯವು ಆತ್ಮದರ್ಶನಾಧೀನವಾಗಿಯೂ ಆತ್ಮದರ್ಶನವು ಇಂದ್ರಿಯ ಜಯಾಧೀನವಾಗಿಯೂ ಇರುವುದರಿಂದ (ಅಂದರೆ ''ಇಂದ್ರಿಯ ಜಯವೂ ಆತ್ಮ ದರ್ಶನವೂ ಅನ್ಯೋನ್ಯಾಶ್ರಯ ದೋಷವನ್ನು ಹೊಂದಿ, ಇದು ಉಂಟಾದರೆ ಆದು ಉಂಟಾಗುತ್ತದೆ ಅದು ಉಂಟಾದರೆ ಇದು ಉಂಟಾಗುತ್ತದೆ ಎಂದು ಒಂದುಕೊಂಡು ಪರಸ್ಪರ ಕಾರ್ಯವಾಗಿಯೂ ಕಾರಣವಾಗಿಯೂ ಇರುವುದರಿಂದ) ಜ್ಞಾನನಿಷ್ಠೆಯು ಪ್ರಾಪ್ತವಾಗವುದು ಬಹಳ ಕಷ್ಟ. ಅದು ದುಸ್ಸಾಧ್ಯವೆಂದೇ ಹೇಳಬೇಕು

**ಸ್ಥಿತ ಪ್ರಜ್ಞತೆಯನ್ನು ಪಡೆಯಲು ಪರಮಾತ್ಮ ವಿಷಯ ಚಿಂತನೆಯೇ ಉಪಾಯ**

**ಶ್ಲೋಕ 61** ಮೇಲೆ ದುಷ್ಪ್ರಾಪ್ಯವೆಂದು ಹೇಳಿದ ಸ್ಥಿತಪ್ರಜ್ಞತೆಯನ್ನು ಪಡೆಯಲು ಒಂದು ಉಪಾಯವನ್ನು ಈ ಶ್ಲೋಕದಲ್ಲಿ ತಿಳಿಸಿದ್ದಾರೆ.

"ಅವುಗಳೆಲ್ಲವನ್ನೂ ನಿಗ್ರಹಿಸಿ (ಆ ಎಲ್ಲಾ ಇಂದ್ರಿಯಗಳನ್ನೂ ವಿಷಯಗಳಲ್ಲಿ ಪ್ರವರ್ತಿಸದಂತೆ ತಡೆದು) ನನ್ನಲ್ಲಿ ಆಸಕ್ತವಾದ ಮನಸ್ಸನ್ನು ಹೊಂದಿದವನಾಗಿಯೂ ಚಿತ್ತ ಸಮಾಧಾನವುಳ್ಳವನಾಗಿಯೂ ಇರತಕ್ಕದ್ದು ಯಾರಿಗೆ (ಮನಸ್ಸು ಮುಂತಾಗಿ) ಸಮಸ್ತ ಇಂದ್ರಿಯಗಳೂ ವಶದಲ್ಲಿ ಇರುತ್ತವೆಯೋ ಅವನ ಬುದ್ಧಿಯು ಸ್ಥಿರವಾಗಿರುತ್ತದೆ."

ಮೇಲೆ ಹೇಳಿದಂತೆ ಆತ್ಮದರ್ಶನ ಮತ್ತು ಇಂದ್ರಿಯಜಯಗಳ ಅನ್ಯೋನ್ಯಾಶ್ರಯ ದೋಷವನ್ನು ಹೋಗಲಾಡಿಸಿಕೊಳ್ಳಬೇಕಾದರೆ ವಿಷಯಗಳಲ್ಲಿ ಆಸಕ್ತಿಯನ್ನು ಹೊಂದಿರುವ ಕಾರಣದಿಂದ ಜಯಿಸಲು ಅಸಾಧ್ಯವಾದ ಇಂದ್ರಿಯಗಳನ್ನು ನಿಗ್ರಹಿಸಬೇಕು ಮತ್ತು ಮನಸ್ಸಿಗೆ ಶುಭಾಶ್ರಯ ಭೂತನಾದ ನನ್ನಲ್ಲಿ (ಅಂದರೆ ಪಾಪನಿವಾರಕನೂ, ಧ್ಯಾನ ವಿಷಯತ್ವವುಳ್ಳವನೂ, ದಿವ್ಯಮಂಗಳವಿಗ್ರಹಯುಕ್ತನೂ ಆಗಿರುವುದರಿಂದ ಮನಸ್ಸಿಗೆ ಶುಭಾಶ್ರಯ ಭೂತನಾದ ಪರಮಾತ್ಮನಲ್ಲಿ) ನಿನ್ನ ಮನಸ್ಸನ್ನು ನಿಲ್ಲಿಸಬೇಕು ಮತ್ತು ಸಮಾಧಾನವುಳ್ಳವನಾಗಿ ಇರಬೇಕು. ಹೀಗೆ ಮನಸ್ಸು ನನ್ನ (ಪರಮಾತ್ಮನ) ವಿಷಯ ಚಿಂತನದಲ್ಲಿ ತೊಡಗಿದರೆ ಸಮಸ್ತ ಪಾಪಗಳೂ ಭಸ್ಮವಾಗಿ ಹೋಗುತ್ತವೆ ಮತ್ತು (ರಜಸ್ತಮೋಗುಣಗಳೆಲ್ಲಾ ನಾಶವಾಗಿ) ಮನಸ್ಸು ನಿರ್ಮಲವಾಗುತ್ತವೆ. ಇವರ ಫಲವಾಗಿ ಮನಸ್ಸಿನಲ್ಲಿ ವಿಷಯಗಳ ಮೇಲಿರುವ ಆಸಕ್ತಿಯು ಹೋಗುತ್ತದೆ ಆಗ ವಿಷಯರಾಗ ರಹಿತವಾದ ಮನಸ್ಸು ಇಂದ್ರಿಯಗಳನ್ನು ತನ್ನ ವಶಮಾಡಿಕೊಳ್ಳುವ ಶಕ್ತಿಯನ್ನು ಪಡೆಯುತ್ತದೆ ಹೀಗೆ ಮನಸ್ಸು ಇಂದ್ರಿಯಗಳನ್ನು ವಶಪಡಿಸಿಕೊಂಡ ನಂತರ ಅದು ಆತ್ಮದರ್ಶನ ಪಡೆಯುವ ಸಾಮರ್ಥ್ಯವನ್ನು ಹೊಂದುತ್ತದೆ ಮತ್ತು ಆತ್ಮ

ಸಾಕ್ಷಾತ್ಕಾರವು ಸಿದ್ಧಿಸುತ್ತದೆ " ಹೇಗೆ ದೀಪ್ತಜ್ವಾಲೆಯುಳ್ಳ ಅಗ್ನಿಯು ವಾಯುವಿನೊಂದಿಗೆ ಸೇರಿ ಒಣಗಿದ ಸೌದೆಯನ್ನು ದಹಿಸುತ್ತದೆಯೋ ಹಾಗೆ ಧ್ಯಾನಿಸುವವರ ಮನಸ್ಸಿನಲ್ಲಿರುವ ವಿಷ್ಣುವು ಅವರ ಸಕಲ ಪಾಪವನ್ನೂ ದಹಿಸುತ್ತಾನೆ ಎಂದು ಹೇಳಿರುವ ಅಭಿಪ್ರಾಯವನ್ನೇ ಈ ಶ್ಲೋಕದಲ್ಲಿ ತಿಳಿಸಿದ್ದಾರೆ

ಈ ಶ್ಲೋಕದಲ್ಲಿ ಇಂದ್ರಿಯ ನಿಗ್ರಹವೂ, ಆತ್ಮದರ್ಶನವೂ ಎರಡೂ ಒಂದಕ್ಕೊಂದು ಪರಸ್ಪರಾಧೀನಗಳಾಗಿ ದುರ್ಲಭವಾಗಿದ್ದಾಗ್ಯೂ ಪರಮಾತ್ಮನಲ್ಲಿ ಸಕ್ತವಾದ ಮನಸ್ಸಿನಿಂದ ಅವೆರಡನ್ನೂ ಪಡೆಯಬಹುದು ಎಂದು ಉಪಪಾದಿಸಲ್ಪಟ್ಟಿದೆ, ಅಂದರೇನು ಪ್ರಬಲವಾದ ಇಂದ್ರಿಯಗಳನ್ನು ಜಯಿಸುವುದಕ್ಕೆ ಪರಮಾತ್ಮ ವಿಷಯ ಚಿಂತನದಲ್ಲಿ ಮನಸ್ಸನ್ನು ನಿಲ್ಲಿಸುವುದೇ ಉಪಾಯವೆಂದು ಪ್ರತಿಪಾದಿಸಿದ್ದಾರೆ

**ಪರಮಾತ್ಮನಲ್ಲಿ ಮನಸ್ಸನ್ನು ಇಡದವರಿಗೆ ಪರಂಪರೆಯಾ ಪ್ರಾಪ್ತವಾಗುವ ಅನರ್ಥಗಳು ಮತ್ತು ಪರಮಾತ್ಮನಲ್ಲಿ ಮನಸ್ಸನ್ನು ಇಡುವವರಿಗೆ ಉಂಟಾಗುವ ಶ್ರೇಯಸ್ಸುಗಳು (ಶ್ಲೋಕಗಳು 62 ರಿಂದ 72)**

**ಶ್ಲೋಕ 62 ಮತ್ತು 63**

ಮೇಲೆ ವಿವರಿಸಿದ ರೀತಿಯಲ್ಲಿ ಮನಸ್ಸನ್ನು ಪರಮಾತ್ಮನಲ್ಲಿ ಇಡದೆ ತನ್ನ ಸ್ವಪ್ರಯತ್ನದಿಂದಲೇ ಇಂದ್ರಿಯಗಳನ್ನು ಜಯಿಸಲು ಪ್ರಯತ್ನಿಸುವವನು ಆತ್ಮನಾಶವನ್ನು ಹೊಂದುವನು ಎಂದು ಈ ಎರಡು ಶ್ಲೋಕಗಳಲ್ಲಿ ತಿಳಿಸಿದ್ದಾರೆ

" ವಿಷಯಗಳನ್ನೇ ಚಿಂತಿಸುತ್ತಿರುವ ಮನುಷ್ಯನಿಗೆ ಆಯಾ ವಿಷಯಗಳಲ್ಲಿ ಸಂಗವು (ಆಸಕ್ತಿಯು) ಉಂಟಾಗುತ್ತದೆ, ಸಂಗದಿಂದ ಕಾಮವು (ಅಂದರೆ ವಿಷಯಗಳನ್ನು ಅನುಭವಿಸಬೇಕೆಂಬ ಉತ್ಕಟವಾದ ಇಚ್ಛೆಯು) ಉತ್ಪನ್ನವಾಗುತ್ತದೆ, ಕಾಮದಿಂದ (ಆ ವಿಷಯಾನುಭವಕ್ಕೆ ಪ್ರತಿಬಂಧಕವುಂಟಾದರೆ) ಕೋಪವು ಉಂಟಾಗುತ್ತದೆ, ಕೋಪದಿಂದ (ಕೃತ್ಯಾಕೃತ್ಯ ವಿವೇಕವು ಹೋಗಿ) ವಿವೇಕ ಶೂನ್ಯತೆ ಉಂಟಾಗುತ್ತದೆ, ಈ ವಿವೇಕ ಶೂನ್ಯತೆಯಿಂದ ಜ್ಞಾಪಕ ಶಕ್ತಿಯು ನಾಶವಾಗುತ್ತದೆ (ತಾನು ಆತ್ಮನೆಂಬ ಜ್ಞಾನವು ಮರೆತು ಹೋಗುತ್ತದೆ), ಯಾವಾಗ ತಾನು ಆತ್ಮನೆಂಬ ಜ್ಞಾನವು ಮರೆತು ಹೋಯಿತೋ ಆಗ (ಆತ್ಮದರ್ಶನ ಮಾಡಬೇಕೆಂಬ) ಬುದ್ಧಿಯು ನಾಶವಾಗುತ್ತದೆ; ಈ ಬುದ್ಧಿ ನಾಶದಿಂದ ಮನುಷ್ಯನು ನಾಶವಾಗುತ್ತಾನೆ. (ಮತ್ತೆ ಸಂಸಾರ ಸಾಗರದಲ್ಲಿ ಬೀಳುತ್ತಾನೆ.

ಯಾರು ನನ್ನಲ್ಲಿ (ಪರಮಾತ್ಮನಲ್ಲಿ) ಮನಸ್ಸನ್ನು ಇಟ್ಟಿಲ್ಲವೋ ಅವನಿಗೆ ವಿಷಯಗಳಲ್ಲಿ ಆಸಕ್ತಿ ಹೋಗುವುದಿಲ್ಲ ಅವನು ಇಂದ್ರಿಯಗಳನ್ನು ವಿಷಯಗಳಿಂದ ನಿಗ್ರಹಿಸಿರುವವನಾಗಿದ್ದಾಗ್ಯೂ ಅವನಿಗೆ ಅನವಧಿಕ ಪಾಪವಾಸನೆಗಳಿಂದ ವಿಷಯಗಳ ಚಿಂತನೆಯು ಅನಿವಾರ್ಯವಾಗಿ ಉಂಟಾಗುತ್ತದೆ (ಅಂದರೆ ಪರಮಾತ್ಮನಲ್ಲಿ ಮನಸ್ಸನ್ನಿಟ್ಟರೆ ಅನಾದಿ ಪಾಪವಾಸನೆಗಳು ತೊಲಗಿ ವಿಷಯಾನುರಾಗವೂ ನಾಶವಾಗುತ್ತದೆ ಇಲ್ಲದಿದ್ದರೆ ವಿಷಯ ಚಿಂತನೆ ಅನಿವಾರ್ಯವಾದ ಮೇಲೆ ಅವನು ಸರ್ವದಾ ವಿಷಯಗಳನ್ನು ಕುರಿತು ಚಿಂತಿಸುತ್ತಿರುತ್ತಾನೆ. ಇದರಿಂದ ಅವನಿಗೆ ವಿಷಯಗಳಲ್ಲಿ ಸಂಗವು ಅಂದರೆ ಮಾನಸಿಕ ಸಂಬಂಧವು ಉಂಟಾಗಿ, ಅವರಲ್ಲಿ ಆಸಕ್ತಿಯು ಹೆಚ್ಚು ಹೆಚ್ಚಾಗಿ ಅಭಿವೃದ್ಧಿಯಾಗುತ್ತದೆ ಇದರಿಂದ ಕಾಮವು ಉತ್ಪನ್ನವಾಗುತ್ತದೆ. ಕಾಮವೆಂಬುದು ಸಂಗದ ಪರಿಪಕ್ವವಾದ ಅವಸ್ಥೆ. ಅಂದರೆ ಯಾವ ಅವಸ್ಥೆಯನ್ನು ಹೊಂದಿದ ಮೇಲೆ ಪುರುಷನು ವಿಷಯಗಳನ್ನು ಅನುಭವಿಸದೇ ಇರಲು ಶಕ್ತನಾಗುವುದಿಲ್ಲವೋ ಆ ಅವಸ್ಥೆಯೇ ಕಾಮವು (ಅಂದರೆ ಅಪೇಕ್ಷಿತವಾದುದನ್ನು ಹೇಗಾದರೂ ಅನುಭವಿಸಿಯೇ ತೀರಬೇಕೆಂಬ ಉತ್ಕಟವಾದ ಇಚ್ಛೆಯಿರುವ ಸ್ಥಿತಿಯೇ ಕಾಮವು) ಕಾಮದಿಂದ ಕ್ರೋಧವು ಉತ್ಪನ್ನವಾಗುತ್ತದೆ. ಅದು ಹೇಗೆಂದರೆ ವಿಷಯವನ್ನು ಅನುಭವಿಸಬೇಕೆಂಬ ಉತ್ಕಟವಾದ ಇಚ್ಛೆಯು ಇದ್ದು ಅದಕ್ಕೆ ಬೇಕಾದ ವಿಷಯವು (ಭೋಗ್ಯ ವಸ್ತುವು) ಮಾತ್ರ ಲಭಿಸದೇ ಇದ್ದರೆ ಸಮೀಪದಲ್ಲಿರುವ ಪುರುಷರನ್ನು ಕುರಿತು ಇವರಿಂದ ನಮ್ಮ ಮನೋರಥವು ಸಿದ್ಧಿಸಲಿಲ್ಲ ಎಂದು ಕೋಪವು ಉಂಟಾಗುತ್ತದೆ ಅಂದರೇನು ಕೋಪಿಷ್ಟನಾದವನು ವಿವೇಕರಹಿತನಾಗಿ ಹತ್ತಿರ ಇರುವವರ ಮೇಲೆಲ್ಲಾ ಕೋಪಗೊಳ್ಳುವನು ಎಂದು ಅಭಿಪ್ರಾಯ) ಕ್ರೋಧದಿಂದ ಸಂಮೋಹವು ಉಂಟಾಗುತ್ತದೆ. ಸಂಮೋಹವೆಂದರೆ ಕೃತ್ಯಾಕೃತ್ಯ ವಿವೇಕ ಶೂನ್ಯತೆಯು ಅಂದರೆ ಇದು ಮಾಡತಕ್ಕದ್ದು ಇದುಮಾಡತಕ್ಕದ್ದಲ್ಲವೆಂಬ ವಿವೇಕ ಜ್ಞಾನರಹಿತನಾಗಿ ಮೋಹಹೊಂದಿರುವಿಕೆ ಇದರಿಂದ ಅವನು ಎಲ್ಲವನ್ನೂ ಮಾಡಲು ಪ್ರವರ್ತಿಸುವನು ಸಂಮೋಹದಿಂದ ಸ್ಮೃತಿಭ್ರಂಶ ಉಂಟಾಗುತ್ತದೆ. ಅಂದರೆ ತಾನು ಮೊದಲು ಪ್ರಾರಂಭಿಸಿದ ಇಂದ್ರಿಯ ಜಯಾದಿ ಪ್ರಯತ್ನಗಳನ್ನೆಲ್ಲಾ ಮರೆತು ಬಿಡುತ್ತಾನೆ ಇದೇ ಸ್ಮೃತಿ ಭ್ರಂಶವು. ಇದರಿಂದ ಅವನ ಬುದ್ಧಿಯು ನಾಶವಾಗುತ್ತದೆ. ಅಂದರೆ ಆತ್ಮಸ್ವರೂಪ ಜ್ಞಾನದಲ್ಲಿ ಯಾವನಿಶ್ಚಯ ಬುದ್ಧಿಪಡೆದಿದ್ದನೋ ಅದುನಾಶವಾಗುತ್ತದೆ. ಬುದ್ಧಿ ನಾಶದಿಂದ ಅವನು ನಾಶವಾಗುತ್ತಾನೆ. ಆತ್ಮಸ್ವರೂಪ

ನಿಷ್ಠೆಯು ಪೂರ್ವಕ ಜ್ಞಾನವು ನಾಶವಾದ ಮೇಲೆ ಮನುಷ್ಯನು ಮತ್ತೆ ಸಂಸಾರದಲ್ಲೇ ಮುಳುಗಿ ನಷ್ಟವಾಗುತ್ತಾನೆ

**ಶ್ಲೋಕ 64**—ಈ ಶ್ಲೋಕದಲ್ಲೂ ಮುಂದಿನ ಶ್ಲೋಕ ದಲ್ಲೂ ಪರಮಾತ್ಮನಲ್ಲೇ ಮನಸ್ಸನ್ನು ಇಡುವವರಿಗೆ ಉಂಟಾಗುವ ಶ್ರೇಯಸ್ಸನ್ನು ತಿಳಿಸಿದ್ದಾರೆ

“(ಪರಮಾತ್ಮನಲ್ಲಿ ಮನಸಿಟ್ಟು) ರಾಗದ್ವೇಷಾದಿಗಳನ್ನು ಹೋಗಲಾಡಿಸಿಕೊಂಡವನಾಗಿ, ತನಗೆ ಅಧೀನವಾದ ಇಂದ್ರಿಯ ಗಳ ಮೂಲಕ ವಿಷಯಗಳ ಮಧ್ಯೆ ಚರಿಸುತ್ತಾ (ಅಂದರೆ ಅವುಗಳಲ್ಲಿ ಆಸಕ್ತಿ ಹೊಂದದೆ ಉದಾಸೀನನಾಗಿ ಇರುತ್ತಾ) ಮನಸ್ಸನ್ನು ತನಗೆ ವಿಧೇಯವಾಗಿ ಮಾಡಿಕೊಂಡಿರುವವನು ಮನಸ್ಸಿನ ಶಾಂತತೆಯನ್ನು ಹೊಂದುವನು ”

ಯಾರು ಮೇಲೆ ಹೇಳಿದ ರೀತಿಯಲ್ಲಿ ಮನಸ್ಸಿಗೆ ಶುಭಾ ಶ್ರಯ ರೂಪನಾದ ಸರ್ವೇಶ್ವರನಾದ ನನ್ನಲ್ಲಿ ಮನಸ್ಸನ್ನು ಇಡುತ್ತಾನೆಯೋ, ಆ ಪುರುಷನ ಸಮಸ್ತ ಪಾಪಗಳೂ ಸಂಪೂರ್ಣ ವಾಗಿ ಭಸ್ಮವಾಗುವುದರಿಂದ ರಾಗದ್ವೇಷ ರಹಿತನಾಗಿ, ತನ್ನವಶ ದಲ್ಲಿರುವ ಇಂದ್ರಿಯಗಳ ಮೂಲಕ ವಿಷಯದಲ್ಲಿ ಉದಾಸೀನತೆ ಯಿಂದ (ತಿರಸ್ಕಾರಭಾವದಿಂದ) ಪ್ರವರ್ತಿಸುತ್ತಾನೆ. ಮನಸ್ಸನ್ನು ವಶಪಡಿಸಿಕೊಂಡಿರುವ ಆ ಪುರುಷನು ಮನಶ್ಶಾಂತಿ ಹೊಂದು ವನು. ಅಂದರೆ ನಿರ್ಮಲಾಂತಃಕರಣನಾಗುತ್ತಾನೆ ಎಂದು ಅರ್ಥ. ಅವನ ಅಂತಃಕರಣವು ಕಶ್ಮಲ ರಹಿತವಾಗಿ ನಿರ್ಮಲವಾಗಿರುತ್ತದೆ

**ಶ್ಲೋಕ 65**—“ಮನಸ್ಸಿನ ಶಾಂತತೆಯಿಂದ (ಅಂತಃ ಕರಣ ನಿರ್ಮಲತೆಯಿಂದ) ಇವನ ಸಮಸ್ತ ದುಃಖಗಳೂ ನಾಶ ವಾಗುತ್ತವೆ। ಪ್ರಸನ್ನ ಚಿತ್ತನಾದ ಪುರುಷನ ಬುದ್ಧಿಯು ಶೀಘ್ರದಲ್ಲೇ ಸ್ಥಿರವಾಗುತ್ತದೆ. ”

ಮನಶ್ಶಾಂತಿ ಉಂಟಾದವನಿಗೆ ಆತ್ಮದರ್ಶನವೂ ಸರ್ವದುಃಖ ವಿಮೋಚನೆಯೂ ಉಂಟಾಗುತ್ತದೆ ಎಂದು ಈ ಶ್ಲೋಕದಲ್ಲಿ ಹೇಳಿದ್ದಾರೆ ಮನಸ್ಸು ನಿರ್ಮಲವಾಗಿರುವುದರಿಂದ ಅಂದರೆ ಆತ್ಮಾವಲೋಕನಕ್ಕೆ ವಿರೋಧಿಗಳಾದ ದೋಷಗಳಿಂದ ರಹಿತವಾದ ಮನಸ್ಸನ್ನು ಪಡೆದಿರುವುದರಿಂದ, ಈ ಪುರುಷ ನಿಗೆ ಒಡನೆಯೇ ಪ್ರಕೃತಿ ಸಂಸರ್ಗ ರಹಿತ ಆತ್ಮ ವಿಷಯಕವಾದಬುದ್ಧಿಯು (ಅಂದರೆ ಆತ್ಮನು ಪ್ರಕೃತಿಗಿಂತ ವಿಲಕ್ಷಣವಾದ ಸ್ವರೂಪವುಳ್ಳವನೆಂಬ ಬುದ್ಧಿಯು) ಚೆನ್ನಾಗಿ ವಿಕಸಿತವಾಗುತ್ತದೆ ಆದ್ದರಿಂದ ಮನಃ ಪ್ರಸಾದತೆಯಿಂದ (ಮನಸ್ಸು ನಿರ್ಮಲವಾಗುವುದರಿಂದ) ಪ್ರಕೃತಿ ಸಂಬಂಧದಿಂದ ಉಂಟಾಗುವ ಸಮಸ್ತದುಃಖಗಳೂ ನಿಶ್ಶೇಷವಾಗಿ ನಾಶ ವಾಗುತ್ತವೆ (ಸಮಸ್ತದುಃಖಗಳೂ ಪ್ರಕೃತಿಗೆ ಸಂಬಂಧ ಪಟ್ಟವು ಗಳೇ ವಿನ ಪ್ರಕೃತಿಗಿಂತ ವಿಲಕ್ಷಣನಾದ ಆತ್ಮನಿಗೆ ಸಂಬಂಧಿಸಿ ದವುಗಳಲ್ಲವೆಂಬ ಅರಿವುಂಟಾಗುವುದರಿಂದ ಇವನ ಸಮಸ್ತ ದುಃಖಗಳೂ ನಾಶವಾಗುತ್ತವೆ ಎಂದು ಅರ್ಥ)

**ಶ್ಲೋಕ 66**—ಪರಮಾತ್ಮನಲ್ಲಿ ಮನಸ್ಸನ್ನಿಡದವನಿಗೆ ಮನಶ್ಶಾಂತಿಯೂ ಮೋಕ್ಷಸುಖವೂ ಲಭಿಸುವುದಿಲ್ಲ ಎಂದು ಈ ಶ್ಲೋಕದಲ್ಲಿ ಹೇಳಿದ್ದಾರೆ “ಪರಮಾತ್ಮನಲ್ಲಿ ಮನಸ್ಸನ್ನಿಡ ದವನಿಗೆ ಆತ್ಮವಿಷಯಕವಾದ ಬುದ್ಧಿಯು ಉಂಟಾಗುವುದಿಲ್ಲ ಪರಮಾತ್ಮನಲ್ಲಿ ಮನಸ್ಸನ್ನಿಡದವನಿಗೆ ಆತ್ಮದರ್ಶನವೂ ಸಿದ್ಧಿಸು ವುದಿಲ್ಲ. ಆತ್ಮದರ್ಶನವಿಲ್ಲದವನಿಗೆ ವಿಷಯರಾಗವು (ವಿಷಯ ಗಳ ಮೇಲಿನ ಆಸಕ್ತಿಯು) ಶಾಂತವಾಗುವುದಿಲ್ಲ ವಿಷಯ ರಾಗ ಹೊಂದಿ ಅಶಾಂತನಾಗಿರುವವನಿಗೆ ಸುಖವೆಲ್ಲಿಯದು (ಅಂದರೆ ಅವನಿಗೆ ಮೋಕ್ಷಸುಖವು ಇಲ್ಲನೇ ಇಲ್ಲವೆಂದು ಅಭಿಪ್ರಾಯ)”

“ಯುಕ್ತ ಆಸೀತ ಮತ್ಪರ” ಎಂದು 61 ನೇ ಶ್ಲೋಕ ದಲ್ಲಿ “ನನ್ನಲ್ಲಿ ಮನಸ್ಸನ್ನಿಡು” ಎಂದು ಹೇಳಿರುವುದರಿಂದ ಇಲ್ಲಿ “ಅಯು ಕ್ತಸ್ಯ” ಎಂಬುದಕ್ಕೆ ನನ್ನಲ್ಲಿ ಮನಸ್ಸನ್ನಿಡದವನಿಗೆ ಎಂದು ಅರ್ಥ ಮಾಡಿದ್ದಾರೆ ನನ್ನಲ್ಲಿ “ಪರಮಾತ್ಮನಲ್ಲಿ” ಮನಸ್ಸನ್ನಿಡದೆ ತಾನೇ ಸ್ವಪ್ರಯತ್ನದಿಂದ ಇಂದ್ರಿಯನಿಗ್ರಹದಲ್ಲಿ ಪ್ರವರ್ತಿಸಿ ದವನಿಗೆ ಎಂದಿಗೂ ಆತ್ಮನು ಪ್ರಕೃತಿಗಿಂತ ವಿಲಕ್ಷಣನು ಎಂಬ ವಿವೇಕ ಬುದ್ಧಿಯು ಸಿದ್ಧಿಸುವುದಿಲ್ಲ ಅದರ ಫಲವಾಗಿ ಅವನಿಗೆ ಆತ್ಮಸ್ವರೂಪ ಚಿಂತನೆಯೂ ಉಂಟಾಗುವುದಿಲ್ಲ ಪ್ರಕೃತಿ ವಿಯುಕ್ತನೂ ವಿಲಕ್ಷಣನೂ ಆದ ಆತ್ಮನ ಸ್ವರೂಪವನ್ನು ಚಿಂತಿ ಸದವನಿಗೆ ವಿಷಯರಾಗವೂ ಹೋಗುವುದಿಲ್ಲ ಮತ್ತು ಶಾಂತಿಯೂ ಉಂಟಾಗುವುದಿಲ್ಲ ವಿಷಯಗಳಲ್ಲಿ ಅತ್ಯಂತ ಆಸಕ್ತಿ ಹೊಂದಿ ಅಶಾಂತನಾಗಿರುವವನಿಗೆ ನಿತ್ಯವೂ ನಿರತಿಶಯವೂ ಆದ ಮೋಕ್ಷ ಸುಖದ ಪ್ರಾಪ್ತಿಯು ಎಲ್ಲಿಯದು? (ಪರಮಾತ್ಮನಲ್ಲಿ ಮನಸ್ಸಿಡ ದವನಿಗೆ ಆತ್ಮಸ್ವರೂಪ ಜ್ಞಾನ ಉಂಟಾಗುವುದಿಲ್ಲ. ಆತ್ಮಸ್ವರೂಪ ಜ್ಞಾನ ವಿಲ್ಲದವನಿಗೆ ಆತ್ಮಸ್ವರೂಪ ಚಿಂತನೆ ಉಂಟಾಗುವುದಿಲ್ಲ, ಆತ್ಮಸ್ವರೂಪ ಚಿಂತನೆ ಮಾಡದವನಿಗೆ ವಿಷಯರಾಗವು ಹೋಗು ವುದಿಲ್ಲ; ವಿಷಯರಾಗವುಹೋಗದೆ ಇಂದ್ರಿಯ ನಿಗ್ರಹ ಮಾಡಿ ದರೂ ಮನಶ್ಶಾಂತಿಯಿರುವುದಿಲ್ಲ , ಮನಶ್ಶಾಂತಿಯಿಲ್ಲದೆ ಅಶಾಂತ ನಾಗಿರುವವನಿಗೆ ಮೋಕ್ಷಸುಖವು ದುರ್ಲಭ ಎಂದು ಈ ಶ್ಲೋಕ ದಲ್ಲಿ ತಿಳಿಸಿದ್ದಾರೆ.]

(iii) ಏಕೇಂದ್ರಿಯಾವಸ್ಥೆ ಎಂಬ ಮೂರನೇ ಅವಸ್ಥೆ– ರಾಗದ್ವೇಷಾದಿಗಳನ್ನು ಹೋಗಲಾಡಿಸಿದ ಮೇಲೆ ಬಾಹ್ಯೇಂದ್ರಿಯಗಳು ಚೆನ್ನಾಗಿ ಜಯಿಸಲ್ಪಡುತ್ತವೆ. ಆದರೆ ಮನಸ್ಸೆಂಬ ಅಂತರಿಂದ್ರಿಯವು ಅನಾದಿಕಾಲದಿಂದ ವಿಷಯಗಳನ್ನು ಅನುಭವಿಸಿರುವುದರ ಫಲವಾಗಿ ಅವುಗಳ ವಾಸನೆಗಳನ್ನು ಹೊಂದಿರುವುದರಿಂದ ಆತ್ಮಚಿಂತನೆಯಲ್ಲಿ ನೆಲೆಗೊಳ್ಳುವುದಿಲ್ಲ ಆದ್ದರಿಂದ ನಿರತಿಶಯ ಆನಂದ ಸ್ವರೂಪನಾದ ಆತ್ಮನನ್ನು ಪ್ರೀತಿಸುವಂತೆ ಮಾಡಲು ಮನಸ್ಸನ್ನು ಆತ್ಮಚಿಂತನೆಯಲ್ಲೇ ಮೇಲೆ ಮೇಲೆ ಪ್ರವರ್ತಿಸುವಂತೆ ಮಾಡಿ ಮನಸ್ಸಿನಲ್ಲಿರುವ ಇತರ ವಾಸನೆಗಳನು ಹೋಗಲಾಡಿಸಲು ಪ್ರಯತ್ನಿಸಬೇಕು ಕಷ್ಟದಲ್ಲಿ ಉದ್ವೇಗಗೊಳ್ಳದವನಾಗಿಯೂ ಸುಖದಲ್ಲಿ ಆಸೆಯಿಲ್ಲದವನಾಗಿಯೂ ಇರಬೇಕು ಇಷ್ಟ ವಸ್ತುಗಳಲ್ಲಿ ಆಸೆಯಾಗಲೀ, ಇಷ್ಟವಿಯೋಗ ಅನಿಷ್ಟ ಪ್ರಾಪ್ತಿಯಾದೀತೆಂಬ ಭಯವಾಗಲೀ, ಇಷ್ಟವಿಯೋಗಕ್ಕೂ ಅನಿಷ್ಟಪ್ರಾಪ್ತಿಗೂ ಕಾರಣರಾದ ಚೇತನರ ಮೇಲೆ ಕೋಪವಾಗಲೀ ಹೊಂದಕೂಡದು ಮತ್ತು ಆತ್ಮಸ್ವರೂಪನ್ನು ಸರ್ವದಾ ಮನನ ಮಾಡುತ್ತಿರಬೇಕು. ಹೀಗೆ ಮನಸ್ಸೆಂಬ ಅಂತರಿಂದ್ರಿಯವನ್ನು ಜಯಿಸಲು ಪ್ರಯತ್ನಿಸುವ ಈ ಅವಸ್ಥೆಯೇ ಏಕೇಂದ್ರಿಯಾವಸ್ಥೆ ಎಂಬ ಮೂರನೆಯ ಅವಸ್ಥೆಯು. ಇದು 56 ನೇ ಶ್ಲೋಕದಲ್ಲಿ ವಿವರಿಸಲ್ಪಟ್ಟಿದೆ.

(iv) ವಶೀಕಾರಾವಸ್ಥೆ ಎಂಬ ನಾಲ್ಕನೇ ಅವಸ್ಥೆ :— ಮನಸ್ಸಿನಲ್ಲಿ ಅನಾದಿ ಕಾಲದಿಂದಲೂ ವ್ಯಾಪ್ತವಾಗಿರುವ ಎಲ್ಲಾ ವಾಸನೆಗಳೂ ನಿಶ್ಶೇಷವಾಗಿ ಕಳೆದು ಹೋದ ಮೇಲೆ ಪರವು ವೈರಾಗ್ಯವು ಪ್ರಾಪ್ತವಾಗುತ್ತವೆ ಈ ಅವಸ್ಥೆಯನ್ನು ಪಡೆದ ಜ್ಞಾನಿಯು ಆತ್ಮ ಒಂದರಲ್ಲೇ ತನ್ನ ಮನಸ್ಸನ್ನು ನಿಲ್ಲಿಸಿ ಸಂತುಷ್ಟನಾಗಿರುತ್ತಾನೆ. ಅದಕ್ಕಿಂತ ಬೇರೆಯಾದ ಇತರ ಸಕಲ ಕಾಮಗಳನ್ನೂ ಸಂಪೂರ್ಣವಾಗಿ ತ್ಯಾಗ ಮಾಡುತ್ತಾನೆ ಎಲ್ಲಾ ಬಾಹ್ಯೇಂದಿಯಗಳನ್ನು ವಶಪಡಿಸಿಕೊಳ್ಳುವುದು ಮಾತ್ರವಲ್ಲದೆ, ಮನಸ್ಸನ್ನೂ ಜೀವಾತ್ಮ ಸ್ವರೂಪಾನು ಸಂಧಾನದಲ್ಲಿ ನೆಲೆಸುವಂತೆ ಮಾಡಿ ಆತ್ಮನಲ್ಲೇ ಮನಸ್ಸನ್ನು ವಶಪಡಿಸುತ್ತಾನೆ. ಇದೇ ವಶೀಕಾರಾವಸ್ಥೆ ಎಂಬ ನಾಲ್ಕನೇ ಅವಸ್ಥೆ. ಇದು 55 ನೇ ಶ್ಲೋಕದಲ್ಲಿ ವಿವರಿಸಲ್ಪಟ್ಟಿದೆ ಈ ಅವಸ್ಥೆಯನ್ನು ಪಡೆದವನು ಯೋಗವೆಂಬ ಆತ್ಮ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ

ಅರ್ಜುನನು 54 ನೇ ಶ್ಲೋಕದಲ್ಲಿ ಕೇಳಿರುವ ನಾಲ್ಕು ಪ್ರಶ್ನೆಗಳ ಉತ್ತರವೂ "ಆತ್ಮನ್ಯೇವಾತ್ಮನಾತುಷ್ಟ" ಎಂಬ ಒಂದು ವಾಕ್ಯದಲ್ಲೇ ಅಡಗಿದೆ ಎನ್ನಬಹುದು. ಇತರ ಆಸೆಗಳನ್ನೆಲ್ಲಾ ತೊರೆದು ಕೇವಲ ಆತ್ಮಾನುಸಂಧಾನದಲ್ಲಿ ಸಂತುಷ್ಟನಾಗಿರುವಿಕೆಯೇ ಸ್ಥಿತ ಪ್ರಜ್ಞನ ಲಕ್ಷಣವು ಅವನು ಕಾಯೇನ ವಾಚಾ ಮನಸಾ ಆತ್ಮ ಸ್ವರೂಪ ಚಿಂತನೆಯನ್ನೇ ಮಾಡುತ್ತಿರುತ್ತಾನೆ. ಅಂದರೆ ಅವನು ಆತ್ಮ ಸ್ವರೂಪದ ವಿಷಯವನ್ನೇ ಮಾತಾಡುತ್ತಾನೆ ಆತ್ಮಾನುಸಂಧಾನವೇ ಅವನ ಮಾನಸಿಕ ವ್ಯಾಪಾರ ಮತ್ತು ಆತ್ಮ ಸ್ವರೂಪ ಸಾಕ್ಷಾತ್ಕಾರಕ್ಕೆ ಬೇಕಾದ ಪ್ರವೃತ್ತಿಯೇ ಅವನ ಕಾಯಿಕ ವ್ಯಾಪಾರವಾಗಿರುತ್ತದೆ.

## ಸ್ಥಿತಪ್ರಜ್ಞತೆಯನ್ನು ಹೊಂದುವುದು ಬಹಳ ಕಷ್ಟ

**(ಶ್ಲೋಕಗಳು 59-60)** ಮೇಲಿನ ನಾಲ್ಕು ಶ್ಲೋಕಗಳಲ್ಲಿ ಸ್ಥಿತಪ್ರಜ್ಞತೆಯ ಸ್ವರೂಪ ಮತ್ತು ಅವಸ್ಥಾ ಭೇದಗಳು ಹೇಳಲ್ಪಟ್ಟವು ಈಗ ಮುಂದಿನ ಎರಡು ಶ್ಲೋಕಗಳಿಂದ ಆ ಜ್ಞಾನ ನಿಷ್ಠೆಯನ್ನು ಹೊಂದುವುದು ಸುಲಭ ಸಾಧ್ಯವಲ್ಲವೆಂದು ಹೇಳುತ್ತಾರೆ

**ಶ್ಲೋಕ 59** "ವಿಷಯಗಳೆಂಬ ಆಹಾರವನ್ನು ಹೊಂದದಂತೆ ಇಂದ್ರಿಯಗಳನ್ನು ನಿಗ್ರಹಿಸಿದ ದೇಹಿಯ ವಿಷಯಾನುಭವಗಳು ಇಚ್ಛೆಯನ್ನು ಬಿಟ್ಟು ನಿವೃತ್ತಿಯಾಗುತ್ತವೆ (ಅಂದರೆ ಇಂದ್ರಿಯಗಳು ತಮಗೆ ಆಹಾರಗಳಾದ ವಿಷಯಾನುಭವಗಳನ್ನು ಹೊಂದದೆ ಇರುವುದರಿಂದ ವಿಷಯಾನುಭವಗಳು

**ಶ್ಲೋಕ 69** ಮೊದಲು ಸ್ಥಿತ ಪ್ರಜ್ಞನಿಗೂ ಇತರ ಸಾಮಾನ್ಯಮನುಷ್ಯರಿಗೂ ಇರುವ ವ್ಯತ್ಯಾಸವನ್ನು ಈ ಶ್ಲೋಕದಲ್ಲಿ ತಿಳಿಸುತ್ತಾರೆ

"ಯಾವ ಆತ್ಮವಿಷಯವಾದ ಜ್ಞಾನವು ಸಮಸ್ತ ಚೇತನರಿಗೂ ರಾತ್ರಿಯಂತೆ ಕತ್ತಲಾಗಿರುವುದೋ (ಪ್ರಕಾಶ ರಹಿತವಾಗಿರುವುದೋ) ಅಂತಹ ಆತ್ಮ ವಿಷಯದಲ್ಲಿ ಇಂದ್ರಿಯಗಳನ್ನು ಜಯಿಸಿರುವ ಜ್ಞಾನನಿಷ್ಠನು ಜಾಗೃದ್ದೆಶೆಯನ್ನು ಹೊಂದಿರುವನು (ಆತ್ಮ ವಿಷಯವಾದ ಜ್ಞಾನವು ಅವನಿಗೆ ಪ್ರಕಾಶವಾಗಿರುವುದು) ಯಾವ ಶಬ್ದಾದಿ ಭೋಗ ವಿಷಯಗಳ ಜ್ಞಾನದಲ್ಲಿ ಸಮಸ್ತ ಚೇತನರುಗಳೂ ಜಾಗೃದ್ದೆಶೆಯನ್ನು ಹೊಂದಿರುವರೋ ಆ ವಿಷಯಗಳ ಜ್ಞಾನವು ಆತ್ಮಸಾಕ್ಷಾತ್ಕಾರವುಳ್ಳ ಮತ್ತು ಅದನ್ನು ಮನನ ಮಾಡುವ ಜ್ಞಾನಯೋಗ ನಿಷ್ಠನಿಗೆ ರಾತ್ರಿಯಂತೆ ಕತ್ತಲೆಯಾಗಿ ಇರುತ್ತದೆ. (ಪ್ರಕಾಶ ರಹಿತವಾಗಿ ಇರುತ್ತದೆ.)

ಹಿಂದೆ "ಪ್ರಜಹಾತಿಯದಾಕಾಮಾನ್" ಎಂದು 55 ನೇ ಶ್ಲೋಕದಿಂದ ಆರಂಭಿಸಿ ನಾಲ್ಕು ಶ್ಲೋಕಗಳಲ್ಲಿ ಸ್ಥಿತ ಪ್ರಜ್ಞನ ನಾಲ್ಕು ಅವಸ್ಥೆಗಳನ್ನು ವಿವರಿಸಿದರು. ಈಗ ಮುಂದಿನ ನಾಲ್ಕು ಶ್ಲೋಕಗಳಿಂದ ಆ ನಾಲ್ಕು ಅವಸ್ಥೆಗಳಲ್ಲಿರುವವರಿಗೆ ಪ್ರಾಪ್ತವಾಗುವ ಫಲಗಳನ್ನು ಕ್ರಮವಾಗಿ ಹೇಳುತ್ತಾರೆ ಈಗ ಈ ಶ್ಲೋಕದಲ್ಲಿ ಮೊದಲು ಜ್ಞಾನಯೋಗ ನಿಷ್ಠನಿಗೂ ಇತರ ಸಾಮಾನ್ಯ ಜನರಿಗೂ ಇರುವ ವ್ಯತ್ಯಾಸವನ್ನು ಹೇಳಿದ್ದಾರೆ ಸಮಸ್ತ ಚೇತನರಿಗೂ ಆತ್ಮ ವಿಷಯವಾದ ಬುದ್ಧಿಯು ರಾತ್ರಿಯಂತೆ ಪ್ರಕಾಶರಹಿತವಾದುದಾಗಿರುತ್ತದೆ ಆದರೆ ಆಜೀವಾತ್ಮ ವಿಷಯವಾದ ಬುದ್ಧಿಯು ಇಂದ್ರಿಯಗಳನ್ನು ಜಯಿಸಿ ಪ್ರಸನ್ನ ಚಿತ್ತನಾಗಿ ಇರುವ ಸ್ಥಿತಪ್ರಜ್ಞನಲ್ಲಿ ಜಾಗೃತವಾಗಿರುತ್ತದೆ ಎಂದರೆ ಅವನು ಯಾವಾಗಲೂ ಆತ್ಮನನ್ನು ಸಾಕ್ಷಾತ್ಕಾರಿಸುತ್ತಾ ಇರುವನು ಸಮಸ್ತ ಚೇತನರೂ ಶಬ್ದಾದಿ ವಿಷಯಗಳನ್ನು ಕುರಿತಬುದ್ಧಿಯಲ್ಲಿ ಜಾಗೃತರಾಗಿ ಇರುವರು ಅಂದರೆ ಅವರಲ್ಲಿ (ನಿದ್ರೆಯಿಲ್ಲದೆ) ಎಚ್ಚರದಿಂದ ಇರುವರು ಆದರೆ ಆತ್ಮ ಸಾಕ್ಷಾತ್ಕಾರ ಮಾಡುತ್ತಿರುವ ಮನನ ಶೀಲನಾದವನಿಗೆ ಆ ಶಬ್ದಾದಿ ವಿಷಯಗಳನ್ನು ಕುರಿತ ಬುದ್ಧಿಯು ರಾತ್ರಿಯಂತೆ (ಕತ್ತಲೆಯಂತೆ) ಪ್ರಕಾಶರಹಿತ ವಾಗಿರುತ್ತದೆ. (ಅಂದರೆ ರಾತ್ರಿಯಕಾಲದಲ್ಲಿ ನಿದ್ರಾ ಪರವಶನಾದವನಿಗೆ ಇತರ ವಿಷಯಗಳು ಹೇಗೆ ಗೋಚರವಾಗುವುದಿಲ್ಲವೋ ಹಾಗೆ ಆತ್ಮಜ್ಞಾನವುಳ್ಳವನಿಗೆ ಇತರ ಶಬ್ದಾದಿ ವಿಷಯಗಳು ಗೋಚರವಾಗುವುದಿಲ್ಲವೆಂದು ಅರ್ಥ).

ಈ ಶ್ಲೋಕದಲ್ಲಿ ಜಿತೇಂದ್ರಿಯನಿಗೆ ಆತ್ಮಾವಲೋಕನ ಸಿದ್ಧಿ ಉಂಟಾಗುವ ಸ್ಥಿತ ಪ್ರಜ್ಞತೆಯು ಅತ್ಯಂತ ಉತ್ಕೃಷ್ಟವಾದ ಫಲವನ್ನು ಹೇಳಿದ್ದಾರೆ. ಇದೇ ಅತ್ಯಂತ ಉತ್ಕೃಷ್ಟವಾದ ಅವಸ್ಥೆ ಇಲ್ಲಿ ಇಂದ್ರಿಯಗಳಿಗೆ ವಿಷಯ ಗೋಚರತೆಯೇ ಇಲ್ಲದೆ ಶಬ್ದಾದಿ ವಿಷಯ ಜ್ಞಾನವು ರಾತ್ರಿಯ ಹಾಗೆ ಪ್ರಕಾಶ ರಹಿತವಾಗಿರುತ್ತದೆ

**ಶ್ಲೋಕ 70**—ಶಬ್ದಾದಿ ವಿಷಯಗಳ ಮಧ್ಯದಲ್ಲಿದ್ದರೂ ಕೂಡ ಸ್ಥಿತ ಪ್ರಜ್ಞನ ಮನಸ್ಸು ವಿಕಾರವನ್ನು ಹೊಂದುವುದಿಲ್ಲ ಎಂಬುದನ್ನು ಈ ಶ್ಲೋಕದಲ್ಲಿ ತಿಳಿಸಿದ್ದಾರೆ ಇದು ಹಿಂದಿನ ಶ್ಲೋಕದಲ್ಲಿ ತಿಳಿಸಿದ ಉತ್ಕೃಷ್ಟವಾದ ಅವಸ್ಥೆಗಿಂತ ಸ್ವಲ್ಪ ಕೆಳಗಿನ ಅವಸ್ಥೆ. ಅಲ್ಲಿ ಶಬ್ದಾದಿ ವಿಷಯ ಜ್ಞಾನವು ಪ್ರಕಾಶ ರಹಿತವಾಗಿರುತ್ತದೆ ಆದರೆ ಇಲ್ಲಿ ಶಬ್ದಾದಿ ವಿಷಯ ಜ್ಞಾನವು ಇದ್ದರೂ ಕೂಡ ಅದರಿಂದ ಮನಸ್ಸಿನಲ್ಲಿ ಸುಖದುಃಖಾದಿ ವಿಕಾರಗಳು ಉಂಟಾಗುವುದಿಲ್ಲ

" ಜಲದಿಂದ ತುಂಬಿರುವ, ಚಲಿಸದೇ ಸ್ಥಿರವಾಗಿರುವ ಸಮುದ್ರವನ್ನು ನದಿಗಳ ನೀರು ಪ್ರವೇಶಿಸುವ ರೀತಿಯಲ್ಲಿ, ಸಮಸ್ತ ಶಬ್ದಾದಿ ವಿಷಯಗಳೂ ಯಾವನನ್ನು ಹೋಗಿ ಸೇರುತ್ತವೆಯೋ ಅವನು ಮನಸ್ಸಿನ ಶಾಂತತೆಯನ್ನು ಹೊಂದುತ್ತಾನೆ. ಐಹಿಕ ವಿಷಯಗಳಲ್ಲಿ ಆಸೆ ಹೊಂದಿರುವವನು ಶಾಂತಿ ಹೊಂದಲಾರನು. "

ತನಗೆ ತಾನೆ ಪೂರ್ಣವಾಗಿ ತುಂಬಿ ಏಕ ರೂಪವಾಗಿರುವ ಸಮುದ್ರವನ್ನು ನದಿಗಳ ನೀರು ಹೋಗಿ ಸೇರುತ್ತವೆ ಆದರೆ ಆ ನದಿಗಳ ನೀರು ಸೇರಿದರೂ ಸೇರದೇ ಇದ್ದರೂ ಸಮುದ್ರವು ಹೆಚ್ಚು ಕಮ್ಮಿ ಆಗುವ ಯಾವ ವಿಕಾರವನ್ನೂ ಹೊಂದುವುದಿಲ್ಲ ಹಾಗೆಯೇ ಇಂದ್ರಿಯ ನಿಗ್ರಹ ಮಾಡಿರುವ ಸ್ಥಿತ ಪ್ರಜ್ಞನು ಆತ್ಮ ಸಾಕ್ಷಾತ್ಕಾರದಿಂದ ತೃಪ್ತಿ ಹೊಂದಿರುವುದರಿಂದ ಸಮಸ್ತ ಶಬ್ದಾದಿ ವಿಷಯಗಳು ಅವನ ಇಂದ್ರಿಯಗಳಿಗೆ ಪ್ರಾಪ್ತವಾಗದೆ ಇದ್ದರೂ ವಿಕಾರವನ್ನು ಹೊಂದುವುದಿಲ್ಲ ಅಂತವನು ಮನಶ್ಶಾಂತಿಯನ್ನು ಹೊಂದುತ್ತಾನೆ ಯಾವನು ಶಬ್ದಾದಿ ವಿಷಯಗಳಿಂದ ವಿಕಾರವನ್ನು ಹೊಂದುವನೋ ಅಂತವನು ಎಂದಿಗೂ ಮನಶ್ಶಾಂತಿಯನ್ನು ಹೊಂದುವುದಿಲ್ಲ.

**ಶ್ಲೋಕ 71**— ಕಾಮಿ ಕಾಮಗಳಿಗೆ ಶಾಂತಿಯಿಲ್ಲ ಎಂದು ಮೇಲಿನ ಶ್ಲೋಕದಲ್ಲಿ ಹೇಳಿದರು. ಆದರೆ ಅವನು ಶಾಂತಿ ಹೊಂದಬೇಕಾದರೆ ಯಾವ ರೀತಿ ನಡೆದುಕೊಳ್ಳಬೇಕು. ಎಂಬುದನ್ನು ಈ ಶ್ಲೋಕದಲ್ಲಿ ಸಂಗ್ರಹಿಸಿ ಹೇಳಿದ್ದಾರೆ–"ಯಾವ ಪುರುಷನು ಸಮಸ್ತ ಶಬ್ದಾದಿ ಐಹಿಕ ವಿಷಯಗಳನ್ನು ತ್ಯಜಿಸಿ, ಅವುಗಳಲ್ಲಿ ಆಸೆಯಿಲ್ಲದವನಾಗಿಯೂ, ಮಮಕಾರವಿಲ್ಲದವನಾಗಿಯೂ, (ಅಹಂಕಾರ) ಅಭಿಮಾನವಿಲ್ಲದವನಾಗಿಯೂ, ಇರುತ್ತಾನೆಯೋ ಅವನು ಶಾಂತಿಯನ್ನು ಹೊಂದುತ್ತಾನೆ".

ಕಾಮಾ : ಎಂದರೆ ಅಪೇಕ್ಷಿಸಲ್ಪಡುವ ವಸ್ತುಗಳಾದ ಶಬ್ದಾದಿ ವಿಷಯಗಳು. ಯಾವ ಮನುಷ್ಯನು ಸಮಸ್ತ ಶಬ್ದಾದಿ ವಿಷಯಗಳನ್ನು ಪರಿತ್ಯಾಗ ಮಾಡಿ, ಅವುಗಳಲ್ಲಿ ನಿಸ್ಪೃಹನಾಗಿ ಅಂದರೆ ಆಸೆಯಿಲ್ಲದವನಾಗಿ, ಅವುಗಳು ತನಗೆ ಸೇರಿದವು ಎಂಬ ಮಮಕಾರ ಅಥವ ಮಮತೆಯಿಲ್ಲದವನಾಗಿ, ಮತ್ತು ಆತ್ಮನಲ್ಲದ ದೇಹದಲ್ಲಿ ಆತ್ಮವೆಂಬ ಅಭಿಮಾನವಿಲ್ಲದವನಾಗಿ ಪ್ರವರ್ತಿಸುತ್ತಾ ಇರುವನೋ ಅವನು ಆತ್ಮನ ಯಥಾರ್ಥ ಸ್ವರೂಪವನ್ನು ಸಾಕ್ಷಾತ್ಕರಿಸಿ ಶಾಂತಿಯನ್ನು ಪಡೆಯುವನು.

69 ನೇ ಶ್ಲೋಕದಲ್ಲಿ ಸ್ಥಿತ ಪ್ರಜ್ಞತೆಯ ಉತ್ಕೃಷ್ಟಾವಸ್ಥೆ ಹೊಂದಿರುವವನಿಗೆ ಶಬ್ದಾದಿ ವಿಷಯಗಳು ಕತ್ತಲೆಯಂತೆ ಕಾಣಿಸುವುದೇ ಇಲ್ಲವೆಂದು ಹೇಳಿದರು ; 70 ನೇ ಶ್ಲೋಕದಲ್ಲಿ ಅವನಿಗಿಂತ ಕೆಳಗಿನ ಅವಸ್ಥೆಯಲ್ಲಿರುವವನಿಗೆ ಶಬ್ದಾದಿ ವಿಷಯಗಳು ಇಂದ್ರಿಯಗಳಿಗೆ ಗೋಚರವಾದರೂ ಅವನಿಗೆ ಅವುಗಳ ಸಂಬಂಧದಿಂದ ಯಾವ ವಿಕಾರವೂ ಆಗುವುದಿಲ್ಲವೆಂದು ಹೇಳಿದರು ಈ ಎರಡು ಅಧಿಕಾರಿಗಳಿಗೂ ಕೆಳಗಿನ ಅವಸ್ಥೆಯಲ್ಲಿರುವ ಆತ್ಮದರ್ಶನ ಪ್ರಾಪ್ತಿ ಹೊಂದಬೇಕೆಂಬ ಆಸೆ ಹೊಂದಿರುವ ಪುರುಷನು ಹತ್ತಬೇಕಾದ ಮೆಟ್ಟಲುಗಳನ್ನು ಈ ಶ್ಲೋಕದಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ.

(1) ಅವನು ಮೊದಲು ತಾನು ಶರೀರವಲ್ಲ ಆತ್ಮ ಎಂಬ ಜ್ಞಾನ ಹೊಂದಿ ಆತ್ಮವಲ್ಲದ ಶರೀರದಲ್ಲಿ ಅಭಿಮಾನವನ್ನು ಬಿಡಬೇಕು ಮತ್ತು ಅಹಂಕಾರ ರಹಿತನಾಗಬೇಕು (2) ಆಗ (ಅಂದರೆ ಅಹಂಕಾರವು ಹೋದ ಮೇಲೆ) ಅವನಿಗೆ ಶರೀರ ಸಂಬಂಧದಿಂದ ತಾನು ಅನುಭವಿಸುವ ವಿಷಯಗಳಲ್ಲಿ ಮಮಕಾರ ಬುದ್ಧಿಯು ಅಂದರೆ ಅವು ತನಗೆ ಸೇರಿದವು ಎಂಬ ಬುದ್ಧಿಯು ಹೋಗುತ್ತದೆ. ಅವನು ಮಮಕಾರ ರಹಿತನಾಗುತ್ತಾನೆ (3) ಆಗ (ಅಂದರೆ ಮಮಕಾರವು ಹೋದಮೇಲೆ ವಿಷಯಗಳಲ್ಲಿರುವ ಆಸೆಯು ಹೋಗುತ್ತದೆ. ಅವನು ನಿಸ್ಪೃಹನಾಗುತ್ತಾನೆ ; (4) ಆಗ (ಅಂದರೆ ನಿಸ್ಪೃಹನಾದ ಮೇಲೆ) ಶಬ್ದಾದಿ ವಿಷಯಗಳನ್ನು ತಾನಾಗಿಯೇ ಪರಿತ್ಯಜಿಸುತ್ತಾನೆ ; ವಿಷಯಗಳನ್ನು ಪರಿತ್ಯಜಿಸಿದ ಮೇಲೆ ಆತ್ಮಧ್ಯಾನವು ಲಭಿಸಿ ಅವನಿಗೆ ಶಾಂತಿದೊರೆಯುತ್ತದೆ. ಆದ್ದರಿಂದ ಅಹಂಕಾರರಹಿತನಾಗಿರುವಿಕೆ (ನಿರಂಹಕಾರ) ಮಮಕಾರರಹಿತನಾಗಿರುವಿಕೆ (ನಿರ್ಮಮ), ಶಬ್ದಾದಿ ವಿಷಯಗಳಲ್ಲಿ ಆಸೆಇಲ್ಲದಿರುವಿಕೆ (ನಿಸ್ಪೃಹ) ಮತ್ತು ಶಬ್ದಾದಿ ವಿಷಯಗಳನ್ನು ಪರಿತ್ಯಜಿಸುವಿಕೆ (ಸರ್ವಾನ್ ಕಾಮಾನ್ ವಿಹಾಯ) ಎಂಬ ನಾಲ್ಕು ಮೆಟ್ಟಲುಗಳನ್ನು ಸ್ಥಿತಪ್ರಜ್ಞನಾಗಬೇಕೆಂದು ಬಯಸುವವನು ಕ್ರಮವಾಗಿ ಹತ್ತಬೇಕು ಎಂದು ಈ ಶ್ಲೋಕದಲ್ಲಿ ತಿಳಿಸುತ್ತಾರೆ ।

**ಶ್ಲೋಕ 72** "ಎಷೈ ಅರ್ಜುನನೇ ಇದೇ ಬ್ರಾಹ್ಮೀ ಸ್ಥಿತಿಯು. ಇದನ್ನು ಹೊಂದಿದ ಮನುಷ್ಯನು ಮತ್ತೆ ಮೋಹಗೊಳ್ಳುವುದಿಲ್ಲ. ಅಂತ್ಯಕಾಲದಲ್ಲಿಯಾದರೂ ಈ ಸ್ಥಿತಿಯಲ್ಲಿ ಇದ್ದುಕೊಂಡು ಸುಖರೂಪವಾದ ಆತ್ಮವನ್ನು ಹೊಂದುತ್ತಾನೆ"

ಇದೇ ಅಂದರೆ ಇಲ್ಲಿಯವರೆಗೆ ತಿಳಿಸಿದ ಸ್ಥಿತ ಪ್ರಜ್ಞತೆಯೆಂಬ ಜ್ಞಾನನಿಷ್ಠೆಯನ್ನು ಪಡೆಯಲು ಸಾಧನರೂಪವಾದ ಆತ್ಮನು ನಿತ್ಯನು ಎಂಬ ಆತ್ಮಯಾಥಾರ್ಥಜ್ಞಾನದೊಂದಿಗೆ ಕೂಡಿದ ಫಲದಲ್ಲಿ ಆಸಕ್ತಿ ಹೊಂದದ ಕರ್ಮಮಾಡುವ ಸ್ಥಿತಿಯೇ ಬಹ್ಮವನ್ನು ಹೊಂದುವಂತೆ ಮಾಡುವಸ್ಥಿತಿಯು ಈ ಆತ್ಮಜ್ಞಾನದಿಂದ ಕೂಡಿದ ಕರ್ಮನಿಷ್ಠೆಯನ್ನು ಹೊಂದಿದ ಪುರುಷನು ಮತ್ತೆ ಮೋಹಗೊಳ್ಳುವುದಿಲ್ಲ ಅಂದರೆ ಮತ್ತೆ ಸಂಸಾರವನ್ನು ಹೊಂದಿದವನಾಗುವುದಿಲ್ಲ. ಅಂತಿಮ ಕಾಲದಲ್ಲಿ ಕೂಡ ಈ ಸ್ಥಿತಿಯಲ್ಲಿ ಇದ್ದುದಾದರೆ ನಿರ್ವಾಣ ಬ್ರಹ್ಮನನ್ನು ಅಂದರೆ ಶಾಂತಿಮಯಬ್ರಹ್ಮನನ್ನು ಹೊಂದುತ್ತಾನೆ ಅಂದರೆ ಸುಖ ಸ್ವರೂಪನಾದ ಆತ್ಮನನ್ನು ಹೊಂದುತ್ತಾನೆಂದು ಅರ್ಥ

ಆತ್ಮನ ಯಥಾರ್ಥಸ್ವರೂಪವನ್ನೂ ಮತ್ತು ಅದನ್ನು ಹೊಂದಲು ಯುದ್ಧರೂಪವಾದ ಕರ್ಮವು ಸಾಧನವು ಎಂಬುದನ್ನೂ ತಿಳಿಯದವನಾಗಿ, ಶರೀರವೇ ಆತ್ಮವೆಂದು ಮೋಹಗೊಂಡು ಯುದ್ಧಮಾಡಲು ಹಿಂಜರಿದ ಅರ್ಜುನನ ಮೋಹವನ್ನು ಹೋಗಲಾಡಿಸುವ ಸಲುವಾಗಿ ! ದೇಹದ ಅನಿತ್ಯತೆ, ಆತ್ಮನು ನಿತ್ಯತೆ ಮತ್ತು ದೇಹಾತ್ಮರುಗಳ ಪರಸ್ಪರ ವಿಲಕ್ಷಣತೆಯ

ಯಲ್ಲವೆ. ಆದ್ದರಿಂದ ಯಾವ ಮಾತಿನಿಂದ ನಾನು ಅನುಷ್ಠಿಸ ಬೇಕಾದ ಸಾಧನವನ್ನು ನಿಶ್ಚಯಿಸಿಕೊಂಡು ಆತ್ಮ ಕಲ್ಯಾಣ ವನ್ನು ಪಡೆಯುವೆನೋ ಅಂತಹ ಯಾವ ವಿರುದ್ಧ ಅಭಿಪ್ರಾಯ ಗಳ ಮಿಶ್ರಣವೂ ಇಲ್ಲದ (ಸ್ಪಷ್ಟವಾದ) ಒಂದು ಮಾತನ್ನು ಹೇಳು ಎಂದು ಅರ್ಜುನನು ಶ್ರೀ ಕೃಷ್ಣನನ್ನು ಕೇಳುತ್ತಾನೆ

**ಶ್ಲೋಕ 3** ಲೋಕದಲ್ಲಿ ಜ್ಞಾನಯೋಗ ಮತ್ತು ಕರ್ಮಯೋಗ ಎಂಬ ಎರಡು ಸಾಧನಗಳಿವೆ ಎಂದೂ ಅದರಲ್ಲಿ ವಿಷಯಗಳಿಂದ ವ್ಯಾಕುಲ ವಾಗದ ಸ್ಥಿರ ಬುದ್ಧಿಯುಳ್ಳ ಸಾಂಖ್ಯರಿಗೆ ಮಾತ್ರ ಜ್ಞಾನಯೋಗದಲ್ಲಿ ಅಧಿಕಾರವೇ ಹೊರತು ಮಿಕ್ಕವರಿಗೆಲ್ಲಾ ಕರ್ಮಯೋಗದಲ್ಲಿ ಅಧಿಕಾರ ಎಂದು ಈ ಶ್ಲೋಕದಲ್ಲಿ ತಿಳಿಸಿದ್ದಾರೆ.

ಭಗವಂತನು ಹೇಳುತ್ತಾನೆ "ಅರ್ಜುನ ! ಈ ಲೋಕದಲ್ಲಿ ಎರಡು ವಿಧವಾದ ನಿಷ್ಠೆಯು ನನ್ನಿಂದ ಮೊದಲೇ ಹೇಳಲ್ಪಟ್ಟಿದೆ ಸಾಂಖ್ಯರಿಗೆ ಜ್ಞಾನ ಯೋಗ ಅನುಷ್ಠಾನವೂ, ಯೋಗಿಗಳಿಗೆ ಕರ್ಮಯೋಗ ಅನುಷ್ಠಾನವೂ ನನ್ನಿಂದ ಹೇಳಲ್ಪಟ್ಟಿದೆ"

ಅರ್ಜುನ! ನಾನು ಹಿಂದೆಹೇಳಿರುವ ಮಾತನ್ನು ನೀನು ಚೆನ್ನಾಗಿ ತಿಳಿದುಕೊಂಡಿಲ್ಲ. ವಿಧ ವಿಧವಾದ ಅಧಿಕಾರಿಗಳಿಂದ ತುಂಬಿರುವ ಈ ಜಗತ್ತಿನಲ್ಲಿ ಜ್ಞಾನವಿಷಯವಾದ ಮತ್ತು ಕರ್ಮವಿಷಯವಾದ ಎರಡು ಪ್ರಕಾರದ ಸಾಧನಗಳು ಆಯಾ ಅಧಿಕಾರಿಗಳಿಗೆ ಅನುಗುಣವಾಗಿ ಬೇರೆ ಬೇರೆಯಾಗಿ ಸ್ಪಷ್ಟ ವಾಗಿಯೇ ನನ್ನಿಂದ ಹೇಳಲ್ಪಟ್ಟಿದೆ, ಸಮಸ್ತ ಲೌಕಿಕ ಪುರುಷರೂ ಮೋಕ್ಷದಲ್ಲಿ ಆಸಕ್ತಿ ಉಂಟಾದ ಕೂಡಲೇ ಜ್ಞಾನಯೋಗಕ್ಕೆ ಅಧಿಕಾರಿಗಳಾಗಿ ಆಗಲಾರರು ಮತ್ತೇನೆಂದರೆ ಫಲಾಪೇಕ್ಷೆ ಯಿಲ್ಲದೆ, ಕೇವಲ ಪರಮ ಪುರುಷನ ಆರಾಧನೆ ರೂಪವಾಗಿ ಕರ್ಮ ಗಳನ್ನು ಮಾಡಿ ಮೊದಲು ಮನಸ್ಸಿನ ಕಾಮಕ್ರೋಧಾದಿ ಕಷ್ಮಲಗಳನ್ನು ಕಳೆದುಕೊಂಡವನಾಗಬೇಕು ಅನಂತರ ಅಂದರೆ ವ್ಯಾಕುಲ ರಹಿತವಾದ ಇಂದ್ರಿಯಗಳನ್ನು ಹೊಂದಿದವನಾದ ಮೇಲೆ ಅವನು ಜ್ಞಾನನಿಷ್ಠೆಗೆ ಅಧಿಕಾರಿಯಾಗಬಲ್ಲನು.

ಪರಮ ಪುರುಷನ ಆರಾಧನೆಯೇ ಕರ್ಮಗಳ ಏಕ ಮಾತ್ರ ಸ್ವರೂಪವೆಂದು ಗೀತೆಯಲ್ಲಿ ಮುಂದೆ ಹೇಳಿದೆ ಇಲ್ಲಿಯೂ ಕೂಡ 2 ನೇ ಅಧ್ಯಾಯದಲ್ಲಿ ಮೊದಲು ಆತ್ಮನ ಯಥಾರ್ಥ ಸ್ವರೂಪದ ವರ್ಣನೆ ಮಾಡಿ, ಅನಂತರ ಆತ್ಮ ಸ್ವರೂಪ ಜ್ಞಾನ ದೊಂದಿಗೆ "ಕರ್ಮಣ್ಯೇವಾಧಿಕಾರಸ್ತೆ" ಎಂಬ ಶ್ಲೋಕದ ಮೂಲಕ ಫಲಾಭಿಸಂಧಿರಹಿತವಾಗಿ ಕರ್ಮ ಮಾಡಬೇಕೆಂದು ವಿಧಿಸಿ, ಅನಂತರ ಅದರ ಮೂಲಕ ಬುದ್ಧಿಯು ವಿಷಯ ವ್ಯಾಕುಲ ತಾರೂಪವಾದ ಮೋಹದಿಂದ ಬಿಡಲ್ಪಡಬೇಕೆಂದೂ ಮತ್ತು ಅಂತಹ ಸ್ಥಿತಿಯನ್ನು ಪಡೆದ ಅಧಿಕಾರಿಗೆ "ಪ್ರಜಹಾತಿ ಯದಾ ಕಾಮಾನ್" ಎಂಬಿವೇ ಮೊದಲಾದ ಶ್ಲೋಕಗಳಿಂದ ಜ್ಞಾನ ಯೋಗ ನಿಷ್ಠೆಯು ಹೇಳಲ್ಪಟ್ಟಿತು ಆ ಕಾರಣದಿಂದ ಸಾಂಖ್ಯ ರಿಗೆ ಮಾತ್ರ ಜ್ಞಾನಯೋಗದಲ್ಲಿ ಅಧಿಕಾರವು ಹೇಳಲ್ಪಟ್ಟಿದೆ ಮತ್ತು ಯೋಗಿಗಳಿಗಾದರೋ ಕರ್ಮ ಯೋಗದಲ್ಲಿ ಅಧಿಕಾರವು ಹೇಳಲ್ಪಟ್ಟಿದೆ. ಸಾಂಖ್ಯಾ ಎಂದರೆ ಬುದ್ಧಿ-ಬುದ್ಧಿಯಿಂದ ಕೂಡಿದವರು ಸಾಂಖ್ಯರು ಅಂದರೆ ಆತ್ಮ ಒಂದರವಿಷಯ ವಾದಬುದ್ಧಿಯಿಂದ ಕೂಡಿರುವವರು ಸಾಂಖ್ಯರು ಅದಕ್ಕೆ ಅರ್ಹತೆಯಿಲ್ಲದವರು ಕರ್ಮಯೋಗಾಧಿಕಾರಿಗಳು ಅವರೇ ಯೋಗಿಗಳು. ವಿಷಯಗಳಿಂದ ವ್ಯಾಕುಲಿತವಾದ ಬುದ್ಧಿ ಯುಳ್ಳವರಿಗೆ ಕರ್ಮಯೋಗದಲ್ಲಿ ಅಧಿಕಾರವೂ, ವಿಷಯಗಳಿಂದ ವ್ಯಾಕುಲವಾಗದೆ ವ್ಯಾಕುಲ ರಹಿತವಾದ ಸ್ಥಿರ ಬುದ್ಧಿಯುಳ್ಳ ವರಿಗಾದರೋ ಜ್ಞಾನಯೋಗದಲ್ಲಿ ಅಧಿಕಾರವೂ ಹೇಳಲ್ಪಟ್ಟಿದೆ. ಆದ್ದರಿಂದ ಲೋಕದಜನರು ಅವರವರ ಯೋಗ್ಯತೆಗೆ ತಕ್ಕಂತೆ ಕರ್ಮ ನಿಷ್ಠೆಯನ್ನೋ ಜ್ಞಾನನಿಷ್ಠೆಯನ್ನೋ ಸ್ವೀಕರಿಸಿ ಆತ್ಮ ಸಾಕ್ಷಾ ತ್ಕಾರ ಪಡೆಯಲು ಯತ್ನಿಸಬೇಕು. ಇಲ್ಲಿ ಕೊಂಚವೂ ಪರಸ್ಪರ ವಿರುದ್ಧವಾದ ಅಭಿಪ್ರಾಯವು ಹೇಳಲ್ಪಟ್ಟಿಲ್ಲ ಮತ್ತು ಯಾವ ವ್ಯಾಮಿಶ್ರವಾದ ಮಾತುಗಳೂ ಕೂಡ ಹೇಳಲ್ಪಟ್ಟಿಲ್ಲ ಎಂದು ಶ್ರೀಕೃಷ್ಣನು ಅರ್ಜುನನ ಪ್ರಶ್ನೆಗೆ ಮೊದಲು ಸಮಾಧಾನ ಹೇಳಿ ತನ್ನ ಉಪದೇಶವನ್ನು ಮುಂದುವರೆಸುತ್ತಾನೆ.

**ಶ್ಲೋಕ 4**—ಸಮಸ್ತ ಲೌಕಿಕ ಪುರುಷರಿಗೆ ಮೋಕ್ಷದಲ್ಲಿ ಇಚ್ಛೆ ಉಂಟಾದ ಕೂಡಲೇ ಜ್ಞಾನಯೋಗದ ಸಾಧನೆ ಮಾಡು ವುದು ಬಹಳ ಕಷ್ಟ. ಸರ್ವರೂ ಮೊದಲು ಆಸಕ್ತಿ ರಹಿತರಾಗಿ ಕರ್ಮಮಾಡಿ ಜ್ಞಾನ ನಿಷ್ಠೆಗೆ ಅರ್ಹತೆ ಪಡೆಯಬೇಕು ಎಂದು ಈ ಶ್ಲೋಕದಲ್ಲಿ ತಿಳಿಸುತ್ತಾರೆ. "ಮನುಷ್ಯನು ಕರ್ಮಮಾಡಲು ಆರಂಭಿಸದೆ ಇರುವುದರಿಂದ ನೈಷ್ಕರ್ಮ್ಯತೆಯನ್ನು ಹೊಂದುವುದಿಲ್ಲ ಮತ್ತು (ಆರಂಭಿಸಿದ) ಕರ್ಮವನ್ನು ತ್ಯಜಿಸುವುದರಿಂದಲೂ ಸಿದ್ಧಿ ಯನ್ನು ಹೊಂದಲಾರನು"

ಇಲ್ಲಿ ನೈಷ್ಕರ್ಮ್ಯತೆ ಎಂದರೆ ಜ್ಞಾನನಿಷ್ಠೆ ಎಂದು ಅರ್ಥ. ಶಾಸ್ತ್ರವಿದಿತ ಕರ್ಮಗಳನ್ನು ಪ್ರಾರಂಭಿಸದೆ ಇದ್ದು ಬಿಟ್ಟರೆ ಪುರುಷನು ನೈಷ್ಕರ್ಮ್ಯವನ್ನು ಅಂದರೆ ಜ್ಞಾನನಿಷ್ಠೆಯನ್ನು ಹೊಂದುವುದಿಲ್ಲ ಅಂದರೆ ಸಮಸ್ತ ಇಂದ್ರಿಯಗಳ ವ್ಯಾಪಾರ

ರೂಪವಾದ ಕರ್ಮಗಳನ್ನು ಬಿಡುವುದರಿಂದ ಉಂಟಾಗುವ ಜ್ಞಾನ ನಿಷ್ಠೆಯನ್ನು ಕೇವಲ ಕರ್ಮಗಳನ್ನು ಆರಂಭಿಸದೇ ಇರುವುದರಿಂದ ಹೊಂದುವುದಕ್ಕಾಗುವುದಿಲ್ಲ ಎಂದು ಅರ್ಥ. ಮತ್ತು ಆರಂಭಿಸಲ್ಪಟ್ಟ ಶಾಸ್ತ್ರ ವಿದಿತ ಕರ್ಮಗಳ ತ್ಯಾಗದಿಂದಲೂ ಸಿದ್ಧಿಯನ್ನು ಅಂದರೆ ಜ್ಞಾನನಿಷ್ಠೆಯನ್ನು ಹೊಂದುವುದಕ್ಕಾಗುವುದಿಲ್ಲ. ಏತಕ್ಕೆಂದರೆ ಫಲಾಭಿಲಾಷೆಯಿಲ್ಲದೆ, ಪರಮ ಪುರುಷನ ಆರಾಧನ ರೂಪವಾಗಿ ಮಾಡಲ್ಪಡುವ ಕರ್ಮದಿಂದ ಆತ್ಮನಿಷ್ಠೆಯು ಸಾಧಿಸಲ್ಪಡುತ್ತದೆ. ಅಂತಹಕರ್ಮಗಳಿಂದಲ್ಲದೆ ಅಂದರೆ ಬುದ್ಧಿಯೋಗದಿಂದ ಕೂಡಿ ಕರ್ಮಮಾಡದೆ ಆತ್ಮನಿಷ್ಠೆಯು ಲಭಿಸುವುದಿಲ್ಲ. ಯಾವ ಪುರುಷನು ಫಲಾಭಿ ಸಂಧಿ ರಹಿತನಾಗಿ ಕರ್ಮಮಾಡುವುದರ ಮೂಲಕ ಗೋವಿಂದನನ್ನು ಆರಾಧಿಸುವುದಿಲ್ಲವೋ ಮತ್ತು ಅದರ ಮೂಲಕ ಅನಾದಿ ಕಾಲದಿಂದ ಆಚರಿಸಲ್ಪಟ್ಟ ಅನಂತವಾದ ಪಾಪರಾಶಿಗಳನ್ನು ನಾಶಗೊಳಿಸುವುದಿಲ್ಲವೋ ಅಂತಹ ಮನುಷ್ಯನು ಇಂದ್ರಿಯಗಳಿಂದ ವ್ಯಾಕುಲಗೊಳ್ಳದೆ ಇರುವ ಸ್ಥಿತಿಯಿಂದ ಪ್ರಾಪ್ತವಾಗುವ ಆತ್ಮ ನಿಷ್ಠೆಯನ್ನು ಸಂಪಾದಿಸುವುದು ಬಹಳ ಕಷ್ಟ.

**ಶ್ಲೋಕ 5**—ಎಲ್ಲರೂ ಕರ್ಮಮಾಡಿಯೇ ತೀರಬೇಕು. ಪ್ರಕೃತಿ ಸಂಬಂಧ ಹೊಂದಿರುವುದರಿಂದ ಕರ್ಮಮಾಡದೇ ಇರಲು ಯಾರಿಗೂ ಸಾಧ್ಯವಿಲ್ಲವೆಂದು ಇಲ್ಲಿ ಹೇಳಿದ್ದಾರೆ. " ಯಾವ ಪುರುಷನು ಎಂದಿಗೂ ಒಂದು ಕ್ಷಣವೂ ಕರ್ಮಮಾಡದೇ ಇರಲಾರನು ಸರ್ವರೂ ಪ್ರಕೃತಿಯಿಂದ ಉತ್ಪನ್ನವಾದ ಗುಣಗಳಿಗೆ ವಶರಾಗಿ ಕರ್ಮಗಳನ್ನು ಮಾಡಿಯೇ ಮಾಡುತ್ತಾರೆ ".

ಈ ಲೋಕದಲ್ಲಿ ವಾಸಮಾಡುತ್ತಿರುವ ಯಾವ ಮನುಷ್ಯನು ಎಂದೂ (ಯಾವ ಕಾಲದಲ್ಲೂ) ಕರ್ಮ ಮಾಡದೇ ಇರಲಾರನಲ್ಲವೇ. " ನಾನು ಏನನ್ನೂ ಮಾಡುವುದಿಲ್ಲ " ಎಂದು ನಿಶ್ಚಯ ಬುದ್ಧಿ ಮಾಡಿಕೊಂಡರೂ ಕೂಡ ಕರ್ಮಮಾಡಲೇಬೇಕಾಗುತ್ತದೆ ಸಮಸ್ತ ಪುರುಷನೂ ಪ್ರಕೃತಿಯಿಂದ ಉತ್ಪನ್ನವಾದ ಸತ್ತ್ವ ರಜಸ್ತಮೋಗುಣಗಳಿಂದ ಕೂಡಿದವನಾಗಿದ್ದಾನೆ ತನ್ನ ಪೂರ್ವಕೃತ ಕರ್ಮಗಳಿಗೆ ಅನುಗುಣವಾಗಿ ಅವನಲ್ಲಿ ಕೆಲವು ಗುಣಗಳು ಪ್ರವೃದ್ಧವಾಗಿರುತ್ತವೆ ಆಯಾ ಗುಣಗಳಿಗೆ ಯೋಗ್ಯವಾದ ಕರ್ಮಗಳಲ್ಲಿ ಅವನು ಅಸ್ವತಂತ್ರನಾಗಿ ಪ್ರವರ್ತಿಸುತ್ತಾನೆ ಆದ್ದರಿಂದ ಮೇಲೆ ವಿವರಿಸಿದ ರೀತಿಯಲ್ಲಿ ಕರ್ಮ ಯೋಗವನ್ನು ಆಚರಿಸಿ ಹಿಂದೆ ಮಾಡಿರುವ ಪಾಪರಾಶಿಗಳನ್ನೆಲ್ಲಾ ನಾಶಪಡಿಸಿಕೊಳ್ಳಬೇಕು ; ಅನಂತರ ಸತ್ತ್ವಾದಿ ಗುಣಗಳನ್ನು ವಶಪಡಿಸಿಕೊಂಡು ನಿರ್ಮಲವಾದ ಅಂತಃಕರಣ ಹೊಂದಿ ಜ್ಞಾನ,ಯೋಗವನ್ನು ಸಂಪಾದಿಸಿಕೊಳ್ಳಬೇಕು.

**ಶ್ಲೋಕ 6**—ಮೊದಲು ಮೇಲೆ ವಿವರಿಸಿದ ರೀತಿಯಲ್ಲಿ ಕರ್ಮಯೋಗ ಸಾಧನೆ ಮಾಡದೆ ಕೇವಲ ಜ್ಞಾನ ಯೋಗದಲ್ಲೇ ಪ್ರವೃತ್ತನಾಗುವವನು ಮಿಥ್ಯಾಚಾರಿಯಾಗುವನು ಎಂದು ಈ ಶ್ಲೋಕದಲ್ಲಿ ತಿಳಿಸಿದ್ದಾರೆ. " ಯಾವನು ; ಕರ್ಮೇಂದ್ರಿಯಗಳನ್ನು (ಇಂದ್ರಿಯ ವಿಷಯಗಳಲ್ಲಿ ಪ್ರವರ್ತಿಸದಂತೆ) ತಡೆದು ಇಂದ್ರಿಯಗಳ ವಿಷಯಗಳನ್ನು ಮನಸ್ಸಿನಲ್ಲಿ ಸ್ಮರಿಸುತ್ತಾ ಇರುವನೋ ಆ ಮೂಢಾತ್ಮನು (ಆತ್ಮ ವಿಷಯ ವಿವೇಕವಿಲ್ಲದವನು) ಮಿಥ್ಯಾಚಾರನೆಂದು ಹೇಳಲ್ಪಡುವನು.

ಮೇಲೆ ಹೇಳಿದ ರೀತಿಯಲ್ಲಿ ಕರ್ಮಯೋಗ ಸಾಧನೆ ಮಾಡದೇ ಇರುವವನಿಗೆ ಪೂರ್ವಕೃತಪಾಪಗಳು ನಾಶವಾಗುವುದಿಲ್ಲ ಇದರಿಂದ ತನ್ನ ಬಾಹ್ಯೇಂದ್ರಿಯಗಳನ್ನೂ ಮನಸ್ಸನ್ನೂ ಜಯಿಸಲಾರದವನಾಗಿರುವ ಅವನು ಆತ್ಮ ಜ್ಞಾನದಲ್ಲಿ (ಜ್ಞಾನ ಯೋಗದಲ್ಲಿ ಪ್ರವೃತ್ತಿ ಉಳ್ಳವನಾದರೆ ಅವನ ಮನಸ್ಸು ವಿಷಯಗಳ ಕಡೆ ತಿರುಗಿರುವುದರಿಂದ ಆತ್ಮನಿಂದ ವಿಮುಖವಾದ ಮನಸ್ಸುಳ್ಳವನಾಗಿ ವಿಷಯಗಳನ್ನೇ ಸ್ಮರಿಸುತ್ತಾ ಇರುವನು ಹೀಗೆ ಮನಸ್ಸಿನಲ್ಲಿ ಒಂದು ವಿಧವಾಗಿ ಸಂಕಲ್ಪಮಾಡಿ ಬೇರೆ ವಿಧವಾಗಿ ಆಚರಿಸುವುದರಿಂದ ಅವನು ಮಿಥ್ಯಾಚಾರನೆಂದು ಹೇಳಲ್ಪಡುತ್ತಾನೆ ಅಂದರೇನು ಆತ್ಮಜ್ಞಾನ ಹೊಂದುವುದರಲ್ಲಿ ಉದ್ಯುಕ್ತನಾದ ಅವನು ಅದರಿಂದ ವಿಪರೀತನಾಗಿ ನಷ್ಟ ಹೊಂದುತ್ತಾನೆ ಎಂದು ಅರ್ಥ

**ಶ್ಲೋಕ 7**—ಹಿಂದಿನ ಶ್ಲೋಕದಲ್ಲಿ ಇಂದ್ರಿಯಗಳನ್ನು ವಿಷಯಗಳಿಂದ ನಿಗ್ರಹಿಸಿ ಯಾವ ಕರ್ಮವನ್ನೂ ಮಾಡದೇ ಇದ್ದರೂ, ಮನಸ್ಸಿನಲ್ಲಿ ವಿಷಯ ಚಿಂತನೆ ಮಾಡುವವನು ಮಿಥ್ಯಾಚಾರಿ ಎಂದು ಹೇಳಿದರು. ಈಗ ಅದಕ್ಕೆ ವಿರುದ್ಧವಾಗಿ ಮನಸ್ಸಿನಲ್ಲಿ ವಿಷಯ ಚಿಂತನೆಗಳನ್ನು ಮಾಡದೆ ಮನಸ್ಸನ್ನು ನಿಗ್ರಹಿಸಿ ಇಂದ್ರಿಯಗಳ ಮೂಲಕ ಕರ್ಮಯೋಗವನ್ನು ಆಚರಿಸುವವನೇ ಶ್ರೇಷ್ಠನು ಎನ್ನುತ್ತಾರೆ—" ಯಾವನಾದರೂ ಇಂದ್ರಿಯಗಳನ್ನು ಮನಸ್ಸಿನಿಂದ ನಿಗ್ರಹಿಸಿ ಆಸಕ್ತಿ ರಹಿತನಾಗಿ ಕರ್ಮೇಂದ್ರಿಯಗಳ ಮೂಲಕ ಕರ್ಮಯೋಗವನ್ನು ಆರಂಭ ಮಾಡಿದರೆ ಅವನು ಶ್ರೇಷ್ಠನಾಗುತ್ತಾನೆ "

ಸಾಮಾನ್ಯವಾಗಿ ಮನುಷ್ಯರಿಗೆ ಅನಾದಿಕಾಲದಿಂದ ವಿಷಯೋಪಭೋಗಗಳಿಗಾಗಿ ಕರ್ಮಮಾಡಿ ಮಾಡಿ ಕರ್ಮಮಾಡುವ

ಅಭ್ಯಾಸವು ಇಲ್ಲದೇ ಇದೆ. ಆತ್ಮ ಸಾಕ್ಷಾತ್ಕಾರಕ್ಕಾಗಿ ಸಾಧನೆ ಮಾಡುವ ಮನುಷ್ಯನು, ಆತ್ಮಸಾಕ್ಷಾತ್ಕಾರಕ್ಕಾಗಿ ಪ್ರವರ್ತಿಸಿರುವ ತನ್ನ ಮನಸ್ಸಿನಿಂದ ಇಂದ್ರಿಯಗಳನ್ನು ಪೂರ್ವಕಾಲದಿಂದ ಅಭ್ಯಾಸವಾಗಿರುವ ವಿಷಯೋಪಭೋಗಗಳಿಗಾಗಿ ಮಾಡಿದ ಕರ್ಮಗಳಿಗೆ ಬದಲಾಗಿ, ಅದಕ್ಕೆ ಸಜಾತೀಯವಾದ ಶಾಸ್ತ್ರವಿಹಿತವಾದ ಕರ್ಮಗಳಲ್ಲಿ ನಿಯಮಿಸಬೇಕು. ಹೀಗೆ ಮನಸು ಸಹಜವಾಗಿ ತಾನಾಗಿಯೇ ಕರ್ಮದಲ್ಲಿ ಆಸಕ್ತಿಯುಳ್ಳ ಆ ಇಂದ್ರಿಯಗಳ ಮೂಲಕ ಸಂಗರಹಿತನಾಗಿ ಕರ್ಮಯೋಗವನ್ನು ಆಚರಿಸುತ್ತಾನೆಯೋ ಅವನು ಯಾವವಿಧವಾದ ಪ್ರಮಾದವನ್ನೂ ಹೊಂದುವುದಿಲ್ಲವಾದ್ದರಿಂದ ಜ್ಞಾನನಿಷ್ಠನಾದ ಸಾಧಕನಿಗಿಂತ ಶ್ರೇಷ್ಠನಾಗುತ್ತಾನೆ.

**ಶ್ಲೋಕ 8**—ಪ್ರಕೃತಿ ಸಂಬಂಧ ಹೊಂದಿದ ಮೇಲೆ ಶರೀರ ಪೋಷಣೆಗಾಗಿಯಾದರೂ ಕರ್ಮಮಾಡಲೇಬೇಕೆಂದೂ, ಒಟ್ಟಿನಲ್ಲಿ ಜ್ಞಾನಯೋಗಕ್ಕಿಂತ ಕರ್ಮಯೋಗವೇ ಸುಖಕರವೂ, ಪ್ರಮಾದ ರಹಿತವೂ ಆಗಿ ಶ್ರೇಷ್ಠವಾಗಿದೆ ಎಂದೂ ಈ ಶ್ಲೋಕದಲ್ಲಿ ತಿಳಿಸಿದ್ದಾರೆ

"ನೀನು ನಿಯತವಾದ ಕರ್ಮವನ್ನು ಮಾಡು. ಕರ್ಮಮಾಡದ ಬರೀ ಜ್ಞಾನಯೋಗಕ್ಕಿಂತ ಕರ್ಮಯೋಗವೇ ಶ್ರೇಷ್ಠವು ಕರ್ಮ ಮಾಡದೇ ಇದ್ದರೆ ನಿನಗೆ (ಶರೀರಧಾರಣಾದಿ) ಶರೀರಯಾತ್ರೆಯು ಸಿದ್ಧಿಸುವುದಿಲ್ಲ"–

ನಿಯತವೆಂದರೆ ವ್ಯಾಪ್ತವಾದದು ಅಂದರೆ ಅನಿವಾರ್ಯವೂ ಅವಶ್ಯವೂ ಆದುದು ಎಂದು ಅರ್ಥ. ಜೀವಾತ್ಮನಿಗೆ ಅನಾದಿ ಕಾಲದ ವಾಸನೆಗಳಿಂದ ಪ್ರಕೃತಿ ಸಂಬಂಧವುಂಟಾಗಿದೆ. ಪ್ರಕೃತಿ ಸಂಬಂಧವಿರುವುದರಿಂದ ಕರ್ಮವು ಅನಿವಾರ್ಯವೂ ಅವಶ್ಯವೂ ಆಗಿದೆ ಅಂದರೇನು ಮನುಷ್ಯನಿಗೆ ಕರ್ಮಮಾಡುವುದು ಸ್ವಭಾವ ಸಿದ್ಧವಾದುದಾಗಿ ಕ್ಲಿಪ್ತವಾಗಿದೆ ಹೀಗೆ ನಿಯತವಾಗಿರುವುದರಿಂದ ಕರ್ಮವು ಸಹಜವಾಗಿ ಆಚರಿಸಲು ಯೋಗ್ಯವಾಗಿ ಸುಖಸಾಧ್ಯವಾದುದಾಗಿದೆ ಮತ್ತು ಅದರಿಂದ ಪ್ರಮಾದವುಂಟಾಗುವ ಭಯವೂ ಇಲ್ಲ

ಆದ್ದರಿಂದ ನೀನು ಕರ್ಮವನ್ನೇ ಮಾಡು (ಕರ್ಮಯೋಗವನ್ನೇ ಅನುಷ್ಠಿಸು) ಎಂದು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶ ಮಾಡಿದ್ದಾನೆ

ಅಕರ್ಮಕ್ಕಿಂತ ಅಂದರೆ ಜ್ಞಾನನಿಷ್ಠೆಗಿಂತ ಕರ್ಮಯೋಗವೇ ಶ್ರೇಷ್ಠವಾದುದಾಗಿದೆ ಅದು ಹೇಗೆಂದರೆ (I) ಜ್ಞಾನನಿಷ್ಠಾದಿಕಾರಿಗೆ ಮೊದಲಿನಿಂದ ಜ್ಞಾನನಿಷ್ಠೆಯಲ್ಲಿ ಅಭ್ಯಾಸವಿಲ್ಲದೇ ಇರುವುದರಿಂದ ಅದು ಅನಿಯತವಾದ ಅಭ್ಯಾಸವಾಗಿದೆ ಇದು ಮನುಷ್ಯನ ಸ್ವಭಾವ ಸಿದ್ಧವಾದ ಅಭ್ಯಾಸವಲ್ಲ ಆದ್ದರಿಂದ ಅದು ಅಂದರೆ ಜ್ಞಾನನಿಷ್ಠ ಸಾಧನೆಯು ಕಷ್ಟಕರವಾದುದಾಗಿದೆ ಮತ್ತು ಅದರಲ್ಲಿ ಪ್ರಮಾದವುಂಟಾಗುವ ಭಯವೂ ಇದೆ. ಆದರೆ ಕರ್ಮವು ಸಹಜವಾಗಿ ಅಭ್ಯಾಸವಾಗಿರುವುದರಿಂದಲೂ ಸುಲಭವಾಗಿ ಆಚರಿಸಲು ಯೋಗ್ಯವಾಗಿರುವುದರಿಂದಲೂ, ಅದು ನಿಯತವೂ, ಸುಖಕರವೂ ಪ್ರಮಾದ ರಹಿತವೂ ಆಗಿದೆ ಈ ಕಾರಣದಿಂದ ಕರ್ಮಯೋಗವೇ ಶ್ರೇಷ್ಠವೆನ್ನಬಹುದು. (II) ಕರ್ಮ ಮಾಡುವಾಗ ಆತ್ಮನ ಯಥಾರ್ಥ ಜ್ಞಾನದ ಮೂಲಕ ಅಕರ್ತೃತ್ವಾನುಸಂಧಾನವು ಮಾಡಬೇಕೆಂದು ಮುಂದೆ ಹೇಳಲ್ಪಡುತ್ತದೆ ಆ ಕಾರಣದಿಂದ ಕರ್ಮಯೋಗದಲ್ಲಿ ಆತ್ಮಜ್ಞಾನವು ಕೂಡ ಅಂತರ್ಗತವಾಗಿದೆ. ಹೀಗೆ ಕರ್ಮಯೋಗದಲ್ಲಿಯೂ ಕೂಡ ಆತ್ಮನ ಅಕರ್ತೃತ್ವ ಭಾವನೆಯ ಮೂಲಕ (ತಾನು ಸ್ವತಂತ್ರ ಕರ್ತೃವಲ್ಲವೆಂಬ ಭಾವನೆ) ಆತ್ಮನಯಥಾರ್ಥ ಸ್ವರೂಪದ ಅನುಸಂಧಾನವು ಅಂತರ್ಭೂತವಾಗಿ ಅಡಗಿರುವುದರಿಂದ ಕರ್ಮಯೋಗವೇ ಶ್ರೇಷ್ಠವು. ಅದರಲ್ಲಿ ಜ್ಞಾನಯೋಗ ಅಭ್ಯಾಸವೂ ಅಡಗಿದೆ

(III) ಸಮಸ್ತ ಕರ್ಮಗಳನ್ನೂ ಪರಿತ್ಯಜಿಸಿ, ಜ್ಞಾನನಿಷ್ಠೆಯಲ್ಲಿ ಯೋಗ್ಯತೆ ಹೊಂದಿ, ಕೇವಲ ಜ್ಞಾನನಿಷ್ಠೆಯನ್ನೇ ಸ್ವೀಕರಿಸಿರುವ ಜ್ಞಾನ ನಿಷ್ಠನಿಗೂ ಕೂಡ, ಅವನ ಜ್ಞಾನನಿಷ್ಠೆಗೆ ಸಹಕಾರಿಯಾದ ಶರೀರ ಪೋಷಣಾದಿ ಶರೀರ ಯಾತ್ರೆಯು ಸಿದ್ಧಿಸಬೇಕಾದರೆ ಅವನು ಕರ್ಮಮಾಡಲೇಬೇಕಾಗುತ್ತದೆ. ಸಾಧನವು ಸಂಪೂರ್ಣವಾಗುವವರೆಗೂ ಶರೀರಧಾರಣೆಯು ಅವಶ್ಯಕ. ಶರೀರ ಸಂರಕ್ಷಣೆಗೆ ಅವನು ನ್ಯಾಯವಾಗಿ ಧನವನ್ನು ಸಂಪಾದಿಸಿ, ಅದರ ಮೂಲಕ ಮಹಾಯಜ್ಞಾದಿಗಳನ್ನು ಮಾಡಿ, ಯಜ್ಞಶೇಷವಾದ ಅನ್ನಾದಿ ಆಹಾರವನ್ನು ಸೇವಿಸಬೇಕು. "ಆಹಾರ ಶುದ್ಧಿಯಿಂದ ಅಂತಃಕರಣಶುದ್ಧಿ ಉಂಟಾಗುತ್ತದೆ, ಅಂತಃಕರಣ ಶುದ್ಧಿಯಿಂದ ನಿಶ್ಚಿತವಾದ ನಿರಂತರವಾದ ಸ್ಮರಣೆ ಉಂಟಾಗುತ್ತದೆ" ಎಂದು ಶ್ರುತಿವಾಕ್ಯವೂ ಇದೆ ಆದ್ದರಿಂದ ಜ್ಞಾನನಿಷ್ಠನಾದ ಪುರುಷನಿಗೂ ಕೂಡ ಕರ್ಮ ಮಾಡದೇ ಶರೀರ ಯಾತ್ರೆಯು ಸಿದ್ಧಿಸುವುದಿಲ್ಲ ಅವನು ಶರೀರವನ್ನು ಧರಿಸಿರುವುದರಿಂದ ಅವನ ಸಾಧನೆಯು ಸಂಪೂರ್ಣವಾಗಿ ಮುಕ್ತಾಯಗೊಳ್ಳುವವರೆಗೂ ಮಹಾಯಜ್ಞವೇ ಮೊದಲಾದ ನಿತ್ಯನೈಮಿತ್ತಿಕ ಕರಗಳು ಅವಶ್ಯಕವಾಗಿ ಮಾಡತಕ್ಕವಾಗಿವೆ

ಈ ಕಾರಣಗಳಿಂದ ಜ್ಞಾನನಿಷ್ಠೆಗೆ ಯೋಗ್ಯತೆಯುಳ್ಳ (ಸಮರ್ಥನಾದ) ಪುರುಷನಿಗೂ ಕೂಡ ಜ್ಞಾನಯೋಗಕ್ಕಿಂತ ಕರ್ಮಯೋಗವೇ ಶ್ರೇಷ್ಠವಾದುದು. ಆದ್ದರಿಂದ ನೀನು ಮೊದಲು ಕರ್ಮಯೋಗವನ್ನೇ ಮಾಡು ಎಂದು ಉಪದೇಶ ಮಾಡಿದ್ದಾರೆ.

**(2) ಯಜ್ಞಾದಿಕರ್ಮಗಳನ್ನು ಆಸಕ್ತಿರಹಿತನಾಗಿ ಮಾಡಬೇಕು ಶ್ಲೋಕಗಳು 9ರಿಂದ 16)**

ಯಜ್ಞವೆಂದರೆ ಪರಮಾತ್ಮನ ಆರಾಧನೆ ಎಂದು ಅರ್ಥ. ಪರಮಪುರುಷನ ಆರಾಧನೆ ಎಂಬ ಪೂಜ್ಯಭಾವನೆಯಿಂದ ಸತ್ ಕರ್ಮಗಳನ್ನು ಸ್ವಾರ್ಥತೆಯಿಲ್ಲದೆ ಆಸಕ್ತಿರಹಿತನಾಗಿ ಮಾಡ ಬೇಕು ಎಂದು ಅಭಿಪ್ರಾಯ.

(1) ಯಜ್ಞಾದಿಕರ್ಮಗಳನ್ನು ಆಸಕ್ತಿರಹಿತನಾಗಿ ಮಾಡಿದರೆ ಕರ್ಮಬಂಧನವಿರುವುದಿಲ್ಲ. (ಶ್ಲೋಕ 9)

**ಶ್ಲೋಕ 9**—ಯಜ್ಞಾರ್ಥವಾಗಿ ಮಾಡಿದ ಕರ್ಮಗಳಲ್ಲದೆ ಬೇರೆ ಕರ್ಮಗಳಲ್ಲಿ ನಿರತರಾದ ಈ ಲೋಕದ ಜನರು ಕರ್ಮದಿಂದ ಬಂಧಿತರಾಗುತ್ತಾರೆ. ಎಲೈ ಅರ್ಜುನನೇ ಆ ಯಜ್ಞಾರ್ಥವಾದ ಕರ್ಮಗಳನ್ನೂ ಸಂಗರಹಿತನಾಗಿ ಅನುಷ್ಠಿಸು".

ದ್ರವ್ಯಾರ್ಜನೆ ಮೊದಲಾದ ಕರ್ಮಗಳಲ್ಲಿ ಅಹಂಕಾರ ಮಮಕಾರಾದಿ ಸಮಸ್ತ ಇಂದ್ರಿಯಗಳ ವ್ಯಾಕುಲತೆಯು ಅಡಗಿದೆ. ಆದ್ದರಿಂದ ಪುರುಷನಿಗೆ ಆ ಕರ್ಮಗಳನ್ನು ಮಾಡುವುದರಿಂದ ಕರ್ಮವಾಸನೆಯುಂಟಾಗಿ ಅದರ ಮೂಲಕ ಕರ್ಮಬಂಧನವು ಉಂಟಾಗುತ್ತದೆಯಲ್ಲವೇ ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ಹೇಳುತ್ತಾರೆ. ಮನುಷ್ಯರು ಶಾಸ್ತ್ರೀಯ ಕರ್ಮಗಳಿಗೆ ಅಂಗವಾಗಿ ದ್ರವ್ಯಾರ್ಜನೆ ಮೊದಲಾದ ಕರ್ಮಗಳನ್ನು ಮಾಡದೆ ಇತರ ಸ್ವಪ್ರಯೋಜನಕ್ಕೆ ಅಂಗವಾಗಿ ಕರ್ಮಗಳನ್ನು ಮಾಡಿದರೆ ಕರ್ಮಬಂಧನಕ್ಕೆ ಒಳಗಾಗುತ್ತಾರೆ. ಆದ್ದರಿಂದ ನೀನು ಯಜ್ಞಾದಿಗಳಿಗಾಗಿ ದ್ರವ್ಯಾರ್ಜನೆ ಮೊದಲಾದ ಕರ್ಮಗಳನ್ನು ಚೆನ್ನಾಗಿ ಆಚರಿಸು. ಆದರೆ ಅಗಲೂ ಕೂಡ ಆತ್ಮ ಪ್ರಯೋಜನಕ್ಕೆ ಸಂಬಂಧಪಟ್ಟ ಯಾವ ಆಸಕ್ತಿಯಿದೆಯೋ ಆ ಆಸಕ್ತಿಯಿಂದ ರಹಿತನಾಗಿ ಕರ್ಮವನ್ನು ಆಚರಿಸು. ಹೀಗೆ ಸಂಗರಹಿತನಾಗಿ ಯಜ್ಞಾದಿಗಳಿಗಾಗಿ (ಪರಮಾತ್ಮನ ಪೂಜೆಗಾಗಿ) ಕರ್ಮಗಳು ಮಾಡಲ್ಪಟ್ಟರೆ, ಆ ಯಜ್ಞಾದಿ ಕರ್ಮಗಳಿಂದ ಆರಾಧಿಸಲ್ಪಟ್ಟ ಪರಮ ಪುರುಷನು ಅನಾದಿಕಾಲದಿಂದ ಉಂಟಾಗಿರುವ ಇವನ ಕರ್ಮವಾಸನೆಗಳನ್ನು ಹೋಗಲಾಡಿಸಿ, ಇಂದ್ರಿಯಗಳ ವ್ಯಾಕುಲತೆಯಿಲ್ಲದ ಆತ್ಮಸಾಕ್ಷಾತ್ಕಾರವನ್ನು ಕೊಡುತ್ತಾನೆ ಎಂದು ಅರ್ಥ.

(ii) ಯಜ್ಞಾದಿಕರ್ಮಗಳಿಂದ ಪರಮಾತ್ಮನನ್ನು ಆರಾಧಿಸಬೇಕು ಮತ್ತು ಯಜ್ಞಶೇಷವಾದ ಅನ್ನಾದಿ ಆಹಾರ ಸೇವನೆಯಿಂದ ದೇಹಧಾರಣೆ ಮಾಡಬೇಕು—(ಶ್ಲೋಕಗಳು - 10, 11, 12, 13) ಪುರುಷಾರ್ಥವನ್ನು ಸಾಧಿಸಬೇಕೆಂಬ ಪುರುಷರು ಯಜ್ಞಶೇಷವಾದ (ಯಜ್ಞಾದಿ ಪೂಜೆಗಳಿಂದ ಭಗವಂತನಿಗೆ ಅರ್ಪಿತವಾದ) ಅನ್ನಾದಿ ಆಹಾರಗಳ ಮೂಲಕ ಶರೀರಧಾರಣೆ ಮಾಡತಕ್ಕದ್ದು ಮತ್ತು ಯಜ್ಞಶೇಷವಲ್ಲದ ಅನ್ನಾದಿಗಳಿಂದ ಅಂದರೆ ಕಾಮೋಪಭೋಗಕ್ಕಾಗಿ ಸಂಪಾದಿಸಿದ ದ್ರವ್ಯಾದಿಗಳ ಮೂಲಕ ಶರೀರಧಾರಣೆ ಮಾಡುವುದು ದೋಷಕರವಾದುದು ಎಂಬುದನ್ನು ಈ ಶ್ಲೋಕಗಳಲ್ಲಿ ತಿಳಿಸಿದ್ದಾರೆ

**ಶ್ಲೋಕಗಳು 10 ಮತ್ತು 1**

"ಸ್ವಾಮಿಯಾದ ಸರ್ವೇಶ್ವರನು ಯಜ್ಞಗಳೊಂದಿಗೆ ಪ್ರಜೆಗಳನ್ನು ಹಿಂದೆ ಸೃಷ್ಟಿಸಿ ಹೀಗೆ ಹೇಳಿದನು—"ಈ ಯಜ್ಞಗಳ ಮೂಲಕ ವೃದ್ಧಿಯನ್ನು ಪಡೆಯುವಿರಿ ಈ ಯಜ್ಞವು ಇಷ್ಟಾರ್ಥಗಳನ್ನು ಕೊಡುವ ಕಾಮಧೇನುವಾಗಲಿ ಈ ಯಜ್ಞಗಳಿಂದ ದೇವತೆಗಳನು ಪ್ರೀನಿಸಿ ಆರಾಧಿಸಿರಿ. ಆ ದೇವತೆಗಳು

ನಿಮ್ಮನ್ನು ಪ್ರೀತಿಸಿ ಪೋಷಿಸಲಿ. ಹೀಗೆ ಪರಸ್ಪರ ಪ್ರೀತಿಯಿಂದ ಒಬ್ಬರನ್ನೊಬ್ಬರು ಸಂತೋಷಗೊಳಿಸಿ, ನೀವಿಬ್ಬರೂ ಪರಮ ಶ್ರೇಯಸ್ಸನ್ನು ಹೊಂದುವಿರಿ.

ಪರಮ ದಯಾಳುವಾದ ಸಕಲ ಪ್ರಜೆಗಳಿಗೂ ಸ್ವಾಮಿಯಾದ ಶ್ರೀಮನ್ನಾರಾಯಣನು ಮೊದಲು ಅಂದರೆ ಪ್ರಳಯ ಕಾಲದಲ್ಲಿ ಅನಾದಿ ಕಾಲದಿಂದ ಅನುಸರಿಸಿ ಬಂದಿರುವ ಜಡ ಪ್ರಕೃತಿ ಸಂಬಂಧವನ್ನು ಪಡೆದವರಾಗಿ, ಆ ಕಾರಣದಿಂದ ಪರತಂತ್ರರಾಗಿರುವ, ಯಾವ ನಾಮರೂಪಗಳನ್ನೂ ಪಡೆಯದ ಅವ್ಯಕ್ತವಾದ ಅವಸ್ಥೆಯನ್ನು ಹೊಂದಿರುವ, ಭಗವಂತನಾದ ತನ್ನಲ್ಲಿಯೇ ಲಯವಾಗಿರುವ, ಯಾವ ಪುರುಷಾರ್ಥವನ್ನೂ ಸಾಧಿಸಲು ಅನರ್ಹರಾಗಿರುವ ಮತ್ತು ಅಚೇತನ ವಸ್ತುಗಳಿಗೆ ಸಮನಾಗಿರುವ ಪ್ರಜೆಗಳನ್ನು ನೋಡಿ ಅತ್ಯಂತ ಕನಿಕರ ಹೊಂದಿ, ಆ ಪ್ರಜೆಗಳನ್ನು ಉಜ್ಜೀವಿಸುವಂತೆ ಮಾಡಬೇಕೆಂಬ ಇಚ್ಛೆಯಿಂದ ಅವರನ್ನು ಸೃಷ್ಟಿಸಿದನು ಅವರನ್ನು ಸೃಷ್ಟಿಸುವಾಗ ಅವರೊಂದಿಗೆ ತನ್ನ ಆರಾಧನ ರೂಪವಾದ ಯಜ್ಞಗಳನ್ನು ಮಾಡಿ ಅವರು ಉಜ್ಜೀವಿಸಲೆಂದು ಯಜ್ಞಗಳನ್ನೂ ಸೃಷ್ಟಿಸಿದನು ಈ ರೀತಿಯಾಗಿ ಯಜ್ಞಗಳೊಂದಿಗೆ ಪ್ರಜೆಗಳನ್ನು ಸೃಷ್ಟಿಸಿ ಹೀಗೆ ಹೇಳಿದನು "ನೀವು ನಿಮ್ಮ ಉನ್ನತಿಯನ್ನು ಮಾಡಿಕೊಳ್ಳಿರಿ ಈ ಯಜ್ಞವು ನಿಮಗೆ ಪರಮ ಪುರುಷಾರ್ಥ ರೂಪವಾದ ಮೋಕ್ಷವೆಂಬ ಇಷ್ಟಾರ್ಥವನ್ನೂ ಮತ್ತು ಅದಕ್ಕೆ ಅನುಕೂಲವಾದ (ಸಹಕಾರಿಯಾದ) ಸಮಸ್ತ ಇಷ್ಟಾರ್ಥಗಳನ್ನು ಪೂರ್ಣಗೊಳಿಸುವಂತಹುದಾಗಲಿ. ಅದು ಹೇಗೆಂದರೆ–ನಾನು ಸಮಸ್ತ ಯಜ್ಞಗಳ ಭೋಕ್ತೃವೂ ಪ್ರಭುವೂ ಆಗಿದ್ದೇನೆ ಎಂದು ಮುಂದೆ ಗೀತೆಯಲ್ಲಿ ಹೇಳಿದೆ. ಹೀಗೆ ನನಗೆ ಶರೀರ ಭೂತರಾದ ಮತ್ತು ನನ್ನನ್ನು ಆತ್ಮನಾಗಿ ಹೊಂದಿರುವ ಈ ದೇವತೆಗಳನ್ನು ಈ ದೇವತಾರಾಧನ ರೂಪವಾದ ಯಜ್ಞಗಳ ಮೂಲಕ ನೀವು ಆರಾಧಿಸಿರಿ. ಯಜ್ಞದಿಂದ ಆರಾಧಿಸಲ್ಪಟ್ಟ ನನ್ನನ್ನು ಆತ್ಮನನ್ನಾಗಿ ಪಡೆದಿರುವ ಆ ದೇವತೆಗಳು ತಮ್ಮ ಆರಾಧನೆಗೆ ಬೇಕಾದ ಅನ್ನ ಪಾನಾದಿಗಳಿಂದ ನಿಮ್ಮನ್ನು ಪೋಷಿಸಲಿ ಹೀಗೆ ಪರಸ್ಪರ ಪೋಷಣೆಯಿಂದ ನೀವು ಮೋಕ್ಷವೆಂಬ ಪರಮ ಶ್ರೇಯಸ್ಸನ್ನು ಪಡೆಯುವಿರಿ"

**ಶ್ಲೋಕ 12**—"ಯಜ್ಞದಿಂದ ಆರಾಧಿಸಲ್ಪಟ್ಟ ದೇವತೆಗಳು ನಿಮಗೆ ಇಚ್ಛಿತ ಭೋಗಗಳನ್ನು ಅವಶ್ಯವಾಗಿ ಕೊಡುತ್ತಾರೆ ಯಾವನು ಅದರಿಂದ ಕೊಡಲ್ಪಟ್ಟ ಭೋಗಗಳನ್ನು ಅವರಿಗೆ ಸಮರ್ಪಿಸದೆ ಅನುಭವಿಸುತ್ತಾನೆಯೋ ಅವನು ಕಳ್ಳನೇ ಸರಿ."

ಯಜ್ಞಗಳ ಮೂಲಕ ಆರಾಧಿಸಲ್ಪಟ್ಟ ನನ್ನನ್ನು ಆತ್ಮನನ್ನಾಗಿ ಉಳ್ಳ ದೇವತೆಗಳು ನಿಮಗೆ ಇಷ್ಟವಾದ ಭೋಗಗಳನ್ನು ಕೊಡುತ್ತಾರೆ. ಅಂದರೆ ಹಿಂದೆ ಹಿಂದೆ ಆಚರಿಸಲ್ಪಟ್ಟ ಯಜ್ಞಗಳಿಂದ ಸುಪ್ರೀತರಾದ ದೇವತೆಗಳು ಪರಮ ಪುರುಷಾರ್ಥವಾದ ಮೋಕ್ಷವನ್ನು ಸಾಧಿಸಬೇಕೆಂದಿರುವ ನಿಮಗೆ ಇಷ್ಟವಾದ ಯಾವ ಭೋಗಗಳುಂಟೋ ಅವುಗಳನ್ನು ಕೊಡುತ್ತಾರೆ ಅವರ ಮುಂದಿನ ಆರಾಧನೆಗೆ ಅವಶ್ಯವಾದ ಸಮಸ್ತ ಭೋಗಗಳನ್ನೂ ಅವರು ಕೊಡುತ್ತಾರೆ–ಎಂದು ಅರ್ಥ. ತಮ್ಮ ಆರಾಧನೆಗಾಗಿ ಅವರಿಂದ ಕೊಡಲ್ಪಟ್ಟ ಭೋಗಗಳನ್ನು ಅವರಿಗೆ ಕೊಡದೆ ಭೋಗಿಸುವವನು ನಿಜವಾಗಿ ಕಳ್ಳನೇ ಸರಿ ಇತರರ ಉಪಯೋಗಕ್ಕಾಗಿ ನಿರ್ಮಾಣವಾಗಿರುವ ಇತರದಾದ ವಸ್ತುಗಳನ್ನು ತನ್ನದೆಂದು ಭಾವಿಸಿಕೊಂಡು ಅದರಿಂದ ತನ್ನ ಸ್ವಂತ ಪೋಷಣೆ ಮಾಡಿಕೊಳ್ಳುವುದೇ ಕಳ್ಳತನವು. ಆದ್ದರಿಂದ ಹೀಗೆ ಯಜ್ಞಾದಿಗಳನ್ನು ಮಾಡದೆ ಕಳ್ಳನಾಗಿರುವುದರಿಂದ ಈತನು ಪರಮ ಪುರುಷಾರ್ಥವಾದ ಮೋಕ್ಷಕ್ಕೆ ಅಯೋಗ್ಯನಾಗುವುದು ಮಾತ್ರವಲ್ಲದೆ ನರಕಕ್ಕೂ ಹೋಗಬೇಕಾಗುವುದು ಎಂದು ಅಭಿಪ್ರಾಯವು.

**ಶ್ಲೋಕ 13**—"ಯಜ್ಞಶೇಷವಾದ ಅನ್ನವನ್ನು ಭುಜಿಸುವ ಸತ್ಪುರುಷರು ಸಮಸ್ತ ಪಾಪಗಳಿಂದ ಬಿಡಲ್ಪಟ್ಟವರಾಗುವರು ಯಾವ ಪಾಪಿಷ್ಟರು ಕೇವಲ ತಮಗಾಗಿ ಮಾತ್ರ ಅಡಿಗೆ ಮಾಡಿಕೊಳ್ಳುವರೋ ಅವರಾದರೋ ಪಾಪವನ್ನೇ ಭುಜಿಸುವರು"

ಇಂದ್ರಾದಿ ದೇವತೆಗಳಿಗೆಲ್ಲಾ ಆತ್ಮನಾಗಿ ಇರುವ ಪರಮ ಪುರುಷನ ಆರಾಧನೆಗೋಸ್ಕರವಾಗಿಯೇ ದ್ರವ್ಯಗಳನ್ನು ಸಂಗ್ರಹಿಸಿಕೊಂಡು ಅಡಿಗೆ ಮಾಡಿ (ಅವುಗಳಿಂದ ಯಥಾವತ್ತಾಗಿ ಪರಮ ಪುರುಷನಾಗಿರುವವನನ್ನು ಆರಾಧಿಸಿ ಅದರಿಂದ ಮಿಕ್ಕಿರುವ ಆಹಾರವನ್ನು ಸೇವಿಸಿ ಶರೀರ ಯಾತ್ರೆಯನ್ನು ಮಾಡುವವರಾದರೋ ಆತ್ಮ 'ಯಾಥಾತ್ಮ್ಯ' ದರ್ಶನಕ್ಕೆ ವಿರೋಧಿಗಳಾದ, ಅನಾದಿ ಕಾಲದಿಂದಲೂ ಉಪಾರ್ಜಿತವಾಗಿ ಪ್ರಾಪ್ತವಾಗಿರುವ ಸಮಸ್ತ ಪಾಪಗಳಿಂದಲೂ ಬಿಡಲ್ಪಟ್ಟವರಾಗುತ್ತಾರೆ ಆದರೆ ಯಾರು ಇಂದ್ರಾದಿಗಳಿಗೆ ಆತ್ಮನಾದ ಪರಮಪುರುಷನಿಂದ ಅವನ ಆರಾಧನೆಗಾಗಿ ಕೊಟ್ಟಿರುವ ವಸ್ತುಗಳನ್ನು ತನ್ನ ಸ್ವಂತಕ್ಕಾಗಿ

ಉಂಟಾದುದೆಂದು ಭಾವಿಸಿ, ಅವುಗಳಿಂದ ಅಡಿಗೆ ಮಾಡಿಸಿ ಭುಜಿಸುತ್ತಾರೋ ಅವರು ಪಾಪಾತ್ಮರು, ಪಾಪವನ್ನೇ ತಿನ್ನುತ್ತಾರೆ. ಪರಿಣಾಮದಲ್ಲಿ ಪಾಪವನ್ನು ಉಂಟುಮಾಡುವುದರಿಂದ ಇದನ್ನು ಅಂದರೆ ಈ ಭೋಜನವನ್ನು ಪಾಪವೆಂದು ಹೇಳುತ್ತಾರೆ. ಆತ್ಮಸಾಕ್ಷಾತ್ಕಾರಕ್ಕೆ ವಿಮುಖರಾದವರು ನರಕ ಹೊಂದುವುದಕ್ಕಾಗಿಯೇ ಅಡಿಗೆ ಮಾಡಿ ಊಟ ಮಾಡುತ್ತಾರೆಯೋ ಎನ್ನುವಂತಿದೆ ಅಂದರೇನು ನರಕಕ್ಕೆ ತಯಾರಾಗುವ ಕೆಲಸವನ್ನು ಮಾಡುತ್ತಾರೆಯೋ ಎನ್ನುವಂತಿದೆ.

(III) ಸಮಸ್ತಕ್ಕೂ ಯಜ್ಞವೇ ಮೂಲಕಾರಣವಾದುದು ಮತ್ತು ಯಜ್ಞವನ್ನು ಅನುಸರಿಸಿ ನಡೆಯುವುದು ಒಳ್ಳೆಯದು ಮತ್ತು ಅದನ್ನು ಅನುಸರಿಸದೇ ನಡೆಯುವುದು ದೋಷಕರವಾದುದು (ಶ್ಲೋಕಗಳು 14, 15, 16)

**ಶ್ಲೋಕ 14, 15**—"ಅನ್ನದಿಂದ ಪ್ರಾಣಿಗಳು ಉಂಟಾಗುತ್ತವೆ ಅನ್ನವು ಮೇಘದಿಂದ (ಮಳೆಯಿಂದ) ಉಂಟಾಗುತ್ತದೆ ಮಳೆಯು ಯಜ್ಞದಿಂದ ಉಂಟಾಗುತ್ತದೆ ಮತ್ತು ಯಜ್ಞವು ಕರ್ಮದಿಂದ ಉಂಟಾಗುತ್ತದೆ"-"ಕರ್ಮವನ್ನು ಬ್ರಹ್ಮನಿಂದ (ಸಜೀವ ಶರೀರದಿಂದ) ಉತ್ಪನ್ನವಾದುದೆಂದು ತಿಳಿ ಶರೀರವು ಅಕ್ಷರದಿಂದ (ಜೀವಾತ್ಮನಿಂದ, ಉತ್ಪನ್ನವಾದುದಾಗಿರುತ್ತವೆ ಆದ್ದರಿಂದ ಸರ್ವಗತವಾದ ಬ್ರಹ್ಮವು (ಸರ್ವ ಅಧಿಕಾರಗಳನ್ನೂ ಹೊಂದಿರುವ ಶರೀರವು) ಸರ್ವದಾ ಯಜ್ಞದಲ್ಲಿ ಪ್ರತಿಷ್ಠಿತವಾದುದಾಗಿದೆ"–

ಅನ್ನದಿಂದ ಸಮಸ್ತಭೂತಗಳೂ ಉಂಟಾಗುತ್ತವೆ ಎಂಬುದೂ ಮತ್ತು ಮಳೆಯಿಂದ ಅನ್ನವು ಉಂಟಾಗುತ್ತವೆ ಎಂಬುದೂ ನಮ್ಮ ಪ್ರತ್ಯಕ್ಷ ಅನುಭವದಲ್ಲಿದೆ ಯಜ್ಞದಿಂದ ಮಳೆಯು ಉಂಟಾಗುತ್ತವೆ ಎಂಬುದು ನಮ್ಮ ಪ್ರತ್ಯಕ್ಷ ಪ್ರಮಾಣಕ್ಕೆ ಗೋಚರವಾಗುವುದಿಲ್ಲ ಅದನ್ನು ನಾವು ಶಾಸ್ತ್ರದಿಂದ ತಿಳಿಯಬೇಕಾಗುತ್ತದೆ. ಅದನ್ನು ತಿಳಿಸುವ ಶ್ರುತಿ ವಾಕ್ಯಗಳಿವೆ. ಯಜ್ಞವು ಅದರ ಕರ್ತೃವಾದ ಪುರುಷನ ದ್ರವ್ಯಾರ್ಜನೆಯೇ ಮೊದಲಾದ ವ್ಯಾಪಾರ ರೂಪವಾದ ಕರ್ಮದಿಂದ ಉಂಟಾಗುತ್ತವೆ

ಕರ್ಮವು ಬ್ರಹ್ಮನಿಂದ ಉಂಟಾದುದು ಇಲ್ಲಿ ಬ್ರಹ್ಮ ಶಬ್ದವು ಪ್ರಕೃತಿಯ ಪರಿಣಾಮ ರೂಪವಾದ ಶರೀರವನ್ನು ನಿರ್ದೇಶಿಸುತ್ತದೆ." ತಸ್ಮಾದೇತದ್ ಬ್ರಹ್ಮನಾಮರೂಪ ಮನ್ನಂಚ ಜಾಯತೇ"–ಎಂದು ಶ್ರುತಿಯಲ್ಲಿಯೂ ಮತ್ತು "ಮಮ ಯೋನಿ ರ್ಮಹದ್ಬ್ರಹ್ಮ" ಎಂದು ಗೀತೆಯಲ್ಲಿಯೂ ಇದಕ್ಕೆ ಆಧಾರವಾದ ವಾಕ್ಯಗಳಿವೆ. ಆದ್ದರಿಂದ ಕರ್ಮವು ಬ್ರಹ್ಮನಿಂದ ಉಂಟಾದುದು. ಅಂದರೆ ಪ್ರಕೃತಿಯ ಪರಿಣಾಮ ರೂಪವಾದ ಶರೀರದಿಂದ ಕರ್ಮವು ಉತ್ಪನ್ನವಾಗುತ್ತದೆ ಎಂದು ಹೇಳಿದ ಹಾಗಾಯಿತು. ಬ್ರಹ್ಮವು ಅಕ್ಷರದಿಂದ ಉತ್ಪನ್ನವಾಗುತ್ತದೆ ಎನ್ನುವಾಗ ಅಕ್ಷರ ಶಬ್ದದಿಂದ ಜೀವಾತ್ಮನು ಹೇಳಲ್ಪಟ್ಟಿದ್ದಾನೆ. ಅನ್ನಪಾನಾದಿಗಳಿಂದ ತೃಪ್ತನಾಗುವ ಜೀವಾತ್ಮನಿಂದ ಆಶ್ರಯಿಸಲ್ಪಟ್ಟ ಶರೀರವು ಕರ್ಮಮಾಡುವ ಸಾಮರ್ಥ್ಯ ಹೊಂದುತ್ತದೆ. ಹೀಗೆ ಕರ್ಮಕ್ಕೆ ಸಾಧನವಾದ ಶರೀರವು ಜೀವಾತ್ಮನಿಂದ ಉಂಟಾಗುತ್ತದೆ ಆದ್ದರಿಂದ ಸರ್ವಗತವಾದ ಶರೀರವು ಅಂದರೆ ಸಮಸ್ತಕ್ಕೂ ಅಧಿಕಾರಿಯಾದ ಚೇತನನನ್ನು ಹೊಂದಿರುವ ಶರೀರವು ಸರ್ವದಾ (ಯಾವಾಗಲೂ) ಯಜ್ಞದಲ್ಲಿ ಪ್ರತಿಷ್ಠಿತವಾಗಿದೆ ಅಂದರೆ ಯಜ್ಞದ ಮೂಲಕ ಉಂಟಾದುದು ಎಂದು ಅರ್ಥ.

**ಶ್ಲೋಕ 16**—"ಯಾವನು ಈ ರೀತಿಯಾಗಿ ಪ್ರವರ್ತಿಸಲ್ಪಟ್ಟ ಚಕ್ರವನ್ನು ಇಲ್ಲಿ (ಈ ಲೋಕದಲ್ಲಿ) ಅನುಸರಿಸಿ ನಡೆಯುವುದಿಲ್ಲವೋ ಅಂತಹವನು ಪಾಪ ಮಾಡುವುದಕ್ಕಾಗಿಯೇ ಆಯುಸ್ಸುಳ್ಳವನಾಗಿ, ಇಂದ್ರಿಯಗಳಲ್ಲಿಯೇ ವಿಹರಿಸುವವನಾಗಿ, ವ್ಯರ್ಥವಾಗಿ ಜೀವಿಸುತ್ತಾನೆ."

ಈ ರೀತಿಯಾಗಿ ಪರಮ ಪುರುಷನಿಂದ ಪ್ರವರ್ತಿಸಲ್ಪಟ್ಟ ಚಕ್ರವು-ಅಂದರೆ ಜೀವನೊಂದಿಗೆ ಇರುವ ಶರೀರಗಳು ಅನ್ನದಿಂದಲೂ, ಅನ್ನವು ಮಳೆಯಿಂದಲೂ ಮಳೆಯು ಯಜ್ಞದಿಂದಲೂ ಯಜ್ಞವು ಕರ್ತಾವಿನ ವ್ಯಾಪಾರ ರೂಪವಾದ ಕರ್ಮದಿಂದಲೂ, ಕರ್ಮವು ಸಜೀವ ಸಹಿತವಾದ ಶರೀರದಿಂದಲೂ, ಸಜೀವವಾದ ಶರೀರವು ಮತ್ತೆ ಅನ್ನದಿಂದಲೂ ಹೀಗೆ ಅನ್ಯೋನ್ಯವಾದ ಕಾರ್ಯ ಕಾರಣ ಭಾವದಿಂದ ಚಕ್ರದಂತೆ ತಿರುಗುತ್ತಿದೆ. ಮೋಕ್ಷ ಸಾಧನೆಯಲ್ಲಿ ತೊಡಗಿರುವ ಯಾವ ಅಧಿಕಾರಿಯು, ಅವನು ಕರ್ಮಯೋಗಾಧಿಕಾರಿಯಾಗಿರಲಿ, ಜ್ಞಾನಯೋಗಾಧಿಕಾರಿಯಾಗಿರಲಿ, ಈ ಚಕ್ರಕ್ಕೆ ಅನುಸಾರವಾಗಿ ನಡೆಯದೇ ಇದ್ದರೆ, ಅವನು ಯಜ್ಞ ಶೇಷವಾದ ಅನ್ನದಿಂದ ದೇಹಧಾರಣೆ ಮಾಡದೇ ಇರುವುದರಿಂದ ಪಾಪಾಯುವಾಗುವನು ಅಂದರೆ ಅವನ ಆಯುಸ್ಸು ಪಾಪವನ್ನು ಪ್ರಾರಂಭಮಾಡುವುದಕ್ಕಾಗಿ ಇರುವುದರಿಂದಲೂ, ಅವನ ಜೀವನವು ಪಾಪದ ಪರಿಣಾಮದಿಂದ

ಉಂಟಾಗುವುದರಿಂದಲೂ ಎರಡು ಪ್ರಕಾರದಿಂದಲೂ ಅವನು ಪಾಪಾಯುನಾಗಿದ್ದಾನೆ-ಅಂದರೆ ಪಾಪ ಮಾಡುವುದಕ್ಕಾಗಿಯೇ ಆಯುಸ್ಸು ಉಳ್ಳವನಾಗಿರುತ್ತಾನೆ

ಆದರಿಂದ ಅವನು ಇಂದ್ರಿಯಗಳ ಆನಂದದಲ್ಲಿ ಆಸಕ್ತಿ ಉಳ್ಳವನಾಗಿದ್ದಾನೆಯೇ ಹೊರತು ಆತ್ಮಾನಂದದಲ್ಲಿ ಆಸಕ್ತಿ ಉಳ್ಳವನಾಗುವುದಿಲ್ಲ ಇಂದ್ರಿಯಗಳೇ ಅವನಿಗೆ ವಿಹರಿಸಲು ಉದ್ಯಾನವನಗಳಾಗಿವೆ ಅವನ ಶರೀರ ಮನಸ್ಸು ಎರಡೂ ಯಜ್ಞಶೇಷವಾದ ಅನ್ನದಿಂದ ಬೆಳೆದುದಲ್ಲವೇ ಇರುವುದರಿಂದ ಅವನಲ್ಲಿ ರಜೋಗುಣಗಳೂ ತಮೋಗುಣಗಳೂ ಅಭಿವೃದ್ಧಿ ಹೊಂದುತ್ತವೆ. ಆದ್ದರಿಂದ ಅವನು ಆತ್ಮಸಾಕ್ಷಾತ್ಕಾರದಲ್ಲಿ ವಿಮುಖನಾಗಿ ಕೇವಲ ವಿಷಯ ಭೋಗದಲ್ಲಿ ಆಸಕ್ತಿಯುಳ್ಳವನಾಗಿರುತ್ತಾನೆ ಈ ಕಾರಣದಿಂದ ಜ್ಞಾನಯೋಗ ಮೊದಲಾದುವುಗಳಲ್ಲಿ ಅವನು ಪ್ರಯತ್ನಿಸಿದರೂ ಕೂಡ ಅವನ ಪ್ರಯತ್ನಗಳೆಲ್ಲಾ ನಿಷ್ಫಲವಾಗುತ್ತವೆ ಆದ್ದರಿಂದ ಅವನು ವ್ಯರ್ಥವಾಗಿ ಜೀವಿಸುತ್ತಾನೆ

**(3 ಆತ್ಮದರ್ಶನಕ್ಕಾಗಿ ಸಾಧನೆ ಮಾಡುವ ಅವಶ್ಯಕತೆಯಿಲ್ಲದ ಮುಕ್ತ ಪುರುಷನು ಮಾತ್ರ ವರ್ಣಾಶ್ರಮೋಚಿತವಾಗಿ ಕರ್ಮಗಳನ್ನು ಆರಂಭಿಸದೇ ಇರಬಹುದು (ಶ್ಲೋಕಗಳು 17-18)**

**ಶ್ಲೋಕಗಳು 17-18**—"ಯಾವ ಮನುಷ್ಯನು ಆತ್ಮನಲ್ಲಿಯೇ ಪ್ರೀತಿಯುಳ್ಳವನೂ, ಆತ್ಮನಲ್ಲಿಯೇ ತೃಪ್ತಿಯುಳ್ಳವನೂ ಆತ್ಮನಲ್ಲಿಯೇ ಸಂತೋಷವುಳ್ಳವನೂ ಆಗಿದ್ದಾನೆಯೋ ಅವನಿಗೆ ಯಾವ ಕರ್ತವ್ಯವೂ ಇಲ್ಲ" ಈ ಲೋಕದಲ್ಲಿ ಸಾಧನಾನುಷ್ಠಾನಗಳನ್ನು ಮಾಡುವುದರಿಂದ ಅವನಿಗೆ ಯಾವ **ಪ್ರಯೋಜನವೂ ಇಲ್ಲವೇ ಇಲ್ಲ; ಅವುಗಳನ್ನು** ಮಾಡದೇ ಇರುವುದರಿಂದ ಏನೂ (ಹಾನಿ) ಇಲ್ಲ ಮತ್ತು ಅವನಿಗೆ ಸಮಸ್ತ ಭೂತಗಳಿಂದ ಯಾವ ಪ್ರಕಾರದ ಸ್ವಾರ್ಥ ಪ್ರಯೋಜನವುಳ್ಳ ಸಂಬಂಧವೂ ಇಲ್ಲವೇ ಇಲ್ಲ"

ಆತ್ಮಸಾಕ್ಷಾತ್ಕಾರವನ್ನು ಪಡೆದ ಮಹಾತ್ಮನು ತನಗೆ ತಾನೇ ಆತ್ಮದರ್ಶನವನ್ನು ಪಡೆಯುತ್ತಿರುತ್ತಾನೆ. ಅವನು ಜ್ಞಾನಯೋಗ ಕರ್ಮಯೋಗಗಳ ಅವಶ್ಯಕತೆಯಿಲ್ಲದೆ ಸ್ವತಃ ತಾನಾಗಿಯೇ ಆತ್ಮನಲ್ಲಿ ಪ್ರೀತಿಯುಳ್ಳವನಾಗಿ ಅಂದರೆ ಆತ್ಮನಿಗೆ ಅಭಿಮುಖನಾಗಿ, ಆತ್ಮನಲ್ಲಿಯೇ ತೃಪ್ತನಾಗಿ ಅಂದರೆ ಆತ್ಮವ್ಯತಿರಿಕ್ತವಾದ ಅನ್ನಪಾನಾದಿಗಳಲ್ಲಿ ತೃಪ್ತಿ ಹೊಂದದೆ ಆತ್ಮನಲ್ಲಿಯೇ ತೃಪ್ತನಾಗಿ, ಆತ್ಮನಲ್ಲಿಯೇ ಸಂತೋಷವುಳ್ಳವನಾಗಿ ಅಂದರೆ ಉದ್ಯಾನವನ, ಹಾರ, ಚಂದನ, ಸಂಗೀತ, ವಾದ್ಯ, ನೃತ್ಯ ಮುಂತಾದುವುಗಳಿಂದ ಸಂತೋಷ ಹೊಂದದೆ ಆತ್ಮನಲ್ಲಿಯೇ ಸಂತೋಷವುಳ್ಳವನಾಗಿ ಇರುತ್ತಾನೆ ಹೀಗೆ ಯಾವನಿಗೆ ಧಾರಕ ಪೋಷಕ ಮತ್ತು ಭೋಗ್ಯಾದಿ ಸಮಸ್ತ ವಸ್ತುಗಳೂ ಆತ್ಮವೇ ಆಗಿದೆಯೋ ಅವನಿಗೆ ಆತ್ಮಸಾಕ್ಷಾತ್ಕಾರಕ್ಕಾಗಿ ಮಾಡತಕ್ಕ ಕರ್ತವ್ಯವು ಯಾವುದೂ ಇರುವುದಿಲ್ಲ ಏತಕ್ಕೆಂದರೆ ಅವನು ತಾನೇ ತಾನಾಗಿ ಸರ್ವಕಾಲದಲ್ಲಿಯೂ ಆತ್ಮಸ್ವರೂಪ ಸಾಕ್ಷಾತ್ಕಾರವನ್ನು ಹೊಂದಿದ್ದಾನೆ.

ಆತ್ಮಸಾಕ್ಷಾತ್ಕಾರಕ್ಕಾಗಿ ಮಾಡಬೇಕಾದ ಕರ್ಮಯೋಗ ಜ್ಞಾನಯೋಗ ಸಾಧನೆಗಳನ್ನು ಮಾಡುವುದರಿಂದ ಅವರಿಗೆ ಯಾವ ಪ್ರಯೋಜನವೂ ಇಲ್ಲ ಮತ್ತು ಮಾಡದೇ ಇರುವುದರಿಂದ ಯಾವ ಹಾನಿಯೂ ಇಲ್ಲ. ಏಕೆಂದರ ಅವನಿಗೆ ಆತ್ಮಸಾಕ್ಷಾತ್ಕಾರವು ಸಿದ್ಧಿಸಿರುವುದರಿಂದ, ಅವನು ಸಾಧನೆಗಳ ಮೂಲಕ ಸಾಧಿಸಬೇಕಾದುದೂ ಇಲ್ಲ ಅವನು ಸ್ವತಃ ತಾನೇ ಆತ್ಮವ್ಯತಿರಿಕ್ತಗಳಾದ ಸಮಸ್ತ ಅಚಿದ್ವಸ್ತುಗಳಿಂದ ವಿಮುಖನಾಗಿ ರುವುದರಿಂದ, ಅವುಗಳಿಂದ ವಿಮುಖನಾಗುವುದಕ್ಕಾಗಿ ಯಾವ ಸಾಧನೆಯನ್ನೂ ಮಾಡಬೇಕಾಗಿಲ್ಲ ಆದ್ದರಿಂದ ಅವನಿಗೆ ಪ್ರಕೃತಿಯ ಪರಿಣಾಮ ವಿಶೇಷಗಳಾದ (ಆಕಾಶಾದಿ ಸಮಸ್ತ ಭೂತಗಳೊಂದಿಗೂ, ಅವುಗಳ ಕಾರ್ಯಗಳೊಂದಿಗೂ (ಅವುಗಳಿಂದ ಉಂಟಾದ ಪದಾರ್ಥಗಳೊಂದಿಗೂ, ಪ್ರಯೋಜನ ರೂಪದಲ್ಲಿ ಯಾಗಲಿ, ಸಾಧನೆಯ ರೂಪದಲ್ಲಿಯಾಗಲಿ ಯಾವ ಸಂಬಂಧವೂ ಇಲ್ಲ. ಆತನಾದರೋ ಮುಕ್ತನೇ ಆಗಿದ್ದಾನೆ.

**(4) ಆತ್ಮಸಾಕ್ಷಾತ್ಕಾರಕ್ಕೆ ಹೊಂದಿಲ್ಲದ ನಿನಗೆ ಆಸಕ್ತಿ ರಹಿತನಾಗಿ ಕರ್ಮ ಮಾಡುವುದೇ ಶ್ರೇಷ್ಠವಾದ ಮಾರ್ಗ—(ಶ್ಲೋಕ 19)**

**ಶ್ಲೋಕ 19**—"ಮೇಲೆ ಹೇಳಿದ ಕಾರಣಗಳಿಂದ ನೀನು ಸಂಗರಹಿತನಾಗಿ ಯಾವಾಗಲೂ ಕರ್ತವ್ಯವಾದ ಕರ್ಮವನ್ನು ಚೆನ್ನಾಗಿ ಮಾಡುವವನಾಗು. ಪುರುಷನು ಆಸಕ್ತಿರಹಿತನಾಗಿ ಕರ್ಮಮಾಡುತ್ತಾ ಅದರಿಂದಲೇ ಉನ್ನತಿಯನ್ನು ಪಡೆಯುತ್ತಾನೆ"

ಆತ್ಮದರ್ಶನವನ್ನು ಪಡೆದವನಿಗೆ ಸಾಧನೆಯುಳ್ಳಿ ಪವರ್ತನೆಯು ಬೇಕಿಲ್ಲವೆಂದು ಮೇಲೆ ತಿಳಿಸಿದೆವು. ಆದರೆ ಆತ್ಮದರ್ಶನ ಹೊಂದದ ನಿನಗೆ ಕರ್ಮಯೋಗವೇ ಶ್ರೇಷ್ಠವಾದ ಮಾರ್ಗ ಏಕೆಂದರೆ ಇದು ಸುಲಭವಾಗಿ ಆಚರಿಸತಕ್ಕದ್ದಾಗಿದೆ ; ಅನರ್ಥಕಾರಿಯಾದುದಲ್ಲ ; ಇದರಲ್ಲೇ ಆತ್ಮಜ್ಞಾನ ಚಿಂತನೆ ಅಡಗಿರುವುದರಿಂದ ಜ್ಞಾನಯೋಗ ಅಭ್ಯಾಸವೂ ಇದರಲ್ಲಿ ಇದೆ ಎಂಬಿವೇ ಮುಂತಾದ ಕಾರಣಗಳನ್ನು ಹಿಂದೆಯೇ ತಿಳಿಸಿದೆ. ಈ ಕಾರಣಗಳಿಂದ ಬಹು ಮುಂದಿ ಜನರಿಗೆ ಕರ್ಮಯೋಗವೇ ಆತ್ಮದರ್ಶನಕ್ಕೆ ಉತ್ತಮವಾದ ಮಾರ್ಗ.

ಆದ್ದರಿಂದ ಓ ಅರ್ಜುನ ! ನೀನು ಆತ್ಮದರ್ಶನ ಪ್ರಾಪ್ತಿಯಾಗುವವರೆಗೂ ಯಾವಾಗಲೂ ಸಂಗರಹಿತನಾಗಿ, ಕರ್ತವ್ಯವೆಂದು ಭಾವಿಸಿ ಕರ್ಮವನ್ನೇ ಚೆನ್ನಾಗಿ ಮಾಡುವವನಾಗು. ಅನಾಸಕ್ತನಾಗಿ ಯಾವ ಪುರುಷನು ತನ್ನ ಕರ್ತವ್ಯವೆಂದು ಭಾವಿಸಿ ಮೇಲೆ ತಿಳಿಸಿರುವಂತೆ ಅಕರ್ತೃತ್ವಾನುಸಂಧಾನ ದೊಂದಿಗೆ ಕರ್ಮ ಮಾಡುತ್ತಾನೆಯೋ ಅವನು ಕರ್ಮಯೋಗದಿಂದಲೇ ಉನ್ನತಿಯನ್ನು ಹೊಂದುತ್ತಾನೆ. ಅಂದರೆ ಇಲ್ಲಿ ಆತ್ಮನನ್ನು ಹೊಂದುತ್ತಾನೆ ಎಂದು ಅರ್ಥ.

## II ಮುಕ್ತನಾದ ಪುರುಷನೂ ಕೂಡ ಲೋಕಕಲ್ಯಾಣಕ್ಕಾಗ ಕರ್ಮ ಮಾಡಲೇಬೇಕು.

(ಶ್ಲೋಕಗಳು 20 ರಿಂದ 26)

### (I) ಲೋಕಕಲ್ಯಾಣಕ್ಕಾಗಿ ಜನಕಾದಿ ರಾಜಋಷಿಗಳೂ ಕರ್ಮಮಾಡಿದರು

(ಶ್ಲೋಕಗಳು 20-21)

ಮೋಕ್ಷದಲ್ಲಿ ಇಚ್ಛೆ ಉಳ್ಳವರೆಲ್ಲರಿಗೂ ಜ್ಞಾನಯೋಗದಲ್ಲಿ ಅರ್ಹತೆ ಇಲ್ಲದಿರುವುದರಿಂದ ಕರ್ಮಯೋಗದಲ್ಲಿ ಮಾತ್ರವೇ ಅಧಿಕಾರ ಉಂಟೆಂದೂ ಅವನು ಕರ್ಮಯೋಗವನ್ನೇ ಅನುಷ್ಠಿಸತಕ್ಕದ್ದು ಎಂದು ಮೊದಲು ತಿಳಿಸಿ, ಅನಂತರ ಜ್ಞಾನಯೋಗಾಧಿಕಾರಿಗೂ ಕೂಡ ಕರ್ಮಯೋಗನೇ ಶ್ರೇಷ್ಠವಾದುದು ಎಂದು ಕಾರಣಗಳೊಂದಿಗೆ ವಿವರಿಸಿ, ಈಗ ಅಂದರೆ ಇನ್ನು ಮುಂದೆ ಮುಕ್ತನಾಗಿ ಸಿದ್ಧಿ ಹೊಂದಿ ಆದರ್ಶನಾಗಿರುವ ಪ್ರಸಿದ್ಧನಾದ ಪುರುಷನೂ ಕೂಡ ಸರ್ವ ಪ್ರಕಾರದಿಂದಲೂ ಲೋಕ ರಕ್ಷಣೆಯ ಸಲುವಾಗಿ ಕರ್ಮಯೋಗವನ್ನೇ ಅನುಷ್ಠಿಸಬೇಕು, ಎಂದು ಮುಂದಿನ ಶ್ಲೋಕಗಳಲ್ಲಿ ವಿವರಿಸಿದ್ದಾರೆ

**ಶ್ಲೋಕ 20**—" ಜನಕಾದಿಗಳು ಕರ್ಮಾಚರಣೆಯಿಂದಲೇ ಪರಮ ಸಿದ್ಧಿಯನ್ನು ಹೊಂದಿದರು. ಲೋಕ ಸಂಗ್ರಹದ (ಕಲ್ಯಾಣದ) ದೃಷ್ಟಿಯಿಂದ ನೋಡಿದರೂ ಕೂಡ ಕರ್ಮವನ್ನೇ ಮಾಡಬೇಕಾಗುತ್ತದೆ – ಜ್ಞಾನಯೋಗದ ಅಧಿಕಾರಿಗೂ ಕೂಡ ಆತ್ಮ ಸಾಕ್ಷಾತ್ಕಾರಕ್ಕೆ ಕರ್ಮಯೋಗವೇ ಶ್ರೇಷ್ಠವಾಗಿರುವುದರಿಂದ ಜ್ಞಾನಿಗಳಲ್ಲಿ ಅಗ್ರೇಸರಾದ ಜನಕನೇ ಮೊದಲಾದ ರಾಜ ಋಷಿಗಳೂ ಕೂಡ ಕರ್ಮಯೋಗವನ್ನು ಅನುಷ್ಠಿಸಿ ಆದರಿಂದಲೇ ಪರಮ ಸಿದ್ಧಿ ಪಡೆದರು ಅಂದರೆ ಆತ್ಮನನ್ನು ಹೊಂದಿದರು.

**ಶ್ಲೋಕ 21**—"ಶ್ರೇಷ್ಠನಾದ ಪುರುಷನು (ಮಹಾತ್ಮನು) ಯಾವ ಯಾವ ಕರ್ಮಗಳನ್ನು ಆಚರಿಸುತ್ತಾನೋ ಆಯಾ ಕರ್ಮಗಳನ್ನೇ ಇತರ ಜನರೂ ಆಚರಿಸುತ್ತಾರೆ. ಅವನು ಯಾವ ಪ್ರಮಾಣದಲ್ಲಿ ಕರ್ಮ ಮಾಡುತ್ತಾನೆಯೋ ಅದನ್ನೇ ಲೋಕದ ಜನರು ಅನುಸರಿಸಿ ನಡೆಯುತ್ತಾರೆ ".

ಲೋಕದ ಜನರ ಕ್ಷೇಮವನ್ನು ಯೋಚಿಸಿ ನೋಡಿದರೆ, ಆಗ ಜ್ಞಾನಿಯಾದರೂ ಕೂಡ ಕರ್ಮವನ್ನು ಮಾಡಲೇಬೇಕಾಗುತ್ತದ ಏಕೆಂದರೆ ಸಮಸ್ತ ಶಾಸ್ತ್ರಗಳನ್ನು ತಿಳಿದು ಅನುಷ್ಠಿಸಿ ಪ್ರಖ್ಯಾತಿ ಪಡೆದಿರುವ ಶ್ರೇಷ್ಠ ಪುರುಷನು ಯಾವ ಯಾವ ಕರ್ಮಗಳನ್ನು ಆಚರಿಸುತ್ತಾನೆಯೋ ಆಯಾ ಕರ್ಮಗಳನ್ನೇ

ಯಾವುದನ್ನೂ ತಿಳಿಯದ ಅಜ್ಞಾನಿಗಳಾದ ಜನರೂ ಕೂಡ ಆಚರಿಸುತ್ತಾರೆ ಆಚರಿಸುವ ಕರ್ಮಗಳನ್ನೂ ಶ್ರೇಷ್ಠ ಪುರುಷನು ಯಾವ ಪ್ರಮಾಣದಲ್ಲಿ ಅಂದರೆ ಯಾವ ಅಂಗಗಳೊಂದಿಗೆ ಅನುಷ್ಠಿಸುತ್ತಾನೋ ಆ ಅಂಗಗಳೊಂದಿಗೇ ಅಜ್ಞಾನಿಗಳಾದ ಲೋಕದ ಜನರೂ ಕೂಡ ಅನುಸರಿಸಿ ಆಚರಿಸುತ್ತಾರೆ ಆದ್ದರಿಂದ ವಿಶಿಷ್ಟ ರೂಪದಲ್ಲಿಯೂ ಪ್ರಸಿದ್ಧನಾದ ಶ್ರೇಷ್ಠ ಪುರುಷನು ಅಂದರೆ ಶಾಸ್ತ್ರಜ್ಞನೆಂದೂ, ಒಳ್ಳೆಯ ಅನುಷ್ಠಾನವುಳ್ಳವನೆಂದೂ ಪ್ರಸಿದ್ಧನಾದ ಶ್ರೇಷ್ಠ ಪುರುಷನು ತನ್ನ ವರ್ಣಾಶ್ರಮೋಚಿತವಾದ ಸಮಸ್ತ ಕರ್ಮಗಳನ್ನೂ ಸರ್ವದಾ ಮಾಡುತ್ತಲೇ ಇರಬೇಕು ಇಲ್ಲದಿದ್ದರೆ ಅವನನ್ನು ಅನುಸರಿಸುವ ಇತರ ಅಲ್ಪಜ್ಞರಾದ ಜನರು ಅವನನ್ನು ಅನುಸರಿಸಿ ತಾವೂ ಕರ್ಮ ಮಾಡದೇ ಇರುವುದರಿಂದ ಅವರೆಲ್ಲರೂ ನಾಶ ಹೊಂದುತ್ತಾರೆ ಹೀಗೆ ಲೋಕ ನಾಶವುಂಟಾಗಲು ಕಾರಣನಾಗುವುದರಿಂದ ಉಂಟಾಗುವ ಪಾಪವು ಅವನನ್ನು ಅಂದರೆ ಜ್ಞಾನಿಯನ್ನು ಜ್ಞಾನಯೋಗದಿಂದಲೂ ಕೂಡ ಜಾರಿ ಬೀಳುವಂತೆ ಮಾಡುತ್ತದೆ.

**(2) ಲೋಕ ಕಲ್ಯಾಣಕ್ಕಾಗಿ ಪರಮ ಪುರುಷನಾದ ನಾನೂ (ಶ್ರೀ ಕೃಷ್ಣನೂ) ಕರ್ಮ ಮಾಡುತ್ತಿರುವೆನು.**

**ಶ್ಲೋಕ 22**— "ಅರ್ಜುನ! ನನಗೆ ಮೂರು ಲೋಕಗಳಲ್ಲಿಯೂ (ಸಮಸ್ತ ವಿಶ್ವದಲ್ಲಿಯೂ) ಮಾಡಬೇಕಾದ ಕರ್ತವ್ಯವು ಸ್ವಲ್ಪವೂ ಇಲ್ಲವು ನಾನು ಯಾವ ಅಪ್ರಾಪ್ತ ವಸ್ತುವನ್ನೂ ಪ್ರಾಪ್ತ ಮಾಡಿಕೊಳ್ಳಬೇಕೆಂಬುದಿಲ್ಲ ಆದಾಗ್ಯೂ ಕರ್ಮಗಳನ್ನು ಮಾಡುತ್ತಲೇ ಇರುವೆನು "

ಸಾಮಾನ್ಯವಾಗಿ ಮನುಷ್ಯರು ತನಗೆ ಬೇಕಾಗಿರುವ ವಸ್ತುಗಳು, ಭೋಗಗಳು ತಮ್ಮಲ್ಲಿ ಇಲ್ಲದೆ ಇದ್ದರೆ ಆಗ ಅವುಗಳನ್ನು ಪಡೆಯುವುದಕ್ಕಾಗಿ ಕರ್ಮ ಮಾಡುತ್ತಾರೆ. ಆದರೆ ಸರ್ವೇಶ್ವರನಾದ ನಾನು ಅವಾಪ್ತ ಸಮಸ್ತ ಕಾಮನಾಗಿದ್ದೇನೆ ಅಂದರೆ ಸಮಸ್ತ ಭೋಗಗಳನ್ನೂ ಹೊಂದಿದವನಾಗಿದ್ದೇನೆ, ಸರ್ವಜ್ಞನಾಗಿದ್ದೇನೆ ಸತ್ಯ ಸಂಕಲ್ಪನಾಗಿದ್ದೇನೆ, ಅಂದರೆ ನಾನು ಮನಸ್ಸಿನಲ್ಲಿ ಸಂಕಲ್ಪಿಸಿದುದೆಲ್ಲಾ ಸತ್ಯವಾಗಿ ಪಡೆಯುವಂತಹವನಾಗಿದ್ದೇನೆ ಮೂರು ಲೋಕಗಳಲ್ಲಿಯೂ ದೇವ ಮನುಷ್ಯಾದಿ ರೂಪಗಳನ್ನು ಧರಿಸಿ ಸ್ವೇಚ್ಛೆಯಿಂದ ಸ್ವತಂತ್ರನಾಗಿ ಇರುವವನಾಗಿದ್ದೇನೆ. ಇಂತಹ ನನಗೆ ನಿರ್ಬಂಧದಿಂದ ಮಾಡಬೇಕಾದ ಕರ್ತವ್ಯವು ಸ್ವಲ್ಪವೂ ಇಲ್ಲ. ಏತಕ್ಕೆಂದರೆ ಯಾವ ಅಪ್ರಾಪ್ತ ವಸ್ತುವನ್ನೂ ಕರ್ಮಮಾಡಿ ಅದರ ಮೂಲಕ ಪ್ರಾಪ್ತಮಾಡಿಕೊಳ್ಳಬೇಕೆಂಬುದು ಸ್ವಲ್ಪವೂ ಇಲ್ಲ ಹೀಗೆ ನಾನು ಕರ್ಮಗಳನ್ನು ನನಗೋಸ್ಕರವಾಗಿ ಅಂದರೆ ನಾನು ಫಲವನ್ನು ಪಡೆಯುವುದಕ್ಕಾಗಿ ಮಾಡಬೇಕಾದ ಅವಶ್ಯಕತೆ ಇಲ್ಲವೆ ಇದ್ದಾಗ್ಯೂ ಕೂಡ ಲೋಕ ರಕ್ಷಣೆಗಾಗಿ ಕರ್ಮಮಾಡುತ್ತಲೇ ಇರುವೆನು.

**ಶ್ಲೋಕ 23**— "ಎಲೈ ಪಾರ್ಥ! ನಾನು ಯಾವಾಗಲಾದರೂ ಸೋಮಾರಿತನದಿಂದ ಕರ್ಮದಲ್ಲಿ ಪ್ರವೃತ್ತನಾಗದೇ ಇದ್ದ ಪಕ್ಷದಲ್ಲಿ ಸಮಸ್ತ ಮಾನವರೂ ಎಲ್ಲಾ ಪ್ರಕಾರದಲ್ಲಿಯೂ ನನ್ನ ಮಾರ್ಗವನ್ನು ಅನುಸರಿಸುತ್ತಾರೆ. (ಅಂದರೆ ಅವರೂ ಕರ್ಮ ಮಾಡುವುದಿಲ್ಲ "

ನಾನು ಸರ್ವೇಶ್ವರನೂ ಸತ್ಯ ಸಂಕಲ್ಪನೂ ಆಗಿರುವುದರಿಂದ ನನ್ನ ಸಂಕಲ್ಪ ಮಾತ್ರದಿಂದ ಜಗತ್ತಿನ ಸೃಷ್ಟಿ ಸ್ಥಿತಿಲಯರೂಪವಾದ ಲೀಲೆಯನ್ನು ಮಾಡುವವನಾಗಿದ್ದೇನೆ ಆದಾಗ್ಯೂ ಜಗತ್ತಿನ ಉಪಕಾರಕ್ಕಾಗಿ ನನ್ನ ಸ್ವಂತ ಇಚ್ಛೆಯಿಂದಲೇ ಮನುಷ್ಯನಾಗಿ ಅವತರಿಸಿದ್ದೇನೆ. ಮನುಷ್ಯರಲ್ಲಿ ಶಿಷ್ಟ ಜನರಿಗೆ (ಸತ್ಪುರುಷರಿಗೆ) ಅಗ್ರಗಣ್ಯನಾದ ವಸುದೇವನ ಮನೆಯಲ್ಲಿ ಅವತರಿಸಿದ್ದೇನೆ ಆದ್ದರಿಂದ ನಾನು ವಸುದೇವನ ಕುಲಕ್ಕೆ ಯೋಗ್ಯವಾದ ಕರ್ಮಗಳಲ್ಲಿ ಯಾವಾಗಲೂ ಸೋಮಾರಿತನವಿಲ್ಲದೇ ಪ್ರವರ್ತಿಸುತ್ತಿರುತ್ತೇನೆ ಒಂದು ವೇಳೆ ಸೋಮಾರಿತನದಿಂದ ಆ ಕರ್ಮಗಳನ್ನು ಮಾಡದೇ ಬಿಟ್ಟರೆ ಶಿಷ್ಟಾಗ್ರೇಸರನಾದ ವಸುದೇವನ ಮಗನಾದ ನನ್ನ ಮಾರ್ಗವನ್ನು ಸರ್ವಪ್ರಕಾರದಿಂದಲೂ "ಇದೇ ಧರ್ಮವು" ಎಂದು ತಿಳಿದು ಅನುಸರಿಸುತ್ತಿರುವ ಅಲ್ಪಜ್ಞರಾದ ಇತರ ಸತ್ಪುರುಷರಲ್ಲಿಯೂ ಕೂಡ ತಮ್ಮ ತಮ್ಮ ಕರ್ತವ್ಯ ಕರ್ಮಗಳನ್ನು ಆಚರಿಸುವುದಿಲ್ಲ ಇದರಿಂದ ಅವರೆಲ್ಲರೂ ಆತ್ಮನನ್ನು (ಆತ್ಮ ಸಾಕ್ಷಾತ್ಕಾರವನ್ನು) ಹೊಂದದೆ ನರಕವನ್ನು ಹೊಂದುವವರಾಗುವರು

**ಶ್ಲೋಕ 24**— "ನಾನು ಕರ್ಮವನ್ನು ಮಾಡದೇ ಹೋದರೆ ಈ ಲೋಕದ ಜನರು ನಷ್ಟರಾಗುವರು ಮತ್ತು ನಾನು ವರ್ಣಸಂಕರದ ಕರ್ತೃವಾಗುವೆನು ಮತ್ತು ಈ ಪ್ರಜೆಗಳನ್ನು ನಾಶಮಾಡುವವನಾಗುವೆನು "

ನಾನು ಕಾಲೋಚಿತವಾದ ಕರ್ಮಗಳನ್ನು ಮಾಡದೇ ಹೋದರೆ, ನನ್ನ ಆಚಾರ ವ್ಯವಹಾರಗಳನ್ನೇ ಆದರ್ಶವೆಂದು ಧರ್ಮ ನಿಶ್ಚಯಮಾಡಿ ಕೊಂಡಿರುವ ಸಮಸ್ತ ಶಿಷ್ಟ ಜನರೂ ತಮ್ಮ ತಮ್ಮ ಸ್ವರೂಪೋಚಿತ ಕರ್ಮಾನುಷ್ಠಾನ ಮಾಡದೆ ನಷ್ಟರಾಗುವರು. ಆದ್ದರಿಂದ ಅವರ ವರ್ಣಾಶ್ರಮಗಳು ನಷ್ಟವಾಗಿ ವರ್ಣ ಸಂಕರವುಂಟಾಗುವುದು. ಹೀಗೆ ಪ್ರಜೆಗಳನ್ನು ಕರ್ಮಭ್ರಷ್ಟರನ್ನಾಗಿ ಮಾಡಿ ಅವರಲ್ಲಿ ವರ್ಣ ಸಂಕರವನ್ನು ಉಂಟು ಮಾಡಿ ಅವರ ನಾಶಕ್ಕೆ ನಾನೇ ಕಾರಣನಾಗುವೆನು.

ಇದೇ ರೀತಿ ಅರ್ಜುನಾ, ಶಿಷ್ಟಜನಾಗ್ರೇಸರನಾದ ಪಾಂಡುವಿನ ಪುತ್ರನಾಗಿ, ಧರ್ಮರಾಜನ ತಮ್ಮನಾಗಿ, ಅರ್ಜುನನೆಂದು ಪ್ರಸಿದ್ಧನಾಗಿ ಇರುವ ನೀನೂ ಕೂಡ ಜ್ಞಾನ ನಿಷ್ಠೆಯನ್ನು ಉತ್ತಮವೆಂದು ಭಾವಿಸಿ ಅನನ್ಯಮನವನಾಗಿ ಕರ್ತವ್ಯ ಕರ್ಮಗಳನ್ನು ತ್ಯಜಿಸಿದೆಯಾದರೆ, ನಿನ್ನ ಆಚಾರ ವ್ಯವಹಾರಗಳನ್ನು ಅನುವರ್ತಿಸುತ್ತಿರುವ ಅಜ್ಞರಾದ ಶಿಷ್ಟರಾದ ಮುಮುಕ್ಷುಗಳು (ಮೋಕ್ಷವನ್ನು ಹೊಂದಲು ಇಚ್ಛೆಯುಳ್ಳವರು), ತಮ್ಮ ಅಧಿಕಾರಗಳನ್ನು ತಿಳಿಯದವರಾಗಿ ಕರ್ಮನಿಷ್ಠೆಯನ್ನು ಅನುಷ್ಠಿಸದೇ ನಷ್ಟರಾಗುವರು. ಅಂದರೆ ಎಲ್ಲರಿಗೂ ಸುಖಕರವಾದ ಕರ್ಮಯೋಗವನ್ನು ತ್ಯಜಿಸಿ ತಮಗೆ ಅರ್ಹತೆಯಿಲ್ಲದ ಜ್ಞಾನಯೋಗವನ್ನು ಮಾತ್ರ ಅವಲಂಭಿಸಲು ಪ್ರಯತ್ನಿಸುವರು ಮತ್ತು ಹೀಗೆ ತಮಗೆ ಯೋಗ್ಯತೆಯಿರುವ ಕರ್ಮಯೋಗವನ್ನು ತ್ಯಜಿಸಿ ಯೋಗ್ಯತೆಯಿಲ್ಲದಿರುವ ಜ್ಞಾನಯೋಗವನ್ನು ಅನುಷ್ಠಿಸಲು ಪ್ರಯತ್ನಿಸುವುದರಿಂದ ನಾಶಹೊಂದುವರು. ಆದ್ದರಿಂದ ಆದರ್ಶನೆನಿಸಿಕೊಂಡಿರುವ ವಿದ್ವಾಂಸನೂ ಜ್ಞಾನಿಯೂ ಕೂಡ ಕರ್ಮವನ್ನೇ ಮಾಡಬೇಕು ಎಂದು ಅಭಿಪ್ರಾಯ.

### (೩) ಕರ್ಮಯೋಗ ಅನುಷ್ಠಾನದಲ್ಲಿ ಜ್ಞಾನಿಗೂ ಅಜ್ಞಾನಿಗೂ ಇರುವ ವ್ಯತ್ಯಾಸ.

**(ಶ್ಲೋಕಗಳು 25-26)**

**ಶ್ಲೋಕ 25**—"ಕರ್ಮದಲ್ಲಿ ಆಸಕ್ತಿಯುಳ್ಳ ಅವಿದ್ವಾಂಸರು (ಆತ್ಮಜ್ಞಾನ ರಹಿತರು) ಹೇಗೆ ಕರ್ಮಗಳನ್ನು ಮಾಡುತ್ತಾರೆಯೋ ಹಾಗೆಯೇ ಕರ್ಮದಲ್ಲಿ ಆಸಕ್ತಿರಹಿತನಾದ ವಿದ್ವಾಂಸನೂ ಕೂಡ (ಆತ್ಮ ಜ್ಞಾನಿಯೂ ಕೂಡ) ಲೋಕ ರಕ್ಷಣೆಯನ್ನು ಮಾಡಲು ಇಚ್ಛೆಯುಳ್ಳವನಾಗಿ ಕರ್ಮಮಾಡಬೇಕು.

ಆತ್ಮ ಸ್ವರೂಪವನ್ನು ಚನ್ನಾಗಿ ತಿಳಿಯದ ಅಜ್ಞಾನಿಗಳಾದ ಮನುಷ್ಯರು ಕರ್ಮದಲ್ಲಿ ಅವರ್ಜನೀಯವಾದ ಸಂಬಂಧವುಳ್ಳವರಾಗಿದ್ದಾರೆ ಮತ್ತು ಆತ್ಮ ಸ್ವರೂಪವನ್ನು ಚನ್ನಾಗಿ ತಿಳಿಯದೇ ಇರುವುದರಿಂದ ಅವರಿಗೆ ಆತ್ಮಜ್ಞಾನ ಪ್ರಾಪ್ತಿಗೆ ಜ್ಞಾನಯೋಗ ಅಭ್ಯಾಸದಲ್ಲಿ ಅಧಿಕಾರವಿರುವುದಿಲ್ಲ. ಇದರಿಂದ ಇವರು ಆತ್ಮದರ್ಶನ ಪ್ರಾಪ್ತಿಗಾಗಿ ಕರ್ಮಯೋಗವನ್ನೇ ಮಾಡುತ್ತಾರೆ. ಅದೇ ರೀತಿ ಆತ್ಮ ಸ್ವರೂಪವನ್ನು ಚನ್ನಾಗಿ ತಿಳಿದಿರುವ ಜ್ಞಾನಯೋಗ ಅಭ್ಯಾಸಕ್ಕೆ ಯೋಗ್ಯನಾದ ಆದರ್ಶ ಪುರುಷನೂ ಕೂಡ ಲೋಕ ರಕ್ಷಣೆಗಾಗಿ ಅಂದರೆ ತನ್ನ ಆಚರಣೆಯಿಂದ ತನ್ನನ್ನು ಅನುಸರಿಸುತ್ತಿರುವ ಲೋಕದ ಇತರ ಶಿಷ್ಟ ಜನರ ಧರ್ಮ ನಿಷ್ಠೆಯು ಪಾಡುವ ಇಚ್ಛೆಯಿಂದ ಕರ್ಮಯೋಗವನ್ನೇ ಮಾಡಬೇಕು.

**ಶ್ಲೋಕ 26**—"ವಿದ್ವಾಂಸನಾದವನು ಕರ್ಮದಲ್ಲಿ ಆಸಕ್ತರಾಗಿರುವ ಅಜ್ಞಾನಿಗಳ ಬುದ್ಧಿಯಲ್ಲಿ ವ್ಯತ್ಯಸ್ತವಾದ (ವಿರೋಧವಾದ) ಅಭಿಪ್ರಾಯಗಳನ್ನು ಹುಟ್ಟಿಸಬಾರದು. ಯೋಗಯುಕ್ತನಾಗಿ ಕರ್ಮಮಾಡುತ್ತಾ ಸಮಸ್ತ ಕರ್ಮಗಳಲ್ಲಿಯೂ ಅವರಿಗೆ ಪ್ರೀತಿಯನ್ನು ಉಂಟುಮಾಡಬೇಕು."

ಆತ್ಮಸ್ವರೂಪವನ್ನು ತಿಳಿಯದೆ ಜ್ಞಾನಯೋಗಕ್ಕೆ ಅಸಮರ್ಥರಾದ ಮುಮುಕ್ಷುಗಳು ಅನಾದಿಕಾಲದ ಕರ್ಮವಾಸನೆಯಿಂದ ಕರ್ಮ ಮಾಡುವುದನ್ನೇ ಸ್ವಭಾವವಾಗಿ ಹೊಂದಿ ಕರ್ಮಯೋಗಕ್ಕೆ ಅಧಿಕಾರಿಗಳಾಗಿರುವರು. ಈ ರೀತಿಯಾದ ಕರ್ಮಾಸಕ್ತರೂ ಅಜ್ಞಾನಿಗಳೂ ಆದ ಮುಮುಕ್ಷುಗಳಿಗೆ ಬುದ್ಧಿಯಲ್ಲಿ ವ್ಯತ್ಯಾಸವನ್ನು ಉಂಟುಮಾಡಬಾರದು. ಅಂದರೆ "ಆತ್ಮಸಾಕ್ಷಾತ್ಕಾರಕ್ಕೆ ಕರ್ಮಯೋಗಕ್ಕಿಂತ ಬೇರೆಯಾದ ಸಾಧನವು ಇದೆ" ಎಂಬ ವ್ಯತ್ಯಸ್ತವಾದ ಅಭಿಪ್ರಾಯವನ್ನು ಅವರ ಬುದ್ಧಿಯಲ್ಲಿ ಉಂಟುಮಾಡಬಾರದು. ಹಾಗಾದರೆ ಏನು ಮಾಡತಕ್ಕದ್ದು ಎಂದರೆ—ಆತ್ಮಸ್ವರೂಪವನ್ನು ಚೆನ್ನಾಗಿ ತಿಳಿದವನಾಗಿ, ಜ್ಞಾನಯೋಗ ಅನುಷ್ಠಾನಕ್ಕೆ ಸಮರ್ಥನಾದವನೂ ಕೂಡ ಹಿಂದೆ ಹೇಳಿದ ರೀತಿಯಲ್ಲಿ—"ಕರ್ಮಯೋಗವು ಜ್ಞಾನಯೋಗದ ಅಪೇಕ್ಷೆ ಇಲ್ಲದೆಯೇ ಆತ್ಮಸಾಕ್ಷಾತ್ಕಾರಕ್ಕೆ ಸಾಧನವು" ಎಂಬ ಬುದ್ಧಿಯಿಂದ ಕೂಡಿದವನಾಗಿ ತಾನೇ ಕರ್ಮಗಳನ್ನು ಆಚರಿಸುತ್ತಾ ಕರ್ಮಯೋಗ ನಿರತನಾಗಿ ಅಲ್ಪಜ್ಞರಾದ ಪುರುಷರಿಗೆ ಸಮಸ್ತ ಕರ್ಮಗಳಲ್ಲಿಯೂ ಪ್ರೀತಿಯನ್ನು ಉಂಟುಮಾಡಬೇಕು.

**III ಅಕರ್ತೃತ್ವಾನುಸಂಧಾನದೊಂದಿಗೆ ಕರ್ಮ ಮಾಡುವ ಪ್ರಕಾರ (ಶ್ಲೋಕಗಳು 27 ರಿಂದ 32)**

**ಅಕರ್ತೃತ್ವಾನುಸಂಧಾನದೊಂದಿಗೆ** ಕರ್ಮಮಾಡಬೇಕು ಎಂದರೇನು ? ಆತ್ಮನಾದ ನೀನು ಕರ್ಮಕ್ಕೆ ಕರ್ತೃವಲ್ಲ. ಅಂದರೆ ಕರ್ಮಮಾಡುವವನು ನೀನಿಲ್ಲ ಎಂಬುದನ್ನು ತಿಳಿದು ಅನುಸಂಧಾನ ಮಾಡುತ್ತಾ ಕರ್ಮಮಾಡಬೇಕು ಎಂದು ಅರ್ಥ. ಆದರೆ ಕರ್ಮ ಮಾಡುವವನು ನೀನಿಲ್ಲದ ಮೇಲೆ ಕರ್ಮಮಾಡುವವರು ಯಾರು ಎಂಬ ಪ್ರಶ್ನೆ ಹುಟ್ಟುತ್ತದೆ. ಅದಕ್ಕೆ ಉತ್ತರ ಮುಂದಿನ ಶ್ಲೋಕದಲ್ಲಿ ತಿಳಿಸಿದ್ದಾರೆ

**(1) ಸತ್ತ್ವ ರಜಸ್ತಮೋಗುಣಗಳಿಂದ ಪ್ರೇರಿತನಾಗಿ ಚೇತನನು ಕರ್ಮಮಾಡುತ್ತಾನೆ—(ಶ್ಲೋಕಗಳು 27, 28, 29)**

**ಶ್ಲೋಕ 27**—"ಕರ್ಮಗಳು ಸರ್ವಪ್ರಕಾರದಿಂದಲೂ ಪ್ರಕೃತಿಯ ಗುಣಗಳಿಂದ ಮಾಡಲ್ಪಡುತ್ತವೆ ಅಹಂಕಾರದಿಂದ ಮೋಹಿತವಾದ ಜ್ಞಾನವುಳ್ಳವನು, "ಕರ್ಮಗಳನ್ನು ಮಾಡುವವನು ನಾನು" ಎಂದು ತಿಳಿದುಕೊಳ್ಳುತ್ತಾನೆ."

ಪ್ರಕೃತಿಯಲ್ಲಿರುವ ಸತ್ತ್ವ ರಜಸ್ತಮೋಗುಣಗಳಿಗೆ ಅನುರೂಪವಾಗಿ ಕರ್ಮಗಳು ಮಾಡಲ್ಪಡುತ್ತವೆ ಆದರೆ ಅಹಂಕಾರದಿಂದ ಮೂಢನಾದ ಮನುಷ್ಯನು ತಾನೇ ಕರ್ಮಗಳಿಗೆಲ್ಲಾ ಕರ್ತಾ ಎಂದು ತಿಳಿದುಕೊಳ್ಳುತ್ತಾನೆ. ಅಹಂಕಾರದಿಂದ ಕೂಡಿದ ಮಂದ ಬುದ್ಧಿಯುಳ್ಳವನೇ ಅಹಂಕಾರ ವಿಮೂಢಾತ್ಮನು. ತನ್ನದಲ್ಲದ ವಸ್ತುಗಳಲ್ಲಿ 'ತನ್ನದು' ಎಂಬ ಅಭಿಮಾನವಿಡುವುದೇ ಅಹಂಕಾರವು ಆ ಅಹಂಕಾರದಿಂದ ಕೂಡಿದವನಾಗಿ ಆತ್ಮಸ್ವರೂಪ ಜ್ಞಾನವಿಲ್ಲದವನು ತ್ರಿಗುಣಗಳಿಂದ ಮಾಡಲ್ಪಡುವ ಕರ್ಮಗಳ ಕರ್ತಾ ತಾನು ಅಂದರೆ "ಕರ್ಮಗಳನ್ನು ಮಾಡುವವನು ನಾನು" ಎಂದು ತಿಳಿಯುತ್ತಾನೆ.

**ಶ್ಲೋಕ 28**—"ಗುಣ, ಕರ್ಮ ಇವುಗಳ ವಿಭಾಗಗಳನ್ನು ತಿಳಿದ ತತ್ತ್ವಜ್ಞನಾದರೋ "ಗುಣಗಳು ಗುಣಗಳಲ್ಲಿ ಇವೆ" ಎಂದು ತಿಳಿದು ಅವುಗಳಲ್ಲಿ ಆಸಕ್ತಿ ಹೊಂದುವುದಿಲ್ಲ"

ಗುಣ ಮತ್ತು ಕರ್ಮ ಇವುಗಳ ವಿಭಾಗವನ್ನು ಅಂದರೆ ಸತ್ತ್ವಾದಿಗುಣಗಳ ವಿಭಾಗವನ್ನೂ ಮತ್ತು ಆಯಾ ಗುಣಗಳಿಂದ ಉಂಟಾಗುವ ಕಾರ್ಯಗಳ ವಿಭಾಗವನ್ನೂ ತಿಳಿದವನು ಸತ್ತ್ವಾದಿ ಗುಣಗಳು ತಮ್ಮ ನಾನಾ ಪ್ರಕಾರದ ಗುಣಗಳಲ್ಲಿಯೂ ಮತ್ತು ಆ ಗುಣಗಳಿಗೆ ಅನುರೂಪವಾದ ಕಾರ್ಯಗಳಲ್ಲಿಯೂ ಇರುತ್ತವೆ ಎಂದು ತಿಳಿದವನಾಗಿ ಆಗುಣ ಮತ್ತು ಕರ್ಮಗಳಲ್ಲಿ "ಇವುಗಳ ಕರ್ತೃ ನಾನು" ಎಂಬ ಅಭಿಮಾನವನ್ನು (ಆಸಕ್ತಿಯನ್ನು) ಇಡುವುದಿಲ್ಲ

**ಶ್ಲೋಕ 29**—"ಪ್ರಕೃತಿಯ ಗುಣಗಳಿಂದ ಮೋಹಿತರಾದ ಪುರುಷರು ಆಗುಣಗಳ ಕಾರ್ಯರೂಪವಾದ ಕರ್ಮಗಳಲ್ಲಿ ಆಸಕ್ತರಾಗುತ್ತಾರೆ. ಆ ಅಲ್ಪಜ್ಞರಾದ ಮಂದಬುದ್ಧಿಯುಳ್ಳವರನ್ನು ಪೂರ್ಣ ಜ್ಞಾನಿಗಳಾದವರು ಚಿತ್ತಚಾಂಚಲ್ಯವುಳ್ಳವರನ್ನಾಗಿ ಮಾಡಕೂಡದು"

ಬಹುಮಂದಿ ಜನರಿಗೆ ತತ್ತ್ವಜ್ಞಾನದ ಅರಿವಿಲ್ಲ. ಆದಾಗ್ಯೂ ಕೆಲವರು ಮೋಕ್ಷವನ್ನು ಹೊಂದಬೇಕೆಂಬ ಇಚ್ಛೆ ಹೊಂದಿದವರಾಗಿ ಮುಮುಕ್ಷುಗಳಾಗಿರುವರು ಹೀಗೆ ಪೂರ್ಣ ಜ್ಞಾನವಿಲ್ಲದೆ ಆತ್ಮದರ್ಶನ ಹೊಂದಬೇಕೆಂಬ ಇಚ್ಛೆಯುಳ್ಳವರು, ಶರೀರ ಸಂಬಂಧ ಹೊಂದಿ ಪ್ರಕೃತಿ ಸಂಸರ್ಗದಿಂದ ಕೂಡಿದವರಾಗಿರುವುದರಿಂದ ಪ್ರಕೃತಿಯ ಗುಣಗಳಲ್ಲಿ ಮೋಹಿತರಾಗಿ ಆತ್ಮಯಥಾರ್ಥ ಸ್ವರೂಪದ ವಿಷಯವನ್ನು ತಿಳಿಯದವರಾಗಿರುತ್ತಾರೆ. ಆಗುಣಗಳ ಕಾರ್ಯಗಳಾದ ಕರ್ಮದಲ್ಲಿಯೇ ಆಸಕ್ತರಾಗುತ್ತಾರಯೇ ಹೊರತು ಅವುಗಳಿಂದ ಬಿಡಲ್ಪಟ್ಟ (ಆಗುಣ ಕರ್ಮಗಳ ಸಂಸರ್ಗವಿಲ್ಲದ) ಆತ್ಮಸ್ವರೂಪದಲ್ಲಿ ಆಸಕ್ತಿ ಹೊಂದುವುದಿಲ್ಲ ಆದ್ದರಿಂದ ಅವರು ಜ್ಞಾನಯೋಗ ಅಭ್ಯಾಸಕ್ಕೆ ಸಮರ್ಥರಾಗುವುದಿಲ್ಲ ಈ ಕಾರಣದಿಂದ ಅವರಿಗೆ ಕರ್ಮಯೋಗದಲ್ಲಿ ಮಾತ್ರವೇ ಅಧಿಕಾರವು.

ಅವರಾದರೋ ಮಂದಮತಿಗಳಾಗಿರುವುದರಿಂದ ತಾವೇ ಸ್ವಂತವಾಗಿ ತಿಳಿದುಕೊಳ್ಳುವ ಶಕ್ತಿ ಅವರಿಗಿಲ್ಲ ಆದ್ದರಿಂದ ಅವರು ಶ್ರೇಷ್ಠಜ್ಞಾನಿಗಳ ಆಚರಣೆಗಳನ್ನು ಅನುವರ್ತಿಸುವವರಾಗಿದ್ದಾರೆ ಪೂರ್ಣಜ್ಞಾನಿಗಳಾದವರು ಕರ್ಮಯೋಗವನ್ನು ಅನುಷ್ಠಿಸದೆ ಕೇವಲ ಜ್ಞಾನಯೋಗದಲ್ಲಿ ನಿರತರಾಗಿದ್ದರೆ, ಕರ್ಮಯೋಗವನ್ನು ಅನುಷ್ಠಿಸದೆ ಮುಂದುವರೆಯುತ್ತಿರುವ ಅವರುಗಳನ್ನು ನೋಡಿ ಅಲ್ಪಜ್ಞರು ಕರ್ಮಯೋಗದಿಂದ ಚಲಿಸಿದ ಮನಸ್ಸುಳ್ಳವರಾಗುವರು. ಅವರ ಮನಸ್ಸು ತಾನೂ ಕರ್ಮಯೋಗವನ್ನು ಬಿಟ್ಟು ಜ್ಞಾನಯೋಗವನ್ನು ಅವಲಂಬಿಸಬಹುದೆಂಬ ವ್ಯತ್ಯಸ್ತ ಬುದ್ಧಿಯನ್ನು ಹೊಂದುವುದು.

ಆದ್ದರಿಂದ ಪೂರ್ಣಜ್ಞಾನಿಗಳು ಅಲ್ಪಜ್ಞರಿಗೆ ಬುದ್ಧಿ ಚಾಂಚಲ್ಯವುಂಟು ಮಾಡದೇ ಇರುವುದಕ್ಕಾಗಿ ತಾವು ಸ್ವತಃ ಜ್ಞಾನಯೋಗದಲ್ಲಿ ನಿರತರಾಗದೆ ಕರ್ಮಯೋಗದ ಅಭ್ಯಾಸದಲ್ಲೇ ನಿರತರಾಗಿ, ಅಕರ್ತೃತ್ವಾನುಸಂಧಾನಯುತರಾಗಿ (ಕರ್ಮಕ್ಕೆ ಕರ್ತೃವು ಆತ್ಮನಲ್ಲ ಪ್ರಕೃತಿಯ ಗುಣಗಳು ಎಂಬ ಜ್ಞಾನದಿಂದ ಕೂಡಿದವರಾಗಿ) "ಕರ್ಮಯೋಗವೇ ಆತ್ಮಸಾಕ್ಷಾತ್ಕಾರಕ್ಕೆ ನಿರಪೇಕ್ಷ ಸಾಧನವು ಎಂಬುದನ್ನು ತೋರಿಸಿ ಅಲ್ಪಜ್ಞರಾದ ಮಂದಮತಿಗಳು ಕರ್ಮಯೋಗವನ್ನೇ ಪ್ರೀತಿಸುವಂತೆ ಮಾಡಬೇಕು ಎಂದು ಅಭಿಪ್ರಾಯ.

ಜ್ಞಾನಯೋಗದ ಅಧಿಕಾರಿಗಳಿಗೂ ಕೂಡ, ಜ್ಞಾನಯೋಗಕ್ಕಿಂತ ಕರ್ಮಯೋಗವೇ ಶ್ರೇಷ್ಠವೆಂಬುದು ಹಿಂದೆಯೇ ಹೇಳಲ್ಪಟ್ಟಿದೆ ಆದ್ದರಿಂದ ಆದರ್ಶ ಪುರುಷನೂ ಕೂಡ ಲೋಕರಕ್ಷಣೆಯ ಕರ್ಮಗಳನ್ನು ಮಾಡಬೇಕು ಪ್ರಕೃತಿ ಸಂಸರ್ಗ ರಹಿತವಾದ ಆತ್ಮಸ್ವರೂಪವನ್ನು ಅನುಸಂಧಾನ ಮಾಡುತ್ತಾ ಗುಣಗಳಿಗೆ ಕರ್ತೃತ್ವವನ್ನು ಆರೋಪಿಸಿ ಕರ್ಮಮಾಡಬೇಕು

ಗುಣಗಳಲ್ಲಿ ಕರ್ತೃತ್ವ ಅನುಸಂಧಾನವೆಂಬುದು ಏನೆಂದರೆ–"ಕರ್ತೃತ್ವವು ಆತ್ಮನಿಗೆ ಸ್ವರೂಪ ಪ್ರಯುಕ್ತವಾದುದಲ್ಲ (ಸ್ವಾಭಾವಿಕವಾದುದಲ್ಲ) ಮತ್ತೇನೆಂದರೆ ಸತ್ತ್ವರಜಸ್ತಮೋಗುಣಗಳ ಸಂಪರ್ಕ ಉಂಟಾಗುವುದರಿಂದ, ಆ ಗುಣಗಳಿಗೆ ಅನುಗುಣವಾಗಿ ಕರ್ಮವು ನಡೆಯುತ್ತದೆ ಮತ್ತು ಆತ್ಮನಿಗೆ ಶರೀರ ಸಂಬಂಧವಿಲ್ಲದಿದ್ದರೆ ಸತ್ತ್ವರಜಸ್ತಮೋಗುಣಗಳ ಸಂಪರ್ಕ ಉಂಟಾಗದೇ ಇರುವುದರಿಂದ ಕರ್ಮವು ನಡೆಯುವುದಿಲ್ಲ ಎಂಬ ವಿವೇಕ ಹೊಂದಿ ಸಮಸ್ತ ಕರ್ಮಗಳೂ ಪ್ರಕೃತಿಯ ಗುಣಗಳಿಂದ ಮಾಡಲ್ಪಡುತ್ತವೆ ಎಂದು ಅನುಸಂಧಾನಮಾಡಬೇಕು ಒಟ್ಟಿನಲ್ಲಿ ಒಂದು ಕರ್ಮ ಮಾಡಬೇಕಾದರೆ ಕೇವಲ ಆತ್ಮಸ್ವರೂಪವು ಸಾಲದು , ಅದು ಶರೀರೇಂದ್ರಿಯಗಳ ಸಂಬಂಧ ಹೊಂದಿ ಅದರ ಮೂಲಕ ಸತ್ತ್ವ ರಜಸ್ತಮೋಗುಣಗಳ ಸಂಪರ್ಕ ಪಡೆದಿರಬೇಕು , ಹೀಗೆ ತ್ರಿಗುಣಗಳಿಂದ ಕೂಡಿದ ಶರೀರದಿಂದ ಮಾಡಲ್ಪಟ್ಟ ಕಾರ್ಯಗಳಿಂದ ಕರ್ತೃತ್ವವು ಉಂಟಾಗುವುದರಿಂದ ಅದು (ಕರ್ತೃತ್ವವು) ತ್ರಿಗುಣಗಳಿಗೆ ಸೇರಿದ್ದೇ ಹೊರತು ಆತ್ಮನಿಗೆ ಸೇರಿದ್ದಲ್ಲ ಎಂದು ಅಭಿಪ್ರಾಯ

## 2) ಪರಮಾತ್ಮನ ನಿಯಮನದಿಂದ ಚೇತನನು ಕರ್ಮ ಮಾಡುತ್ತಾನೆ— (ಶ್ಲೋಕಗಳು 30, 31, 32)

### ಶ್ಲೋಕ—30

ಜೀವಾತ್ಮನು ಪ್ರಕೃತಿಯ ಗುಣಗಳಿಂದ ಪ್ರೇರಿತನಾಗಿ ಕರ್ಮ ಮಾಡುತ್ತಾನೆ ಎಂದು ಮೇಲೆ ತಿಳಿಸಿದ್ದಾರೆ ಸಮಸ್ತ ಜೀವಿಗಳೂ ಪರಮಪುರುಷನಿಗೆ ಶರೀರವಾಗಿರುವುದರಿಂದ ಅವನ ನಿಯಮನಕ್ಕೆ ಒಳಪಟ್ಟಿರುವುದೇ ಜೀವಾತ್ಮ ಸ್ವರೂಪವಾಗಿದೆ ಆದ್ದರಿಂದ ಗುಣದಿಂದ ಉಂಟಾದ ಕರ್ತೃತ್ವವನ್ನು ಅಂದರೆ ಗುಣದಿಂದ ಕೂಡಿದ ಶರೀರದಿಂದ ಮಾಡಲ್ಪಟ್ಟ ಕಾರ್ಯಗಳಿಂದ ಉಂಟಾದ ಕರ್ತೃತ್ವವನ್ನು ಸಮಸ್ತರಿಗೂ ಆತ್ಮಸ್ವರೂಪನಾದ ಭಗವಂತನಾದ ಪುರುಷೋತ್ತಮನಲ್ಲಿ ಆರೋಪಿಸಿ ಕರ್ಮವನ್ನು ಮಾಡಬೇಕು ಎಂದು ಈ ಶ್ಲೋಕದಲ್ಲಿ ತಿಳಿಸುತ್ತಾರೆ–"ಅಧ್ಯಾತ್ಮ ಚಿತ್ತವುಳ್ಳವನಾಗಿ, ಸಮಸ್ತ ಕರ್ಮಗಳನ್ನೂ ನನಗೆ ಸಮರ್ಪಿಸಿ, ಆಸೆಯಿಲ್ಲದವನಾಗಿ (ಅವರ ಫಲದಲ್ಲಿ ಆಸಕ್ತಿಯಿಲ್ಲದವನಾಗಿ) ಮತ್ತು ಮಮತಾರಹಿತನಾಗಿ (ಅದನ್ನು ತಾನು ಮಾಡಿದೆನೆಂಬ ಮಮತೆಯಿಲ್ಲದವನಾಗಿ) ಸಂತಾಪರಹಿತನಾಗಿ ಯುದ್ಧಮಾಡು" —ಇದು ಬಹಳ ಮುಖ್ಯವಾದ ಶ್ಲೋಕ ಈ ಶ್ಲೋಕದಲ್ಲಿ ಕರ್ಮಗಳನ್ನು ಕರ್ಮಯೋಗವಾಗಿ ಮಾಡಬೇಕಾದರೆ ಯಾವ ರೀತಿ ಮಾಡಬೇಕು ಎಂಬುದನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ ಅದಕ್ಕೆ ಐದು ಅಭ್ಯಾಸಗಳನ್ನು ಹೇಳಿದ್ದಾರೆ—

(1) ''ಅಧ್ಯಾತ್ಮ ಚೇತಸಾ''—ಅಧ್ಯಾತ್ಮಚಿತ್ತವುಳ್ಳವನಾಗಿರಬೇಕು ಆತ್ಮ ಮತ್ತು ಪರಮಾತ್ಮರ ನಿಜಸ್ವರೂಪವನ್ನು ತಿಳಿದು ಚಿಂತನೆ ಮಾಡುವುದೇ ಅಧ್ಯಾತ್ಮ ಚಿಂತನವು ನೂರಾರು ಶ್ರುತಿಗಳಿಂದ ಸಿದ್ಧವಾದ ಆತ್ಮ ಮತ್ತು ಪರಮಾತ್ಮರ ಸ್ವರೂಪ ವಿಷಯಜ್ಞಾನದೊಂದಿಗೆ ಕರ್ಮಮಾಡಬೇಕು ಎಂದು ಅಭಿಪ್ರಾಯ ಶ್ರುತಿ, ಸ್ಮೃತಿಗಳಲ್ಲಿ ಪರಮ ಪುರುಷನಿಗೆ ಈ ಆತ್ಮನು ಶರೀರವೆಂದೂ ಆ ಕಾರಣದಿಂದ ಆತ್ಮನು ಪರಮ ಪುರುಷನಿಂದ ನಿಯಮಿಸಲ್ಪಡುವವನೆಂದೂ, ಪರಮಪುರುಷನು ಆತ್ಮನ ನಿಯಾಮಕನೆಂದೂ ಹೇಳುತ್ತವೆ ಗೀತೆಯಲ್ಲಿಯೂ ಮುಂದೆ 18ನೇ ಅಧ್ಯಾಯದಲ್ಲಿ ''ಈಶ್ವರಸ್ಸರ್ವ ಭೂತಾನಾಂ'' ಎಂಬ ಶ್ಲೋಕದಲ್ಲಿ ಈಶ್ವರನು ಸಮಸ್ತ ಚೇತನರ ಹೃದಯಪ್ರದೇಶದಲ್ಲಿ ಇರುತ್ತಾ ಸಮಸ್ತ ಚೇತನರನ್ನು ತನ್ನ ಮಾಯೆಯಿಂದ ತಿರುಗಿಸುತ್ತಾನೆ ಎಂದು ಹೇಳಿದೆ ಆದ್ದರಿಂದ ಆತ್ಮನಾದ ನಾನು ಪರಮಾತ್ಮನಿಗೆ ಶರೀರವಾಗಿರುವುದರಿಂದ ಅವನಿಂದಲೇ ಪ್ರವರ್ತಿಸಲ್ಪಡುವ ಸ್ವರೂಪವುಳ್ಳವನಾಗಿದ್ದೇನೆ ಎಂಬ ಅನುಸಂಧಾನದೊಂದಿಗೆ ಕರ್ಮಮಾಡಬೇಕು ಇದೇ ''ಅಧ್ಯಾತ್ಮ ಚೇತಸಾ' ಎಂಬುದರ ಅರ್ಥ. (ಹೀಗೆ ಆತ್ಮಪರಮಾತ್ಮ ಸ್ವರೂಪಚಿಂತನಯೊಂದಿಗೆ ಕರ್ಮಮಾಡಬೇಕು ಎಂದು ಹೇಳಿರುವುದರಿಂದ ಕರ್ಮದೊಂದಿಗೆ ಜ್ಞಾನವೂ ಮಿಳಿತವಾಗಬೇಕು ಎಂದು ಅಭಿಪ್ರಾಯ)

(ii) '' ಸರ್ವಾಣಿ ಕರ್ಮಾಣಿ ಮಯಿಸನ್ಯಸ್ಯ ' — ಸಮಸ್ತ ಕರ್ಮಗಳನ್ನೂ ಪರಮಾತ್ಮನಿಗೇ ಸಮರ್ಪಿಸಬೇಕು— ಸಮಸ್ತ ಕರ್ಮಗಳೂ ಪರಮಾತ್ಮನ ಮೂಲಕವಾಗಿಯೇ ಮಾಡಲ್ಪಡುವುವು ಎಂದು ತಿಳಿದ ಮೇಲೆ ಅವುಗಳನ್ನು ಪರಮಪುರುಷನಿಗೇ ಸಮರ್ಪಿಸಬೇಕು ಅಂದರೆ ಅವುಗಳನ್ನು ಕೇವಲ ಪರಮಾತ್ಮನ ಆರಾಧನೆಗಳು ಎಂಬ ಭಾವನೆಯೊಂದಿಗ ಮಾಡಬೇಕ (ಮುಂದೆ ಭಕ್ತಿಯೋಗವನ್ನು ಹೇಳುವಾಗ ಕರ್ಮಫಲ ತ್ಯಾಗ ಮಾಡುವುದಕ್ಕೆ ಬದಲು ಕರ್ಮವನ್ನೂ ಅದರ ಫಲವನ್ನೂ ಪರಮಾತ್ಮನಿಗೆ ಸಮರ್ಪಿಸು ಎಂದು ಹೇಳಿರುವುದನ್ನೇ ಇಲ್ಲಿಯೂ ಹೇಳಿದ್ದಾರೆ ಇದರಿಂದ ಕರ್ಮದೊಂದಿಗೆ ಭಕ್ತಿಯೂ ಮಿಳಿತವಾಗಬೇಕು ಎಂದು ಅಭಿಪ್ರಾಯ)

(iii) " ನಿರಾಶೀಃ ಭೂತ್ವಾ "—ಕರ್ಮಗಳನ್ನು ಆಸೆಯಿಲ್ಲದ ಮಾಡಬೇಕು ಅಂದರೆ ಕರ್ಮಫಲಗಳಲ್ಲಿ ಆಸೆಹೊಂದದ ಆಶಾರಹಿತನಾಗಿ ಮಾಡಬೇಕು

(vi) " ನಿರ್ಮಮಃ ಭೂತ್ವಾ "— ಕರ್ಮಗಳಲ್ಲಿ ಮಮತೆ ಹೊಂದಬಾರದು. ಕರ್ಮಗಳನ್ನು ಮಾಡುವವನು ನಾನು ಎಂಬ ಮಮತೆ ಇರಕೂಡದು ಕರ್ಮಗಳನ್ನು ಮಾಡಿಸುವವನು ಪರಮಾತ್ಮನು. ಆದ್ದರಿಂದ ಈ ಕರ್ಮಗಳ ಕರ್ತೃ ನಾನಲ್ಲ ಇವು ಪರಮಾತ್ಮನಿಗೆ ಸೇರಿದವು ಎಂಬ ಭಾವನೆ ಹೊಂದಿ ಅವುಗಳಲ್ಲಿ ಮಮಕಾರವಿಲ್ಲದವನಾಗಿರಬೇಕು.

(v) " ವಿಗತಜ್ವರಃ ಯುಧ್ಯಸ್ವ "—ಸಂತಾಪರಹಿತನಾಗಿ ಯುದ್ಧಮಾಡು (ಕರ್ಮಮಾಡು). ಯಾವಾಗ ಕರ್ಮದ ಕರ್ತೃ ನೀನಲ್ಲವೆಂದೂ, ಅದರ ಫಲವು ನಿನಗಲ್ಲವೆಂದೂ ನೀನು ತಿಳಿಯುತ್ತೀಯೋ ಆಗ ನಿನಗೆ ಕರ್ಮಮಾಡುವಾಗ ಯಾವ ಉದ್ವೇಗವೂ ಇರುವುದಿಲ್ಲ. ನೀನು ಶಾಂತ ಚಿತ್ತನಾಗಿ ಕರ್ಮಮಾಡುತ್ತೀಯೆ.

ಒಟ್ಟಿನಲ್ಲಿ ಈಶ್ಲೋಕದ ತಾತ್ಪರ್ಯವೇನೆಂದರೆ ಪರಮಾತ್ಮನ ಈಶ್ವರತ್ವವು ಅಂದರ ಅವನು ಎಲ್ಲರನ್ನೂ ನಿಯಮಿಸುವ ಸಾಮರ್ಥ್ಯವುಳ್ಳವನೆಂಬುದೂ ಮತ್ತು ಅವನ ಶೇಷಿತ್ವವು ಅಂದರೆ ಅವನು ಎಲ್ಲರಿಗೂ ಸ್ವಾಮಿ ಎಂಬುದೂ ಶ್ರುತಿವಾಕ್ಯಗಳಿಂದ ಸಿದ್ಧವಾಗಿವೆ ಆದ್ದರಿಂದ ಸರ್ವಶೇಷಿಯಾದ ಸರ್ವೇಶ್ವರನಾದ ಪರಮೇಶ್ವರನಾದ ಭಗವಂತನು, ತನ್ನವನಾದ ಜೀವಾತ್ಮರೂಪನಾದ ಕರ್ತನ ಮೂಲಕ, ತನ್ನದೇ ಆದ ಇಂದ್ರಿಯಗಳ ಮೂಲಕ ತನ್ನ ಆರಾಧನೆಗಾಗಿಯೇ, ತಾನೇ ತನ್ನ ಕೆಲಸಗಳನ್ನು ಮಾಡಿಸುತ್ತಾನೆ ಎಂದು ಅನುಸಂಧಾನ ಮಾಡುತ್ತಾ, ಕರ್ಮಗಳಲ್ಲಿ ಮಮಕಾರ ಹೊಂದದೆ ಕರ್ಮಫಲಗಳಲ್ಲಿ ಆಸಕ್ತಿಹೊಂದದೆ ಮತ್ತು ಅನಾದಿಕಾಲದಿಂದ ತನ್ನಿಂದ ಮಾಡಲ್ಪಟ್ಟ ಅನಂತ ಪಾಪಗಳ ಸಮೂಹದಿಂದ ತನಗೆ ಯಾವ ಸ್ಥಿತಿ ಉಂಟಾಗುವುದೋ ಎಂಬ ಭಯವಿಲ್ಲದವನಾಗಿ ಸಂತಾಪರಹಿತನಾಗಿ, '' ನಾನು ಮಾಡುವ ಕರ್ಮಗಳಿಂದ ಆರಾಧಿತನಾಗುವ ಪರಮ ಪುರುಷನೇ ನನ್ನನ್ನು ಬಂಧನಗಳಿಂದ ಬಿಡಿಸುವನು '' ಎಂದು ಸ್ಮರಿಸುತ್ತಾ ಸುಖದಿಂದ ಕರ್ಮಯೋಗವನ್ನೇ ಮಾಡಬೇಕು ಎಂದು ಹೇಳಿದ್ದಾರೆ. (ಕರ್ಮಮಾಡುವಾಗ ಕರ್ಮದೊಂದಿಗೆ ಜ್ಞಾನಭಕ್ತಿಗಳೆರಡೂ ಮಿಳಿತವಾಗಿರಬೇಕು ಎಂದು ಈಶ್ಲೋಕದಲ್ಲಿ ತಿಳಿಸಿದ್ದಾರೆ ಹೀಗೆ ಕರ್ಮಜ್ಞಾನ ಭಕ್ತಿಗಳು ಮೂರೂ ಮಿಳಿತವಾಗಿರುವ ಈ ಮಾರ್ಗವೇ ಸರ್ವೋತ್ಕೃಷ್ಟ ಮಾರ್ಗವೆಂದು ಮುಂದಿನ ಎರಡು ಶ್ಲೋಕಗಳಿಂದ ಪ್ರತಿಪಾದಿಸುತ್ತಾರೆ)

**ಶ್ಲೋಕ 31** ಹಿಂದಿನ ಶ್ಲೋಕದಲ್ಲಿ ತಿಳಿಸಿರುವ ಮಾರ್ಗ ಸಾಕ್ಷಾತ್ ಉಪನಿಷತ್ತುಗಳ ಸಾರಭೂತವಾದ ಅರ್ಥವು ಎಂಬುದನ್ನು ಈ ಶ್ಲೋಕದಲ್ಲಿ ವಿವರಿಸುತ್ತಾರೆ ಈ ಮಾರ್ಗವನ್ನು ಅನುಸರಿಸಿ ನಡೆಯುವವರು ಉನ್ನತಿಯನ್ನು ಹೊಂದುತ್ತಾರೆ ಎಂದು ಹೇಳಿದ್ದಾರೆ— '' ಯಾವ ಮನುಷ್ಯರು ಈ ನನ್ನ ಮತ

ವನ್ನು (ಮೇಲೆ ಹೇಳಿದ ಅಭಿಪ್ರಾಯವನ್ನ), ನಿತ್ಯವೂ ಅನುಷ್ಠಿಸುತ್ತಾರೆಯೋ, ಅದರಲ್ಲಿ ಶ್ರದ್ಧಾವಂತರಾಗಿರುತ್ತಾರೆಯೋ ಮತ್ತು ಅದರಲ್ಲಿ ದೋಷವನ್ನೆಣಿಸುವುದಿಲ್ಲವೋ ಅವರೆಲ್ಲರೂ ಕೂಡ ಕರ್ಮಗಳಿಂದ ಬಿಡಲ್ಪಡುತ್ತಾರೆ

ಯಾವ ಮನುಷ್ಯರು ನಾನು ಮೇಲೆ ವಿವರಿಸಿರುವ ಈ ಮತವನ್ನು "ಇದೇ ಶಾಸ್ತ್ರಾರ್ಥವು" ಎಂದು ನಿಶ್ಚಯಿಸಿ ಇದನ್ನೇ ಅನುಷ್ಠಿಸುತ್ತಾರೆಯೋ, ಇದನ್ನು ಅನುಷ್ಠಿಸದೇ ಇದ್ದರೂ ಕೂಡ ಇದರಲ್ಲಿ ಶ್ರದ್ಧೆ ಹೊಂದಿದವರಾಗಿರುತ್ತಾರೆಯೋ ಮತ್ತು ಇದರಲ್ಲಿ ಶ್ರದ್ಧೆಯುಳ್ಳವರಾಗಿಲ್ಲದಿದ್ದರೂ ಇದರಲ್ಲಿ ದೋಷಾರೋಪಣೆ ಮಾಡುವುದಿಲ್ಲವೋ (ನಿಂದಿಸುವುದಿಲ್ಲವೋ), ಈ ಮೂರು ಮಂದಿ ಅಧಿಕಾರಿಗಳೂ ಕೂಡ ಬಂಧನಕ್ಕೆ ಕಾರಣಗಳಾದ ಅನಾದಿಕಾಲದ ಪ್ರಾರಬ್ಧಕರ್ಮಗಳಿಂದಲೂ ಬಿಡಲ್ಪಡುವರು ಈ ಮತವನ್ನು ಅನುಷ್ಠಿಸುವವರು ಕರ್ಮಬಂಧನಗಳಿಂದ ಮುಕ್ತರಾಗುವುದನ್ನು ಒಪ್ಪಬಹುದು ಇದರಲ್ಲಿ ದೋಷವಣಿಸದವರೂ ಮತ್ತು ಶ್ರದ್ಧೆಯುಳ್ಳವರೂ ಮುಕ್ತರಾಗುವುದು ಹೇಗೆ ಎಂದರೆ–ಯಾರು ಇದರಲ್ಲಿ ದೋಷಭಾವನೆ ಹೊಂದಿಲ್ಲವೋ ಮತ್ತು ಯಾರು ಇದರಲ್ಲಿ ಶ್ರದ್ಧೆಹೊಂದಿರವರೋ ಅವರೆಲ್ಲರೂ ಶೀಘ್ರದಲ್ಲಿಯೇ ಈ ಶಾಸ್ತ್ರಾರ್ಥವನ್ನೇ ಅನುಷ್ಠಿಸಿ ಕಾಲಕ್ರಮದಲ್ಲಿ ಮುಕ್ತಿ ಹೊಂದುವವರು ಎಂದು ಅಭಿಪ್ರಾಯ

**ಶ್ಲೋಕ 32**–ಮೇಲೆ ಹೇಳಿದ ಮಾರ್ಗವನ್ನು ಅನುಸರಿಸಿ ನಡೆಯದವರು ನಷ್ಟಹೊಂದುವರು ಎಂದು ಈ ಶ್ಲೋಕದಲ್ಲಿ ತಿಳಿಸಿದ್ದಾರೆ "ಯಾರು ನನ್ನ ಈ ಮತದಲ್ಲಿ ದೋಷವನ್ನೆಣಿಸಿ ಇದನ್ನು ಅನುಷ್ಠಿಸುವುದಿಲ್ಲವೋ ಅಂತಹವರನ್ನು ಸಮಸ್ತ ಜ್ಞಾನ ರಹಿತರನ್ನಾಗಿಯೂ, ಮೂಢರನ್ನಾಗಿಯೂ, ನಷ್ಟಹೊಂದಿದವರನ್ನಾಗಿಯೂ, ಅಚೇತಸರನ್ನಾಗಿಯೂ ತಿಳಿ."

ಈ ಸಮಸ್ತ ಆತ್ಮವಸ್ತುಗಳೂ ನನಗೆ ಶರೀರಗಳಾಗಿವೆ ಅದರಿಂದ ಅವುಗಳೆಲ್ಲವೂ ನನ್ನ ಆಧಾರದ ಮೇಲೆ ನಿಂತಿವೆ, ನನಗೆ ದಾಸಭೂತವಾದ ಸ್ವರೂಪವನ್ನು ಪಡೆದಿವೆ ಮತ್ತು ಕೇವಲ ನನ್ನಿಂದಲೇ ಪ್ರವರ್ತಿಸಲ್ಪಟ್ಟು ನನ್ನ ನಿಯಮನಕ್ಕೆ ಒಳಪಟ್ಟಿವೆ ಎಂಬ ಈ ನನ್ನ ಮತವನ್ನು ಯಾರು ಅನುಸರಿಸಿ ನಡೆಯುವುದಿಲ್ಲವೋ, ಅಂದರೆ ಇದನ್ನು ಅನುಸಂಧಾನ ಮಾಡುತ್ತಾ ಸರ್ವ ಗಳನ್ನೂ ಮಾಡುವುದಿಲ್ಲವೋ, ಹಾಗೆಯೇ ಯಾರು ಈ ಮತದಲ್ಲಿ ಶ್ರದ್ಧೆಯುಳ್ಳವರಾಗಿರುವುದಿಲ್ಲವೋ ಮತ್ತು ಯಾರು ಇದರಲ್ಲಿ ದೋಷಾರೋಪಣೆ ಮಾಡುತ್ತಾ ಇರುತ್ತಾರೆಯೋ ಅವರು ಗಳೆಲ್ಲರನ್ನೂ ವಿಶೇಷ ಮೂಢರನ್ನಾಗಿಯೂ, ಆ ಕಾರಣದಿಂದಲೇ ನಷ್ಟ ಹೊಂದಿದವರನ್ನಾಗಿಯೂ ಮತ್ತು ಅಚೇತಸರನ್ನಾಗಿಯೂ ತಿಳಿಯಬೇಕು. ವಸ್ತುಗಳ ಯಥಾರ್ಥ ಸ್ಥಿತಿಯ ನಿಶ್ಚಯವನ್ನು ತಿಳಿಯುವುದೇ ಮನಸ್ಸಿನ ಕಾರ್ಯವು ಅದು ಇವರಿಗ ಇಲ್ಲದೇ ಇರುವುದರಿಂದ ಇವರು ಅಚೇತಸರ. ಅಂದರೆ ವಿಪರೀತಜ್ಞಾನವುಳ್ಳವರು ಮತ್ತು ಸರ್ವ ವಿಷಯಗಳಲ್ಲಿಯೂ ವಿಶೇಷ ಮೂಢರು ಎಂದು ಅರ್ಥ

**ಸಾರಾಂಶ**–ಇಲ್ಲಿಯವರೆಗೆ ತಿಳಿಸಿರುವ ವಿಷಯಗಳ ಸಾರಾಂಶವೇನೆಂದರೆ–(1) ಕರ್ಮಯೋಗ ಮತ್ತು ಜ್ಞಾನಯೋಗ ಇವೆರಡರಲ್ಲಿ ಕರ್ಮಯೋಗವೇ ಶ್ರೇಷ್ಠವಾದದು ಏಕಂದರೆ (1) ಕರ್ಮಯೋಗವು ಸುಖಕರವಾದುದು, ಜ್ಞಾನಯೋಗವು ಕಷ್ಟಕರವಾದುದು (11) ಕರ್ಮಯೋಗವು ಪ್ರಮಾದ ರಹಿತವಾದುದು. ಇದರಲ್ಲಿ ಪ್ರಮಾದವುಂಟಾಗುವ ಭಯವಿಲ್ಲ. ಜ್ಞಾನಯೋಗವು ಪ್ರಮಾದದಿಂದ ಕೂಡಿದೆ. ಇದರ ಆಚರಣೆಯಲ್ಲಿ ಪ್ರಮಾದ ವುಂಟಾಗುವ ಭಯವಿದೆ. (111) ಕರ್ಮಯೋಗದಲ್ಲಿ ಆತ್ಮ ಜ್ಞಾನವು ಅಂತರ್ಗತವಾಗಿರುವುದರಿಂದ ಇದಕ್ಕೆ ಬೇರೆ ಸಾಧನಗಳ ಅಪೇಕ್ಷೆಯಿಲ್ಲ. ಇದು ನಿರಪೇಕ್ಷವಾದುದು, ಜ್ಞಾನಯೋಗವು ಶರೀರಧಾರಣಾದಿಗಳಿಗಾಗಿ ಕರ್ಮಗಳ ಅಪೇಕ್ಷೆಯುಳ್ಳದ್ದು. ಜ್ಞಾನಯೋಗದ ಅಧಿಕಾರಿಯೂ ಶರೀರಧಾರಣೆಗಾಗಿ ಕರ್ಮಗಳನ್ನು ಮಾಡಲೇಬೇಕು

(2) ಪ್ರಕೃತಿ ಸಂಬಂಧವನ್ನು ಅಂದರೆ ಶರೀರಸಂಬಂಧವನ್ನು ಹೊಂದಿರುವ ಈ ಬದ್ಧಜೀವಾತ್ಮನಿಗೆ ಪ್ರಕೃತಿಯ ಗುಣಗಳಾದ ಸತ್ತ್ವರಜಸ್ತಮೋಗುಣಗಳ ಅಧಿಕತೆಯಿಂದ ಕರ್ತೃತ್ವವು ಉಂಟಾಗುತ್ತದೆ ಮತ್ತು ಆ ಕರ್ತೃತ್ವವೂ ಪರಮಪುರುಷನಿಗೆ ಅಧೀನವಾದುದು ಎಂಬುದನ್ನು ಅನುಸಂಧಾನ ಮಾಡುತ್ತಾ ಕರ್ಮಯೋಗವನ್ನೇ ಅನುಷ್ಠಿಸಬೇಕು.

(3) ಜ್ಞಾನಿಯೂ ಕೂಡ ಶರೀರಯಾತ್ರೆಗಾಗಿಯೂ ಮತ್ತು ಲೋಕಕಲ್ಯಾಣಕ್ಕಾಗಿಯೂ ಕರ್ಮಯೋಗವನ್ನೇ ಮಾಡಬೇಕು

### VI ಜ್ಞಾನಯೋಗದ ಅಭ್ಯಾಸಗಳ ಕಷ್ಟಸಾಧ್ಯತೆ ಮತ್ತು ಪ್ರಮಾದದಿಂದ ಕೂಡಿರುವಿಕೆ—(ಶ್ಲೋಕಗಳು 33 ರಿಂದ 43)

(1) ಸಮಸ್ತ ಜೀವಿಗಳೂ ಪ್ರಕೃತಿಯ ಗುಣಗಳನ್ನು ಅನುಸರಿಸಿ ನಡೆಯುವುದರಿಂದ ಜ್ಞಾನಯೋಗಕ್ಕೆ ಅತ್ಯವಶ್ಯವಾದ

ಇಂದ್ರಿಯ ನಿಗ್ರಹವು ಬಹಳ ಕಷ್ಟವಾದುದು– (ಶ್ಲೋಕಗಳು 33 ರಿಂದ 36) **ಶ್ಲೋಕ 33–** "ಜ್ಞಾನಿಯಾದವನೂ ಕೂಡ ತನ್ನ ಪ್ರಕೃತಿಗೆ (ಶರೀರಕ್ಕೆ ಸಂಬಂಧಿಸಿದ ಪೂರ್ವವಾಸನೆಗೆ) ಅನುಗುಣವಾದ ಪ್ರವೃತ್ತಿಯುಳ್ಳವನಾಗುತ್ತಾನೆ ಸಮಸ್ತ ಜೀವಿಗಳೂ (ಶರೀರದಿಂದ ಕೂಡಿದ ಬದ್ಧಚೇತನರೂ) ಪ್ರಕೃತಿಯನ್ನು ಅನುಸರಿಸಿ ನಡೆಯುತ್ತಾರೆ. ಇಂದ್ರಿಯ ನಿಗ್ರಹಾದಿಗಳು ಏನನ್ನು ಮಾಡಬಲ್ಲವು'

ಶಾಸ್ತ್ರಗಳು ಪ್ರಕೃತಿ ಸಂಸರ್ಗ ರಹಿತವಾದ ಶುದ್ಧ ಆತ್ಮಸ್ವರೂಪವನ್ನು ವಿವರಿಸಿ ಅದನ್ನು ಮನನಮಾಡತಕ್ಕದ್ದು ಎಂದು ಪ್ರತಿಪಾದಿಸುತ್ತವೆ ಆದರೆ ಆ ಶಾಸ್ತ್ರಜ್ಞಾನ ಪಡೆದವನೂ ಕೂಡ ತನ್ನ ಪ್ರಕೃತಿಗೆ ಅಂದರೆ ತನ್ನ ಪ್ರಾಚೀನಕರ್ಮ ವಾಸನೆಗೆ ಅನುಗುಣವಾದ ಪ್ರಾಕೃತಿಕ ಶಬ್ದಾದಿ ವಿಷಯಗಳಲ್ಲಿ ಪ್ರವೃತ್ತಿಯುಳ್ಳವನಾಗುತ್ತಾನೆ ಏತಕ್ಕೆಂದರೆ ಜಡವಾದ ಶರೀರ ಸಂಬಂಧವುಳ್ಳ ಸಕಲ ಜೀವಿಗಳೂ ಅಂದರೆ ಶರೀರದಿಂದ ಕೂಡಿದ ಬದ್ಧಚೇತನರಲ್ಲರೂ ಪ್ರಕೃತಿಯನ್ನೇ ಅಂದರೆ ಅನಾದಿಕಾಲದಿಂದಲೂ ಅನುಸರಿಸಿ ಬಂದಿರುವ ವಾಸನೆಗಳನ್ನೇ ಅನುಸರಿಸಿ ನಡೆಯುವರು ಶಾಸ್ತ್ರಗಳು ಪ್ರಕೃತಿಯ ಮತ್ತು ಅದರ ಗುಣಗಳ ವಾಸನೆಯನ್ನು ಕಿತ್ತೊಗೆಯಬೇಕು ಎಂದು ಉಪದೇಶ ಮಾಡಿದ ಮಾತ್ರಕ್ಕೆ ಶಾಸ್ತ್ರವನ್ನು ತಿಳಿದವನು ಅದನ್ನು ತ್ಯಜಿಸುವುದಕ್ಕೆ ಆಗತ್ತದೆಯೆ? ಶಾಸ್ತ್ರಜ್ಞಾನವುಳ್ಳವನೂ ಕೂಡ ತನ್ನನ್ನು ಹಿಂಬಾಲಿಸಿ ಬಂದಿರುವ ಪ್ರಕೃತಿಯ ಹಳೆಯ ವಾಸನೆಗಳ ಪ್ರಕಾರವೇ ಶಬ್ದಾದಿ ವಿಷಯಗಳಲ್ಲಿ ಪ್ರವರ್ತಿಸುತ್ತಾನೆಯೇ ವಿನಹ ಶಾಸ್ತ್ರದಲ್ಲಿ ಬೋಧಿಸಿರುವ ಪ್ರಕೃತಿ ವಾಸನೆಗಳಿಗೆ ವಿರೋಧವಾದ ಇಂದ್ರಿಯ ನಿಗ್ರಹಾದಿಗಳನ್ನು ಮಾಡಲು ಶಕ್ತನಾಗುವುದಿಲ್ಲ

**ಶ್ಲೋಕ–34** ಜೀವಿಗಳು ಪ್ರಕೃತಿಯನ್ನು ಹಿಂಬಾಲಿಸುವ ರೀತಿಯನ್ನು ಈ ಶ್ಲೋಕದಲ್ಲಿ ವಿವರಿಸುತ್ತಾರೆ "ಇಂದ್ರಿಯಗಳಿಗೆ ಸೇರಿದ ವಿಷಯ ಭೋಗಗಳಲ್ಲಿ ರಾಗದ್ವೇಷಗಳು ವ್ಯವಸ್ಥಿತವಾಗಿವೆ ಆ ರಾಗದ್ವೇಷಾದಿಗಳೇ ಈ ಬದ್ಧಜೀವಿಯಾದ ಜ್ಞಾನಿಗೆ ಶತ್ರುಗಳಾಗಿವೆ ಅವುಗಳಿಗೆ ವಶನಾಗಬೇಡ'

ಪ್ರತಿ ಜೀವಿಯಲ್ಲೂ ಅವನ ಶರೀರದಲ್ಲಿರುವ ಕಿವಿ, ಕಣ್ಣು, ಮೂಗು, ನಾಲಿಗೆ ಮತ್ತು ಚರ್ಮ ಎಂಬ ಐದು ಜ್ಞಾನೇಂದ್ರಿಯಗಳು, ತಮ್ಮ ತಮ್ಮ ವಿಷಯಗಳಾದ ಶಬ್ದ, ರೂಪ, ಗಂಧ ರಸ, ಸ್ಪರ್ಶಾದಿ ವಿಷಯಗಳನ್ನೂ ಮತ್ತು ಅದೇ ರೀತಿ ಬಾಯಿ, ಕೈ, ಕಾಲು ಮುಂತಾದ, ಐದು ಕರ್ಮೇಂದ್ರಿಯಗಳು ತಮ್ಮ ತಮ್ಮ ವಿಷಯಗಳಾದ ಮಾತಾಡುವಿಕೆ, ಕೈ ಕೆಲಸ, ಸಂಚಾರಾದಿ ವಿಷಯಗಳನ್ನೂ ಅಯಾ ಜೀವಗಳ ಪ್ರಾಚೀನ ವಾಸನೆಗಳ ಪ್ರಕಾರ ಅನುಭವಿಸಬೇಕೆಂಬ ಇಚ್ಛೆಯು (ರಾಗವು) ಅನಿವಾರ್ಯವಾಗಿ ನಿಷ್ಕರ್ಷಿತವಾಗಿದೆ ಈ ವಿಷಯಾನುಭವಗಳು ತಡೆಯಲ್ಪಟ್ಟು ಇಂದ್ರಿಯಗಳ ರಾಗಕ್ಕೆ ತಡೆ ಉಂಟಾದರೆ ಅನಿವಾರ್ಯವಾಗಿ ದ್ವೇಷ (ಕ್ರೋಧ) ಉಂಟಾಗುತ್ತದೆ ಎಂಬುದೂ ನಿಷ್ಕರ್ಷಿತವಾಗಿದೆ. ಜ್ಞಾನಯೋಗವನ್ನು ಅನುಷ್ಠಿಸಲು ಪ್ರಯತ್ನಿಸುತ್ತಾ ಸಕಲ ಇಂದ್ರಿಯಗಳನ್ನೂ ಜಯಿಸಬೇಕೆಂದಿರುವವನನ್ನೂ ಕೂಡ ಈ ರಾಗದ್ವೇಷಾದಿಗಳೆರಡೂ (ಕಾಮಕ್ರೋಧಾದಿಗಳೆರಡೂ) ತಮ್ಮ ವಶಪಡಿಸಿಕೊಂಡು ಬಲಾತ್ಕಾರವಾಗಿ ಅವನನ್ನು ತಮ್ಮ ಕೆಲಸ ಕಾರ್ಯಗಳಲ್ಲಿ ನಿಯೋಜಿಸುತ್ತವೆ ಅಂದರ ಆ ರಾಗ ದ್ವೇಷಗಳ ಕಾರ್ಯಗಳಾದ ವಿಷಯಾನುಭವಗಳಲ್ಲಿ ಪ್ರವರ್ತಿಸುವಂತೆ ಮಾಡುತ್ತವೆ ಹೀಗೆ ರಾಗ ದ್ವೇಷಗಳೆರಡೂ ಜ್ಞಾನಿಯಾದ ಪುರುಷನಿಗೆ ಪ್ರಬಲ ಶತ್ರುಗಳಾಗಿವೆ ಇವುಗಳಿಗೆ ವಶನಾಗಿ ಜ್ಞಾನಯೋಗವನ್ನು ಆರಂಭಿಸಿದ ಸಾಧಕನು ಆತ್ಮಸ್ವರೂಪದ ಅನುಭವದಿಂದ ವಿಮುಖನಾಗಿ ನಷ್ಟನಾಗುತ್ತಾನೆ ಆದ್ದರಿಂದ ಜ್ಞಾನಯೋಗವನ್ನು ಆರಂಭಿಸಿ ರಾಗದ್ವೇಷಾದಿಗಳಿಗೆ ವಶನಾಗಿ ನಷ್ಟನಾಗಬೇಡ ಏಕೆಂದರೆ ರಾಗದ್ವೇಷಗಳು ಜಯಿಸಲಸಾಧ್ಯವಾದ ಶತ್ರುಗಳಾಗಿವೆ ಮತ್ತು ಆತ್ಮಜ್ಞಾನ ವಿಷಯಕವಾದ ಅಭ್ಯಾಸಗಳನ್ನು ತಪ್ಪಿಸುತ್ತವೆ (ಆದ್ದರಿಂದ ರಾಗದ್ವೇಷಗಳನ್ನು ಜಯಿಸದೆ ಜ್ಞಾನಯೋಗವನ್ನು ಆರಂಭಿಸುವುದರಿಂದ ಯಾವ ಫಲವೂ ಇಲ್ಲ ಎಂದು ಅಭಿಪ್ರಾಯ).

**ಶ್ಲೋಕ—35**

"ಚೆನ್ನಾಗಿ ಅನುಷ್ಠಿಸಲ್ಪಟ್ಟ ಪರಧರ್ಮಕ್ಕಿಂತ ಗುಣರಹಿತವಾದುದಾಗಿದ್ದರೂ ಕೂಡ ತನ್ನ ಧರ್ಮವೇ ಶ್ರೇಷ್ಠವು ತನ್ನ ಧರ್ಮದಲ್ಲಿ (ತನ್ನ ಸ್ವಂತ ಧರ್ಮಾನುಷ್ಠಾನ ಕಾಲದಲ್ಲಿ) ಮರಣವು ಶ್ರೇಯಸ್ಕರವು. ಪರಧರ್ಮದಲ್ಲಿ ಮರಣವು (ಇತರರ ಧರ್ಮಾನುಷ್ಠಾನ ಮಾಡುತ್ತಾ ಮರಣ ಹೊಂದಿದರೆ) ಭಯಕಾರಕವಾದುದು ( ಅಪಾಯಕರವಾದುದು)".

ಮೇಲೆರಡು ಶ್ಲೋಕಗಳಲ್ಲಿ ಹೇಳಿರುವಂತೆ ಪ್ರಕೃತಿ ಸಂಬಂಧವುಳ್ಳ ಜೀವಿಗಳಿಗೆಲ್ಲಾ ಕರ್ಮವಾಸನೆಯನ್ನು ಅನುಸರಿಸಿ ನಡೆಯುವ ಪ್ರವೃತ್ತಿ ಇರುವುದರಿಂದ ಕರ್ಮಯೋಗವೇ ಸುಖಸಾಧ್ಯವಾಗಿ ಸ್ವಧರ್ಮವಾಗಿದೆ ಮತ್ತು ಗುಣರಹಿತವಾದುದಾಗಿದ್ದರೂ ಕೂಡ ಪ್ರಮಾದರಹಿತವಾಗಿದೆ.

ಆದರೆ ಜ್ಞಾನಯೋಗವು ಕಷ್ಟ ಸಾಧ್ಯವಾಗಿ ಪರಧರ್ಮವಾಗಿದೆ. ಅದುಗುಣಯುಕ್ತವಾಗಿದ್ದರೂ ಕೂಡ ಸ್ವಲ್ಪಕಾಲ ಅನುಷ್ಠಿಸಲ್ಪಟ್ಟಿದ್ದಾಗಿ ಪ್ರಮಾಣದಿಂದ ಕೂಡಿದುದಾಗಿದೆ ಆದ್ದರಿಂದ ಪರಧರ್ಮವಾದ ಜ್ಞಾನಯೋಗ ಅನುಷ್ಠಾನಕ್ಕಿಂತ ಸ್ವಧರ್ಮವಾದ ಕರ್ಮಯೋಗ ಅನುಷ್ಠಾನವೇ ಸರ್ವತಿಗೂ ಶ್ರೇಷ್ಠವಾದುದಾಗಿದೆ. ತನ್ನಿಂದಲೇ ಸ್ವಂತವಾಗಿ ಸಂಪಾದಿಸಲು ಯೋಗ್ಯವಾಗಿರುವುದರಿಂದ ಸ್ವಧರ್ಮವಾಗಿರುವ ಈ ಕರ್ಮಯೋಗದಲ್ಲಿ ನಿರತನಾಗಿರುವ ಪುರುಷನು ಒಂದೇ ಜನ್ಮದಲ್ಲಿ ಫಲವನ್ನು ಹೊಂದದೆ ಮರಣ ಹೊಂದಿದರೂ ಕೂಡ ಶ್ರೇಯಸ್ಸನ್ನು ಪಡೆಯುವನು ಕರ್ಮಯೋಗದ ಅಭ್ಯಾಸಗಳ ಅನುಷ್ಠಾನದಲ್ಲಿ ವಿಘ್ನಗಳ ಹೊಡೆತದಿಂದ ನಷ್ಟವಾಗುವ ಭಯವಿಲ್ಲದೇ ಇರುವುದರಿಂದ ಅವನು ಮುಂದಿನ ಜನ್ಮದಲ್ಲಿಯೂ ಕೂಡ ವ್ಯಾಕುಲರಹಿತವಾದ ಕರ್ಮಯೋಗವನ್ನು ಪ್ರಾರಂಭಿಸಿ ಮುಂದುವರಿಸುವ ಸಂಭವವುಂಟು ಆದರೆ ಪ್ರಕೃತಿ ಸಂಬಂಧ ಹೊಂದಿರುವ ಜೀವಿಗೆ ತನ್ನಿಂದಲೇ ಸ್ವಂತವಾಗಿ ಸಂಪಾದಿಸಲು ಅವಶ್ಯವಾಗಿರುವ ಜ್ಞಾನಯೋಗ ಅಭ್ಯಾಸಗಳ ಅನುಷ್ಠಾನದಲ್ಲಿ ರಾಗದ್ವೇಷಾದಿ ವಿಘ್ನಗಳ ಹೊಡೆತದಿಂದ ನಷ್ಟವಾಗುವ ಸಂಭವಗಳುಂಟು. ಅಂದರೆ ತನಗೆ ಯೋಗ್ಯವಲ್ಲದ, ತನ್ನಶಕ್ತಿಗೆ ಮೀರಿದ ಜ್ಞಾನಯೋಗವನ್ನು ಕೆಲವು ಕಾಲಮಾತ್ರ ಸಂಪೂರ್ಣವಾಗಿ ಅನುಷ್ಠಿಸಿ, ಕಾಮಕ್ರೋಧಾದಿಗಳ ಬಾಧೆಯಿಂದ ಅದನ್ನು ಅರ್ಧದಲ್ಲಿ ತ್ಯಜಿಸಿದರೆ ಅದರಿಂದ ಯಾವ ಪ್ರಯೋಜನವೂ ಉಂಟಾಗುವುದಿಲ್ಲ ಅದಕ್ಕೆ ಬದಲು ಪ್ರಮಾದವುಂಟಾಗುವ ಸಂಭವವುಂಟು. ಆದ್ದರಿಂದ ಮೊದಲು ತನಗೆ ಯೋಗ್ಯವಾದ, ಸುಖಕರವಾದ ಕರ್ಮಯೋಗವನ್ನು ಅನುಷ್ಠಿಸಿ ಅದರಲ್ಲಿ ಸಿದ್ಧಿಪಡೆದ ಮೇಲೆ ಜ್ಞಾನಯೋಗವನ್ನು ಕೈಗೊಳ್ಳುವುದು ಉತ್ತಮವಾದ ಮಾರ್ಗ. ತನ್ನ ಧರ್ಮವಾದ ಕರ್ಮಯೋಗವನ್ನು ಬಿಟ್ಟು ಅದಕ್ಕಿಂತ ಮೇಲಿನ ಧರ್ಮವಾದ ಜ್ಞಾನಯೋಗವನ್ನು ಆಚರಿಸುವುದು ಅನರ್ಥಕಾರಿ ಎಂದು ಅಭಿಪ್ರಾಯ.

(2) ಜ್ಞಾನಕ್ಕೆ ಪ್ರಬಲವಿರೋಧಿಗಳಾದ ಕಾಮಕ್ರೋಧಾದಿಗಳಿಂದ ಪ್ರೇರಿತನಾಗಿ ಚೇತನನು ಪಾಪಕರ್ಮಗಳನ್ನು ಮಾಡುವಿಕೆ. (ಶ್ಲೋಕಗಳು 36 ರಿಂದ 40)

**ಶ್ಲೋಕ 36**—ಅರ್ಜುನನು ಹೇಳುತ್ತಾನೆ, "ಹಾಗಾದ ಪಕ್ಷದಲ್ಲಿ ಎಲೈ ಕೃಷ್ಣನೇ! ಇವನು (ಈ ಜ್ಞಾನ ಯೋಗದಲ್ಲಿ ನಿರತನಾದ ಮನುಷ್ಯನು) ಇಷ್ಟವಿಲ್ಲದಿದ್ದರೂ ಕೂಡ ಯಾವುದರಿಂದ ಪ್ರೇರಿತನಾಗಿ ಬಲಾತ್ಕಾರದಿಂದ ನಿಯಮಿಸಲ್ಪಟ್ಟವನಂತೆ ಪಾಪವನ್ನು ಮಾಡುತ್ತಾನೆ."

ಜ್ಞಾನಯೋಗದ ಅಭ್ಯಾಸಗಳಲ್ಲಿ ನಿರತನಾಗಿರುವ ಮನುಷ್ಯನಿಗೆ ವಿಷಯಗಳನ್ನು ಅನುಭವಿಸಬೇಕೆಂಬ ಇಚ್ಛೆ ಇರುವುದಿಲ್ಲ ಆದಾಗ್ಯೂ ಅವನು ಯಾವುದರಿಂದ ಪ್ರೇರಿತನಾಗಿ ವಿಷಯಾನುಭವ ರೂಪವಾದ ಪಾಪವನ್ನು ಬಲಾತ್ಕಾರದಿಂದ ನಿಯಮಿಸಲ್ಪಟ್ಟವನಂತೆ ಆಚರಿಸುತ್ತಾನೆ ಎಂದು ಅರ್ಜುನನು ಶ್ರೀ ಕೃಷ್ಣನನ್ನು ಕೇಳುತ್ತಾನೆ.

**ಶ್ಲೋಕ 37**—ಶ್ರೀ ಕೃಷ್ಣನು ಹೇಳುತ್ತಾನೆ—"ಇದು (ಹೀಗೆ ಪಾಪ ಮಾಡಲು ಪ್ರೇರಿಸುವಂತಹದು) ರಜೋಗುಣದಿಂದ ಉತ್ಪನ್ನವಾದ ಕಾಮವು (ವಿಷಯಾಭಿಲಾಷೆಯು) ಮತ್ತು ಇದು (ಹೀಗೆ ಪಾಪ ಮಾಡಲು ಪ್ರೇರಿಸುವಂತಹದು.) ರಜೋಗುಣದಿಂದ ಉತ್ಪನ್ನವಾದ ಕ್ರೋಧವು. ಈ ಕಾಮವು ಹೆಚ್ಚಾಗಿ ಆಹಾರವನ್ನು ತಿನ್ನುವಂತಹುದು ಮತ್ತು ಈ ಕ್ರೋಧವು ಈ ಕಾಮವು ಹೆಚ್ಚಾಗಿ ಆಹಾರವನ್ನು ತಿನ್ನುವಂತಹುದು ಮತ್ತು

ಈ ಕ್ರೋಧವು ಹೆಚ್ಚಾಗಿ ಪಾಪವನ್ನು ಮಾಡುವಂತಹದು. ಇದನ್ನು ಅಂದರೆ ಈ ಕಾಮಕ್ರೋಧಗಳನ್ನು ಈ ಸಂದರ್ಭದಲ್ಲಿ (ಜ್ಞಾನಯೋಗಾರಂಭ ಕಾಲದಲ್ಲಿ) ಶತ್ರುವನ್ನಾಗಿ ತಿಳಿ.

ಸತ್ತ್ವರಜಸ್ತಮೋಗುಣಗಳಿಂದ ಕೂಡಿರುವ ಪ್ರಕೃತಿ ಸಂಬಂಧವುಳ್ಳ ಈ ಜ್ಞಾನ ಯೋಗವನ್ನು ಅಭ್ಯಾಸ ಮಾಡುವ ಬದ್ಧ ಜೀವಾತ್ಮನಿಗೆ ರಜೋಗುಣದಿಂದ ಉತ್ಪನ್ನವಾದ ಹಿಂದಿನ ಕರ್ಮ ವಾಸನೆಗಳಿಂದ ಉಂಟಾದ ಶಬ್ದಾದಿ ವಿಷಯಕವಾದ ಕಾಮವೂ ಮತ್ತು ಅದರಿಂದ ಉಂಟಾದ ಕ್ರೋಧವೂ ಜ್ಞಾನ ಯೋಗಕ್ಕೆ ಶತ್ರುಗಳಾಗಿವೆ. ಈ ಶ್ಲೋಕದಲ್ಲಿರುವ ಮಹಾಶನ ಎಂಬುದು ಕಾಮಕ್ಕೂ ಮಹಾ ಪಾಪ್ಮಾ ಎಂಬುದು ಕ್ರೋಧಕ್ಕೂ ವಿಶೇಷಣವಾಗಿ ಅನ್ವಯಿಸುತ್ತದೆ. ಕಾಮವು ಅಂದರೆ ವಿಷಯಾಭಿಲಾಷೆಯು ಎಷ್ಟು ಅನುಭವಿಸಿದರೂ ಇನ್ನೂ ಬೇಕು, ಇನ್ನೂ ಬೇಕು ಎಂಬ ಆಸೆಯಿಂದ ಕೂಡಿದುದಾಗಿದೆ. ಆದ್ದರಿಂದ ಅದು ಹೆಚ್ಚು ಹೆಚ್ಚಾಗಿ ಆಹಾರವನ್ನು ತಿನ್ನುವಂತಹದು ಅಂದರೆ ಹೆಚ್ಚು ಹೆಚ್ಚಾಗಿ ವಿಷಯೋಪಭೋಗಗಳನ್ನು ಅನುಭವಿಸುವಂತಹುದು. ಎಷ್ಟು ಅನುಭವಿಸಿದರೂ ತೃಪ್ತಿಯಿಲ್ಲದುದು. ಆದ್ದರಿಂದ ಇದು ಇವನನ್ನು ಸಮಸ್ತ ವಿಷಯೋಪಭೋಗಗಳಲ್ಲಿ ಬಲಾತ್ಕಾರವಾಗಿ ಆಕರ್ಷಿಸುತ್ತದೆ. ಈ ಕಾಮದ ಇಷ್ಟ ಪ್ರಾಪ್ತಿಗೆ ಅಂದರೆ ವಿಷಯಾಭಿಲಾಷೆಯ ಉಪಭೋಗಕ್ಕೆ ಏನಾದರೂ ವಿಘ್ನ ಉಂಟಾದರೆ ಆಗ ಕ್ರೋಧವು ಪ್ರಾಪ್ತವಾಗುತ್ತದೆ. ಈ ಕಾಮವೇ ತನ್ನ ವಿಷಯೋಪಭೋಗಕ್ಕೆ ಅಡ್ಡಿಮಾಡಲು ಕಾರಣರಾದ ಚೇತನರನ್ನು ಕುರಿತು ಕ್ರೋಧರೂಪವಾಗಿ ಪರಿಣಾಮ ಹೊಂದುತ್ತದೆ. ಈ ಕ್ರೋಧವು ವಿಶೇಷ ಪಾಪ ಮಾಡುವಂತಹದು ಆದ್ದರಿಂದ ಅದನ್ನು ಮಹಾಪಾಪ್ಮ ಎಂದು ಹೇಳಿದ್ದಾರೆ ಅದು ಮನುಷ್ಯನಿಂದ ಅನೇಕ ಪಾಪಗಳನ್ನು ಮಾಡಿಸುತ್ತದೆ. ಚೇತನನನ್ನು ಪರಹಿಂಸಾದಿ ಮಹಾಪಾಪ ಕಾರ್ಯಗಳಲ್ಲಿ ಪ್ರವರ್ತಿಸುವಂತೆ ಮಾಡುತ್ತದೆ. ಆದ್ದರಿಂದ ರಜೋಗುಣದಿಂದ ಉತ್ಪನ್ನವಾದ ಈ ಕಾಮ ಕ್ರೋಧಾದಿಗಳನ್ನು ಜ್ಞಾನಯೋಗಕ್ಕೆ ಸಹಜವಾದ (ಸ್ವಾಭಾವಿಕವಾದ) ವಿರೋಧಿಗಳಾದ ಶತ್ರುಗಳೆಂದು ತಿಳಿ. ಅವರವರ ಪೂರ್ವ ಕರ್ಮವಾಸನಾನುಗುಣವಾಗಿ ರಜೋಗುಣದ ಮೂಲಕ ಕಾಮ ಕ್ರೋಧಾದಿಗಳು ಉಂಟಾಗುವುದರಿಂದ ಅದು ಸಹಜವಾದುದು ಸ್ವಾಭಾವಿಕವಾದುದು ಎನ್ನಬಹುದು.

**ಶ್ಲೋಕ 38**—"ಹೇಗೆ ಅಗ್ನಿಯು ಹೊಗೆಯಿಂದಲೂ, ಕನ್ನಡಿಯು ಕೊಳೆಯಿಂದಲೂ ಮರೆಸಲ್ಪಡುತ್ತದೆಯೋ, ಹೇಗೆ ಗರ್ಭ ಚೀಲದಿಂದ ಗರ್ಭವು ಆವರಿಸಲ್ಪಟ್ಟಿದೆಯೋ ಹಾಗೆಯೇ ಈ ಜೀವ ಸಮುದಾಯವೆಲ್ಲವೂ ಆ ಕಾಮ ಕ್ರೋಧಗಳಿಂದ ಆವರಿಸಲ್ಪಟ್ಟಿದೆ".

ಹೇಗೆ ಹೊಗೆಯಿಂದ ಬೆಂಕಿಯೂ, ಕೊಳೆಯಿಂದ ಕನ್ನಡಿಯೂ ಮರೆಸಲ್ಪಟ್ಟಿದೆಯೋ ಮತ್ತು ಹೇಗೆ ಗರ್ಭ ಚೀಲದಿಂದ ಗರ್ಭವು ಆವರಿಸಲ್ಪಟ್ಟಿದೆಯೋ ಹಾಗೆಯೇ ಕಾಮ ಈ ಜೀವ ಸಮುದಾಯವೆಲ್ಲವೂ ಆವರಿಸಲ್ಪಟ್ಟಿದೆ ಇಲ್ಲಿ "ಇದಂ" ಎಂದು ಶ್ರೀಕೃಷ್ಣನು ತನ್ನ ಮುಂದೆ ನೆರೆದಿರುವ ಸೈನ್ಯವನ್ನೆಲ್ಲಾ ತೋರಿಸಿ ಈ ಜೀವಸಮುದಾಯವೆಲ್ಲಾ ಕಾಮದಿಂದ ಆವರಿಸಲ್ಪಟ್ಟಿದೆ ಎಂದು ಹೇಳಿದ್ದಾನೆ

**ಶ್ಲೋಕ 39**—ಕಾಮ ಕ್ರೋಧಗಳು ಜೀವಾತ್ಮನನ್ನು ಆವರಿಸುವ ಕ್ರಮವನ್ನು ಇಲ್ಲಿ ಹೇಳುತ್ತಾರೆ.

"ಜ್ಞಾನಿಯಾದವನ ಜ್ಞಾನವು ಪೂರ್ತಿಗೊಳಿಸಲು ಅಶಕ್ಯವಾದ ಮತ್ತು ತೃಪ್ತಿಯೇ ಇಲ್ಲದ ಈ ಕಾಮವೆಂಬ ನಿತ್ಯ ವೈರಿಯಿಂದ ಆವರಿಸಲ್ಪಟ್ಟಿದೆ."

ಜ್ಞಾನವನ್ನೇ ಸ್ವಭಾವವಾಗಿ ಉಳ್ಳ ಜ್ಞಾನ ಯೋಗದಲ್ಲಿ ನಿರತನಾಗಿರುವ ಈ ಪುರುಷನ ಆತ್ಮ ವಿಷಯಕವಾದ ಜ್ಞಾನವು ಈ ಪೂರ್ತಿಗೊಳಿಸಲು ಅನರ್ಹವಾದ ವಿಷಯಗಳನ್ನು ಹೊಂದಿರುವ ಸಾಕು ಎಂಬ ತೃಪ್ತಿಯೇ ಇಲ್ಲದ ಮತ್ತು ವಿಷಯಗಳಲ್ಲಿ ವ್ಯಾಮೋಹವನ್ನು ಹುಟ್ಟಿಸುವಂತಹ ಈ ನಿತ್ಯ ವೈರಿಯಾದ ಕಾಮದಿಂದ ಆವರಿಸಲ್ಪಟ್ಟಿದೆ (ಈ ಕಾಮವು ಪ್ರಕೃತಿ ಸಂಸರ್ಗ ಕಾಲದಿಂದ ಹಿಡಿದು ಪ್ರಕೃತಿ ಸಂಬಂಧವಿರುವ ತನಕ ವೈರಿಯಾಗಿರುವುದರಿಂದ ಇದನ್ನು ನಿತ್ಯ ವೈರಿ ಎಂದು ಹೇಳಿದ್ದಾರೆ )

**ಶ್ಲೋಕ 40**—ಈ ಕಾಮವು ಯಾವ ಯಾವ ಉಪಕರಣಗಳ ಮೂಲಕ ಆತ್ಮನನ್ನು ಆಶ್ರಯಿಸಿ ತನ್ನ ವಶಮಾಡಿಕೊಳ್ಳುತ್ತದೆ ಎಂಬುದನ್ನು ಕುರಿತು ಇಲ್ಲಿ ಹೇಳುತ್ತಾರೆ

"ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ ಇವುಗಳು ಈ ಕಾಮಕ್ಕೆ ಆಶ್ರಯಸ್ಥಾನಗಳು ಎಂದು ಹೇಳಲ್ಪಡುತ್ತದೆ ಇದು (ಈ ಕಾಮವು) ಇವುಗಳ ಮೂಲಕ (ಇಂದ್ರಿಯ, ಮನಸ್ಸು, ಬುದ್ಧಿಗಳ ಮೂಲಕವಾಗಿ) ಜ್ಞಾನವನ್ನು ಆವರಿಸಿಕೊಂಡು ದೇಹಿಯಾದ ಆತ್ಮನನ್ನು ಮೋಹಗೊಳಿಸುತ್ತದೆ."—

ಈ ಕಾಮವು ಇಂದ್ರಿಯಗಳ ಮೂಲಕ ಅಂದರೆ ಇಂದ್ರಿಯಗಳ ಮೂಲಕ ಅಂದರೆ ಇಂದ್ರಿಯ ಮನಸ್ಸು ಬುದ್ಧಿಗಳ ಮೂಲಕ ಆತ್ಮನನ್ನು ತನ್ನ ವಶಮಾಡಿಕೊಂಡು ಆ ಮೇಲೆ ಅವನ ಮೇಲೆ ತನ್ನ ಆಧಿಪತ್ಯವನ್ನು ನಡೆಸುತ್ತದೆ. ಆದ್ದರಿಂದ ಈ ಕಾಮಕ್ಕೆ ಇಂದ್ರಿಯ, ಮನಸ್ಸು, ಬುದ್ಧಿ ಇವು ಮೂರೂ ಆಶ್ರಯ ಸ್ಥಾನಗಳಾಗಿವೆ. ಹೀಗೆ ಕಾಮಕ್ಕೆ ಆಶ್ರಯ ಸ್ಥಾನಗಳಾದ ಮತ್ತು ವಿಷಯೋಪಭೋಗಗಳಲ್ಲಿಯೇ ಸಕ್ತಗಳಾದ ಈ ಇಂದ್ರಿಯ ಮನಸ್ಸು ಮತ್ತು ಬುದ್ಧಿಗಳ ಮೂಲಕ ಕಾಮವು ಪ್ರಕೃತಿ ಸಂಬಂಧವುಳ್ಳ ದೇಹವನ್ನು ಹೊಂದಿರುವ ದೇಹಿಯಾದ ಆತ್ಮನ ಜ್ಞಾನವನ್ನು ಆವರಿಸಿ, ಪ್ರಕೃತಿ ಸಂಬಂಧವುಳ್ಳ ಆ ಜೀವಿಯನ್ನು ನಾನಾ ವಿಧವಾಗಿ ಮೋಹಗೊಳಿಸುತ್ತದೆ. ಅಂದರೆ ಆತ್ಮಾನುಭವದಲ್ಲಿ ವಿಮುಖನನ್ನಾಗಿಯೂ, ವಿಷಯಾನುಭವದಲ್ಲಿ ಆಸಕ್ತಿ ಉಳ್ಳವನನ್ನಾಗಿಯೂ ಮಾಡುತ್ತದೆ ಎಂದು ಅರ್ಥ.

**(111) ಮೊದಲು ಕಾಮ ಕ್ರೋಧಾದಿಗಳನ್ನು ಕರ್ಮಯೋಗದ ಮೂಲಕ ಸಂಪೂರ್ಣವಾಗಿ ನಾಶ ಮಾಡದರೆ ಅನಂತರ ಜ್ಞಾನಯೋಗಕ್ಕೆ ಅರ್ಹನಾಗುವೆ.**

**(ಶ್ಲೋಕಗಳು 41, 42, 43)**

**ಶ್ಲೋಕ 41**— "ಆದ್ದರಿಂದ ನೀನು ಮೊದಲು ಇಂದ್ರಿಯಗಳನ್ನು ತಡೆದು ಜ್ಞಾನವನ್ನೂ ವಿಜ್ಞಾನವನ್ನೂ ನಾಶಪಡಿಸುವ ಮಹಾಪಾಪಿಯಾದ ಈ ಕಾಮವನ್ನು ಸಂಪೂರ್ಣವಾಗಿ ನಾಶಮಾಡು "—

ಸರ್ವೇಂದ್ರಿಯಗಳ ವ್ಯಾಪಾರಗಳ ಶಾಂತತೆಯ ರೂಪವಾದ ಜ್ಞಾನಯೋಗದಲ್ಲಿ ಪ್ರವರ್ತಿಸಿದವನನ್ನು ಈ ಕಾಮವೆಂಬ ಶತ್ರುವು ಶಬ್ದಾದಿ ವಿಷಯಗಳಲ್ಲಿ ಆಸಕ್ತಿ ಉಳ್ಳವನನ್ನಾಗಿ ಮಾಡಿ ಆತ್ಮವಿಷಯಕ ಜ್ಞಾನದಲ್ಲಿ ವಿಮುಖನನ್ನಾಗಿ ಮಾಡುತ್ತದೆ. ಆದ್ದರಿಂದ ಪ್ರಕೃತಿ ಸಂಬಂಧವನ್ನು ಹೊಂದಿರುವ ನಿನಗೆ ಇಂದ್ರಿಯಗಳ ವ್ಯಾಪಾರದಲ್ಲಿ ಅಭ್ಯಾಸವಿರುವುದರಿಂದ, ನೀನು ಮೊದಲು ಅಂದರೆ ಮೋಕ್ಷ ಸಾಧನೆಗಳನ್ನು ಆರಂಭಿಸುವ ಸಮಯದಲ್ಲಿಯೇ ಇಂದ್ರಿಯಗಳ ವ್ಯಾಪಾರರೂಪವಾದ ಕರ್ಮಯೋಗದಲ್ಲಿ ಇಂದ್ರಿಯಗಳನ್ನು ನಿಯಮಿಸಿ (ಅದು ವಿಷಯೋಪಭೋಗಗಳಲ್ಲಿ ಪ್ರವರ್ತಿಸದಂತೆ ತಡೆದು) ಆತ್ಮಸ್ವರೂಪ ವಿಷಯಕ ಜ್ಞಾನವನ್ನು ಮತ್ತು ವಿವೇಕವನ್ನೂ ನಾಶಪಡಿಸುವ ಪಾಪಿಯಾದ ಈ ಕಾಮವೆಂಬ ವೈರಿಯನ್ನು ನಾಶಮಾಡು (ಇಂದ್ರಿಯಗಳನ್ನು ಕರ್ಮಯೋಗದಲ್ಲಿ ನಿರತವಾಗುವಂತೆ ಮಾಡಿದೆಯಾದರೆ ಆಗ ಇಂದ್ರಿಯಗಳು ಕಾಮಕ್ಕೆ ವಶವಾಗಿ ವಿಷಯೋಪಭೋಗಗಳಲ್ಲಿ ಪ್ರವರ್ತಿಸದಂತೆ ತಡೆಯಲು ಶಕ್ತನಾಗುವೆ. ಆದ್ದರಿಂದ ಮೊದಲು ಕರ್ಮಯೋಗವನ್ನು ಆಚರಿಸಿ ಕಾಮವನ್ನು ಜಯಿಸಿ ಅನಂತರ ಜ್ಞಾನಯೋಗವನ್ನು ಪ್ರಾರಂಭಿಸು ಎಂದು ಅಭಿಪ್ರಾಯ.

**ಶ್ಲೋಕ 42**—ಜ್ಞಾನವಿರೋಧಿಗಳಲ್ಲಿ ಕಾಮವೇ ಪ್ರಬಲವಾದ ವಿರೋಧಿ ಎಂದು ತಿಳಿಸುತ್ತಾರೆ

"ಇಂದ್ರಿಯಗಳು ಪ್ರಬಲವಾದ ಜ್ಞಾನವಿರೋಧಿಗಳು ಎಂದು ಹೇಳುತ್ತಾರೆ. ಇಂದ್ರಿಯಗಳಿಗಿಂತ ಮನಸ್ಸು ಪ್ರಬಲವಾದುದು. ಮನಸ್ಸಿಗಿಂತ ಬುದ್ಧಿಯು ಪ್ರಬಲವಾದುದು. ಬುದ್ಧಿಗಿಂತಲೂ ಪ್ರಬಲವಾದುದು ಅದು (ಕಾಮವು)."

ಜ್ಞಾನಕ್ಕೆ ವಿರೋಧವನ್ನು ಉಂಟುಮಾಡುವುದರಲ್ಲಿ ಇಂದ್ರಿಯವು ಪ್ರಬಲವಾದುದು ಎಂದು ಹೇಳುತ್ತಾರೆ. ಏತಕ್ಕೆಂದರೆ ಇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸುವುದರಿಂದ ಆತ್ಮವಿಷಯದಲ್ಲಿ ಜ್ಞಾನವು ಪ್ರವರ್ತಿಸುವುದಿಲ್ಲ. ಇಂದ್ರಿಯಗಳಿಗಿಂತ ಮನಸ್ಸು ಪ್ರಬಲವಾದ ಜ್ಞಾನವಿರೋಧಿ. ಏತಕ್ಕೆಂದರೆ ಇಂದ್ರಿಯಗಳು ಪ್ರಶಾಂತವಾಗಿದ್ದರೂ ಕೂಡ ಮನಸ್ಸು ವಿಷಯಗಳಲ್ಲಿ ಸಕ್ತವಾದರೆ ಆತ್ಮಜ್ಞಾನವು ಉಂಟಾಗುವುದಿಲ್ಲ. ಮನಸ್ಸಿಗಿಂತ ಬುದ್ಧಿಯು ಪ್ರಬಲವಾದ ಜ್ಞಾನವಿರೋದಿ ಏತಕ್ಕೆಂದರೆ ಮನಸ್ಸು ಇತರ ವಿಷಯಗಳಿಂದ ವಿಮುಖವಾದ ಮೇಲೆಯೂ ಕೂಡ ವಿಪರೀತವಾದ ಅಧ್ಯವಸಾಯದಲ್ಲಿ ಬುದ್ಧಿಯು ಪ್ರವರ್ತಿಸಿದರೆ ಅಂದರೆ ಬುದ್ಧಿಯು ವಿಪರೀತವಾಗಿ ಯೋಚಿಸಲು ಪ್ರಾರಂಭಿಸಿದರೆ ಆತ್ಮಜ್ಞಾನವುಂಟಾಗುದಿಲ್ಲ. ಬುದ್ಧಿಗಿಂತ ಪ್ರಬಲವಾದ ಜ್ಞಾನವಿರೋಧಿ ಯಾವುದೆಂದರೆ-ಅದು ಕಾಮವು ಏತಕ್ಕೆಂದರೆ-ಬುದ್ಧಿ ಪರ್ಯಂತವಾದ ಸಮಸ್ತಗಳೂ (ಅಂದರೆ ಇಂದ್ರಿಯಗಳೂ ಮನಸ್ಸು ಬುದ್ಧಿಯೂ ಸಹ) ಪ್ರಶಾಂತವಾಗಿದ್ದರೂ ಕೂಡ ರಜೋಗುಣದಿಂದ ಉತ್ಪನ್ನವಾದ ಇಚ್ಛೆ ಎಂಬ ಕಾಮವು ಇದ್ದದೇಯಾದರೆ ಆ ಕಾಮವೇ ಇಂದ್ರಿಯ ಮನಸ್ಸು ಬುದ್ಧಿಗಳನ್ನು ಕೂಡಾ ಆಯಾ ಕಾಮಗಳಿಗೆ ವಿಷಯಗಳಾದ ವಸ್ತುಗಳಲ್ಲಿ ಪ್ರವರ್ತಿಸುವಂತೆ ಮಾಡಿ ಆತ್ಮಜ್ಞಾನವು ಉಂಟಾಗದಂತೆ ಮಾಡಿಬಿಡುತ್ತದೆ. ಆದುದರಿಂದ ಇಂದ್ರಿಯಗಳನ್ನು ಹತೋಟಿಯಲ್ಲಿಡಬಹುದು ; ಮನಸ್ಸನ್ನು

ಜಯಿಸಬಹುದು ; ಮತ್ತು ಬುದ್ಧಿಯನ್ನು ವಿವೇಕವಾಗಿ ತಿರುಗಿಸಬಹುದು ; ಆದರೆ ಎಲ್ಲಕ್ಕಿಂತಲೂ ಕಾಮವನ್ನು ಜಯಿಸುವುದು ಮನುಷ್ಯನಿಗೆ ಬಹಳ ಕಷ್ಟವಾದ ಕಾರ್ಯವು. ಆದ್ದರಿಂದ ಕಾಮವೇ ಎಲ್ಲಕ್ಕಿಂತಲೂ ಪ್ರಬಲವಾದ ಜ್ಞಾನ ವಿರೋಧಿಯು.

**ಶ್ಲೋಕ 43**—"ಮೇಲೆ ಉಪದೇಶಿಸಿದ ರೀತಿಯಲ್ಲಿ ಬುದ್ಧಿಗಿಂತ ಪ್ರಬಲವಾದ ಈ ಕಾಮವನ್ನು ತಿಳಿದು (ಕಾಮವು ಬುದ್ಧಿಗಿಂತ ಪ್ರಬಲವಾದ ಜ್ಞಾನವಿರೋಧಿ ಎಂದು ತಿಳಿದು) ಬುದ್ಧಿಯಿಂದ ಮನಸ್ಸನ್ನು ಚೆನ್ನಾಗಿ ನಿರೋಧಿಸಿ ಜಯಿಸಲಸಾಧ್ಯವಾದ ಈ ಕಾಮರೂಪ ಶತ್ರುವನ್ನು ನಾಶಮಾಡು."— ಈ ಪ್ರಕಾರವಾಗಿ ಕಾಮವನ್ನು ಬುದ್ಧಿಗಿಂತಲೂ ಪ್ರಬಲವಾದ ಜ್ಞಾನವಿರೋಧಿಯಾದ ವೈರಿಯೆಂದು ತಿಳಿದು ಮನಸ್ಸನ್ನು ಬುದ್ಧಿಯಿಂದ ಕರ್ಮಯೋಗದಲ್ಲಿ ನಿಲ್ಲಿಸಿ ಜಯಿಸಲಸಾಧ್ಯವಾದ ಕಾಮವೆಂಬ ಶತ್ರುವನ್ನು ನಾಶಮಾಡು ಎಂದು ಉಪದೇಶ ಮಾಡಿ ಈ ಅಧ್ಯಾಯವನ್ನು ಮುಗಿಸಿದ್ದಾರೆ.

**ಈ ಅಧ್ಯಾಯದ ಸಾರಾಂಶ**—ಈ ಅಧ್ಯಾಯದಲ್ಲಿ ಮುಖ್ಯವಾಗಿ ಎರಡು ವಿಷಯಗಳನ್ನು ತಿಳಿಸಿದ್ದಾರೆ. (1)- ಕರ್ಮಯೋಗದ ನಿರೂಪಣೆ ಮತ್ತು (2) ಜ್ಞಾನಯೋಗದ ಕಷ್ಟಸಾಧ್ಯತೆ.

I **ಕರ್ಮಯೋಗದ ನಿರೂಪಣೆ**—(ಶ್ಲೋಕಗಳು 1 ರಿಂದ 33)

ಎರಡನೇ ಅಧ್ಯಾಯದಲ್ಲಿ ಕರ್ಮಯೋಗವನ್ನು ಸ್ವಲ್ಪ ಮಟ್ಟಿಗೆ ತಿಳಿಸಿದರು ಈ ಮೂರನೇ ಅಧ್ಯಾಯದಲ್ಲಿ ಅದನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ.

(i) ಕರ್ಮಯೋಗವೇ ಜ್ಞಾನಯೋಗಕ್ಕಿಂತ ಸುಲಭವಾದ ಮತ್ತು ಶ್ರೇಷ್ಠವಾದ ಮಾರ್ಗ (ಶ್ಲೋಕಗಳು 1 ರಿಂದ 8). ಇದರ ಸಾರಾಂಶವನ್ನು ಮೇಲೆಯೇ ತಿಳಿಸಿ ಆಗಿದೆ.

(ii) ಸಮಸ್ತ ಯಜ್ಞಾರ್ಥವಾದ ಕರ್ಮಗಳನ್ನೂ ಫಲಾಸಕ್ತಿ ರಹಿತವಾಗಿ ಮಾಡಬೇಕು. (ಶ್ಲೋಕಗಳು 9 ರಿಂದ 19)-ಇಲ್ಲಿ ಶ್ರೀ ಕೃಷ್ಣನು ಒಂದು ಮುಖ್ಯವಾದ ವಿಷಯವನ್ನು ತಿಳಿಸಿದ್ದಾನೆ. ಅದನ್ನು ಸ್ವಲ್ಪ ಚೆನ್ನಾಗಿ ಪರಿಶೀಲಿಸಿ ತಿಳಿಯ ಬೇಕು ಯಜ್ಞಾರ್ಥವಾದ ಕರ್ಮಗಳನ್ನು ಸಂಗರಹಿತನಾಗಿ ಮಾಡಿದರೆ ಕರ್ಮಬಂಧನವಿಲ್ಲ ಎಂದು ಹೇಳಿದ್ದಾನೆ. ಆದ್ದರಿಂದ ಕೇವಲ ಕರ್ಮವು ಬಂಧನಕ್ಕೆ ಕಾರಣವಲ್ಲ. ಕರ್ಮ ಮಾಡುವ ಭಾವನೆಯೇ ಬಂಧನಕ್ಕೆ ಮುಖ್ಯವಾದ ಕಾರಣವು ಎಂದು ಅರ್ಥವಾಗುತ್ತದೆ. ಇಲ್ಲಿ ಯಜ್ಞ ಎಂದರೆ ಏನು ಎಂಬುದನ್ನು ತಿಳಿಯ ಬೇಕು. ಈ ಯಜ್ಞಶಬ್ದಕ್ಕೆ ಬಹಳ ವಿಸ್ತಾರವಾದ ಅರ್ಥ ಹೇಳ ಬೇಕು. ಸುಮ್ಮನೆ ಪಂಚಮಹಾಯಜ್ಞ ಎಂಬ ಸಂಕುಚಿತವಾದ ಅರ್ಥವನ್ನು ಹೇಳಿದರೆ ಸಾಲದು. ಅದು ಆಧುನಿಕ ಯುಗದಲ್ಲಿ ಜಗತ್ತಿನಲ್ಲಿ ವಾಸಿಸುತ್ತಿರುವ ಸಮಸ್ತ ಮಾನವರಿಗೂ ಅನ್ವಯಿಸುವಂತೆ ಇರಬೇಕು.

ನಿಸ್ವಾರ್ಥ ಮನೋಭಾವನೆಯಿಂದ ಜಗತ್ತಿನ ಕಟ್ಟಳೆಗಳಿಗೆ ಅನುಗುಣವಾಗಿ ಕರ್ತವ್ಯಕರ್ಮಗಳನ್ನು ಫಲಾಸಕ್ತಿ ರಹಿತನಾಗಿ ಮಾಡುವುದೇ ಯಜ್ಞವು. ಆ ಯಜ್ಞಕ್ಕೆ ಅಧಿಪತಿಯು ಭಗವಂತನೇ ಅಲ್ಲದೇ ಬೇರೆಯಾರೂ ಅಲ್ಲ. ಇತರ ದೇವತೆಗಳೆಲ್ಲಾ ಭಗವಂತನಿಗೆ ಅಧೀನರು ಅಧಿಯಜ್ಞ ಎಂಬ ಪದದಿಂದ ತಾನು ಯಜ್ಞಗಳಿಗೆಲ್ಲಾ ಅಧಿಪತಿಯು ಎಂದು ಶ್ರೀ ಕೃಷ್ಣನು ಮುಂದೆ 8 ನೇ ಅಧ್ಯಾಯದಲ್ಲಿ ತಿಳಿಸಿದ್ದಾನೆ ಆದ್ದರಿಂದ ಮಾನವನು ಸ್ವಪ್ರಯೋಜನಕ್ಕಾಗಿ ಮಾತ್ರ ಕರ್ಮ ಮಾಡದೆ, ಭಗವದಾರಾಧನೆ ಎಂಬ ಭಾವನೆಯಿಂದ ಭಗವದರ್ಪಣವೆಂದ್ಯ ನಿಸ್ವಾರ್ಥವಾಗಿ ಕರ್ತವ್ಯಕರ್ಮಗಳನ್ನು ಮಾಡುವುದೇ ಯಜ್ಞವೆನ್ನ ಬೇಕು. ಭಗವಂತನು ಸೃಷ್ಟಿಸಿರುವ ಈ ಜಗತ್ತಿನಲ್ಲಿ ಮಾನವನು ಜಗತ್ತಿನ ಕಟ್ಟಳೆಗಳಲ್ಲಿ ತಾನು ಭಾಗವಹಿಸಿ ತನ್ನ ಕರ್ತವ್ಯಕರ್ಮಗಳನ್ನು, ಫಲಸಂಗರಹಿತನಾಗಿ, ನಿಸ್ವಾರ್ಥ ಮನೋಭಾವ ಹೊಂದಿ ಭಗವದಾರಾಧನೆ ಎಂದು ಮಾಡಬೇಕು ಹೀಗೆ ಯಜ್ಞಾರ್ಥವಾಗಿ ಕರ್ಮಮಾಡದೆ ಕೇವಲ ತನ್ನ ಸ್ವಂತಕ್ಕಾಗಿ ಮಾತ್ರ ಕರ್ಮ ಮಾಡುವವನು ಕಳ್ಳನೆನಿಸಿಕೊಳ್ಳುವನು. ಆದ್ದರಿಂದ ಯಜ್ಞಾರ್ಥವಾಗಿ ಕರ್ಮಮಾಡು ಅಂದರೆ ನೀನು ಮಾಡುವ ಕರ್ತವ್ಯ ಕರ್ಮಗಳನ್ನೆಲ್ಲಾ ಸ್ವಾರ್ಥರಹಿತನಾಗಿ ಭಗವದಾರಾಧನೆ ಎಂದು ಮಾಡು ಎಂದು ಉಪದೇಶ ಮಾಡಿದ್ದಾರೆ.

ಇಲ್ಲಿ ಶ್ರೀ ಕೃಷ್ಣನು ಇನ್ನೊಂದು ಮುಖ್ಯವಾದ ವಿಷಯವನ್ನು ತಿಳಿಸಿದ್ದಾನೆ. ಹೀಗೆ ಯಜ್ಞಾರ್ಥವಾಗಿ ಕರ್ಮ ಮಾಡುವಾಗ, ಕರ್ಮ ಮಾಡುವುದೇ ನಿನಗೆ ಪುರುಷಾರ್ಥವಾಗಿರಬೇಕು. ಅಂದರೆ ಕರ್ಮ ಮಾಡುವುದೇ ಕರ್ಮಕ್ಕೆ ಫಲವು ಎಂಬ ಭಾವನೆ ಉಂಟಾಗಬೇಕು. ಕರ್ಮ ಮಾಡುವುದರಿಂದ ಲಭಿಸುವ ಫಲವನ್ನು ಮತ್ತೆ ಕರ್ಮಮಾಡುವುದರ ಮೂಲಕ ಭಗವಂತನಿಗೆ ಅರ್ಪಿಸುವುದಕ್ಕಾಗಿಯೇ ಉಪಯೋಗಿಸಬೇಕು ಅಂದರೆ ಆಸಕ್ತಿ ರಹಿತನಾಗಿ ಕರ್ಮಮಾಡಿ, ಅದರ ಮೂಲಕ ನಿನ್ನ ಪಾಪಗಳನ್ನು ನಾಶಪಡಿಸಿಕೊಂಡು, ನಿನ್ನ ಶರೀರ ಪೋಷಣೆ ಮಾಡಿಕೊಳ್ಳಬೇಕು. ಆ ಶರೀರದ ಮೂಲಕ ಮತ್ತೆ ಸ್ವಾರ್ಥರಹಿತನಾಗಿ ಭಗವದಾರಾಧನರೂಪವಾಗಿ ಕರ್ತವ್ಯಕರ್ಮಗಳನ್ನು ಮಾಡಿ, ಆ ಕರ್ಮಗಳ ಫಲವನ್ನು ಮತ್ತೆ ದೇವರಿಗೇ ಅರ್ಪಿಸಬೇಕು. ಇದರಿಂದ ಪ್ರೀತನಾದ ಭಗವಂತನು ಮತ್ತ ನಿನ್ನ ಪಾಪಗಳನ್ನೆಲ್ಲಾ ಹೋಗಲಾಡಿಸಿ ನಿನ್ನ ಶರೀರಕ್ಕೆ ಬೇಕಾದ ಅನ್ನಪಾನಾದಿ ಧಾರಕ-ಪೋಷಕ ವಸ್ತುಗಳನ್ನು ಕೊಟ್ಟು ನಿನ್ನನ್ನು ಕಾಪಾಡುತ್ತಾನೆ. ಇದನ್ನೇ ಇಲ್ಲಿ ಶ್ರೀಕೃಷ್ಣನು ಒಂದು ಚಕ್ರವೆಂದು ವರ್ಣಿಸಿದ್ದಾನೆ: "ನೀನು ನಿನ್ನ ಶರೀರದ ಮೂಲಕ ಯಜ್ಞಾರ್ಥವಾಗಿ (ಭಗವದಾರಾಧನ ರೂಪವಾಗಿ) ಕರ್ಮಮಾಡು; ಅದರಿಂದ ಪ್ರೀತರಾಗಿ ದೇವತೆಗಳು (ಅಂದರೆ ದೇವತೆಗಳಿಗೆ ಅಂತರ್ಯಾಮಿಯಾಗಿರುವ ಭಗವಂತನು) ಮಳೆ ಸುರಿಸುತ್ತಾರೆ, ಮಳೆಯಿಂದ ಬೆಳೆಉಂಟಾಗುತ್ತದೆ, ಬೆಳೆಯಿಂದ ಶರೀರ ಪೋಷಣೆಯಾಗುತ್ತದೆ; ಶರೀರದಿಂದ ಮತ್ತೆ ನೀನು ಯಜ್ಞಾರ್ಥವಾಗಿ ಕರ್ಮಮಾಡು" ಇದೇ ಬಾಳಿನ ಚಕ್ರ. ಚಕ್ರವನ್ನು ಅನುಸರಿಸಿ ನಡೆಯುವುದೇ ನಿನಗೆ ಅತ್ಯಂತ ಶ್ರೇಷ್ಠವಾದ ಮಾರ್ಗ.

(III) ಮುಕ್ತ ಪುರುಷನೂಕೂಡ ಲೋಕ ಕಲ್ಯಾಣಕ್ಕಾಗಿ ಕರ್ಮಮಾಡಲೇಬೇಕು. (ಶ್ಲೋಕಗಳು 20 ರಿಂದ 26) ಲೋಕ ಕಲ್ಯಾಣಕ್ಕಾಗಿ ಜನಕಾದಿಋಷಿಗಳೂ ಕರ್ಮಮಾಡಿದರು ಮತ್ತು ಅವಾಪ್ತ ಸಮಸ್ತ ಕಾಮನಾದ, ಪರಮಪುರುಷನಾದ ನಾನೂ ಕರ್ಮಮಾಡುತ್ತಿರುವೆನು ಎಂದು ಶ್ರೀಕೃಷ್ಣನು ಹೇಳಿದ್ದಾನೆ ಮಹಾತ್ಮರ ನಡತೆಯನ್ನು ಲೋಕದ ಜನರು ಅನುಸರಿಸಲು ಪ್ರಯತ್ನಿಸುವುದರಿಂದ ಅವರ ಉದ್ಧಾರಕ್ಕಾಗಿ ಮಹಾತ್ಮರೂ ಕರ್ಮಮಾಡಲೇಬೇಕು.

(IV) ಅಕರ್ತೃತ್ವಾನುಸಂಧಾನದೊಂದಿಗೆ ಕರ್ಮ ಮಾಡಬೇಕು. (ಶ್ಲೋಕಗಳು 27 ರಿಂದ 32). ಇದು ಕರ್ಮಯೋಗದ ಒಂದು ಮುಖ್ಯವಾದ ಅಭ್ಯಾಸ. ಚೇತನನು ಆತ್ಮನಾದ ತಾನು ಕರ್ಮಗಳ ಕರ್ತೃವಲ್ಲ ಎಂದು ತಿಳಿದು ಅನುಸಂಧಾನ ಮಾಡುತ್ತಾ ಕರ್ಮಮಾಡಬೇಕು ಎಂದು ಇದರ ಅರ್ಥ. ಹಾಗಾದರೆ ಕರ್ಮಮಾಡುವವನು ಯಾರು ಎಂದರೆ ಅದಕ್ಕೆ ಉತ್ತರವಾಗಿ ಸತ್ತ್ವರಜಸ್ತಮೋಗುಣಗಳು ಮತ್ತು ಪರಮಾತ್ಮ ಇಬ್ಬರೂ ಕರ್ಮಕ್ಕೆ ಕಾರಣರು ಎಂದು ಶ್ರೀಕೃಷ್ಣ ಹೇಳಿದ್ದಾನೆ. ತ್ರಿಗುಣಗಳು ಚೇತನನಿಂದ ಕರ್ಮಗಳನ್ನು ಮಾಡಿಸುತ್ತವೆ ಎಂದೂ ಮತ್ತು ಪರಮಾತ್ಮನು ಅಂತರಾತ್ಮನಾಗಿದ್ದುಕೊಂಡು ಚೇತನನಿಂದ ಕರ್ಮಮಾಡಿಸುತ್ತಾನೆ ಎಂದೂ ಇಲ್ಲಿ ಎರಡು ವಿಷಯಗಳನ್ನು ತಿಳಿಸಿದ್ದಾನೆ ಒಂದು ಕರ್ಮಮಾಡಬೇಕಾದರೆ ಕೇವಲ ಆತ್ಮಸ್ವರೂಪವು ಸಾಲದು. ಕರ್ತೃತ್ವವು ಆತ್ಮನಿಗೆ ಸ್ವರೂಪಪ್ರಯುಕ್ತವಾದುದಲ್ಲ ಆತ್ಮನಿಗೆ ಪ್ರಕೃತಿ ಸಂಬಂಧವುಂಟಾದರೆ ಆಗ ಶರೀರೇಂದ್ರಿಯಗಳ ಮೂಲಕ ಅವನಿಗೆ ಸತ್ತ್ವರಜಸ್ತಮೋಗುಣಗಳ ಸಂಪರ್ಕವುಂಟಾಗುತ್ತದೆ. ಆ ಗುಣಗಳಿಂದ ಪ್ರೇರಿತನಾಗಿ ಅವನು ಕರ್ಮದಲ್ಲಿ ಪ್ರವರ್ತಿಸುತ್ತಾನೆ. ಆದ್ದರಿಂದ ಕರ್ಮಗಳ ಕರ್ತೃತ್ವವು ತ್ರಿಗುಣಗಳಿಗೆ ಸೇರಿದೆಯೇ ಹೊರತು ಕೇವಲ ಜೀವಾತ್ಮನಿಗೆ ಸೇರಿದ್ದಲ್ಲ ಹೀಗಿರುವುದರಿಂದ ಜೀವಾತ್ಮನು ತಾನು ಕರ್ಮಗಳ ಕರ್ತೃವಲ್ಲ ಎಂಬುದನ್ನು ತಿಳಿದು ಅನುಸಂಧಾನ ಮಾಡಬೇಕು

ಅಷ್ಟು ಮಾತ್ರವಲ್ಲದೆ ಸಮಸ್ತ ಜೀವಿಗಳೂ ಪರಮಪುರುಷನಿಗೆ ಶರೀರವಾಗಿ ಅವನ ನಿಯಮಕ್ಕೆ ಒಳಪಟ್ಟಿರುವುದ

ರಿಂದ ಗುಣದಿಂದ ಕೂಡಿದ ಶರೀರಗಳಳಿಂದ ಮಾಡಲ್ಪಟ್ಟ ಕರ್ತೃತ್ವವು ಸರ್ವರಿಗೂ ಆತ್ಮಸ್ವರೂಪನಾದ ಪರಮಾತ್ಮನಿಗೆ ಸೇರಿದ್ದೇ ಹೊರತು ಜೀವಾತ್ಮನಿಗಲ್ಲವೆಂಬುದು ವ್ಯಕ್ತವಾಗುತ್ತದೆ ಆದ್ದರಿಂದ ಕರ್ಮಗಳ ಕರ್ತೃ ಪರಮಾತ್ಮನೆಂದೂ ಆ ಕಾರಣದಿಂದ ಅದರ ಫಲವೂ ಪರಮಾತ್ಮನಿಗೇ ಸೇರಿದ್ದೆಂದೂ ಅನುಸಂಧಾನ ಮಾಡಬೇಕು. ಇದರಿಂದ ಕರ್ಮಗಳ ಕರ್ತೃ ತಾನು ಎಂಬ ಅಹಂಕಾರವೂ, ಕರ್ಮಗಳ ಫಲ ತನ್ನದೆಂಬ ಮಮಕಾರವೂ ತಾನಾಗಿ ನಾಶವಾಗುತ್ತದೆ. ಹೀಗೆ ಅಧ್ಯಾತ್ಮ ಚಿಂತನೆ ಮಾಡುತ್ತಾ, ಸಮಸ್ತ ಕರ್ತವ್ಯ ಕರ್ಮಗಳನ್ನೂ ಪರಮಾತ್ಮನಿಗೆ ಸಮರ್ಪಿಸಿ, ಅಹಂಕಾರ ಮಮಕಾರ ರಹಿತನಾಗಿ ಫಲಾಸಕ್ತಿ ಇಲ್ಲದವನಾಗಿ, ಸಂತಾಪ ರಹಿತನಾಗಿ, ಸಂತೋಷದಿಂದಲೂ ಉತ್ಸಾಹದಿಂದಲೂ ಕರ್ಮಮಾಡಬೇಕು. ಯಾವಾಗ ನಾವು ಭಗವದರ್ಪಿತ ಭಾವದಿಂದ ಕರ್ಮಮಾಡುವೆವೋ ಆಗ ನಾವು ಎಂದೂ ದುಷ್ಕರ್ಮಗಳನ್ನು ಮಾಡಲಾರೆವು , ನಾವು ಮಾಡುವ ಕರ್ಮಗಳೆಲ್ಲಾ ಪವಿತ್ರವಾಗುವುವು ಮತ್ತು ಭಗವಂತನ ಪೂಜೆ ಯಾಗುವುವು. ಇದೇ ಕರ್ಮಯೋಗದ ತಿರುಳು. ಇದು ಈ ಅಧ್ಯಾಯದ 30 ನೇ ಶ್ಲೋಕದಲ್ಲಿ ಚೆನ್ನಾಗಿ ವಿವರಿಸಲ್ಪಟ್ಟಿದೆ.

11) ಜ್ಞಾನಯೋಗದ ಅಭ್ಯಾಸಗಳ ಕಷ್ಟ ಸಾಧ್ಯತೆ ಮತ್ತು ಪ್ರಮಾದದಿಂದ ಕೂಡಿರುವಿಕೆ (ಶ್ಲೋಕಗಳು 33ರಿಂದ 43)—ಪ್ರಕೃತಿ ಸಂಬಂಧ ಹೊಂದಿರುವ ಪ್ರತಿಜೀವಿಯಲ್ಲೂ ರಾಗದ್ವೇಷಗಳು ಅನಿವಾರ್ಯವಾಗಿ ಇರುವುದರಿಂದ ಅವುಗಳನ್ನು ಜಯಿಸದೆ ಜ್ಞಾನಯೋಗದ ಅಭ್ಯಾಸಗಳನ್ನು ಅನುಷ್ಠಿಸುವುದು ಬಹಳ ಕಷ್ಟ. ಆದರೆ ರಾಗದ್ವೇಷಗಳನ್ನು (ಕಾಮಕ್ರೋಧಗಳನ್ನು) ಜಯಿಸುವುದು ಸುಲಭವಾದ ಕೆಲಸವಲ್ಲ. ಮೊದಲು ಮನಸ್ಸು ಬುದ್ಧಿಯ ಮೂಲಕ ಕರ್ಮಯೋಗದಲ್ಲಿ ನೆಲೆಗೊಳಿಸಿ ತನ್ಮೂಲಕ ರಾಗದ್ವೇಷಗಳನ್ನು ಜಯಿಸಲು ಪ್ರಯತ್ನಿಸಬೇಕು ಹೀಗೆ ಕಾಮಕ್ರೋಧಾದಿಗಳನ್ನು ಕರ್ಮಯೋಗದ ಮೂಲಕ ಸಂಪೂರ್ಣವಾಗಿ ನಾಶಮಾಡಿದ ಮೇಲೆ ಜ್ಞಾನಯೋಗಕ್ಕೆ ಅರ್ಹತೆ ಪಡೆದು ಅದನ್ನು ಅನುಷ್ಠಿಸಬೇಕು ಎಂದು ಶ್ರೀಕೃಷ್ಣ ಹೇಳಿದ್ದಾನೆ.

ಹೀಗೆ ಈ ಅಧ್ಯಾಯದಲ್ಲಿ ಕರ್ಮಯೋಗದ ಅಭ್ಯಾಸಗಳನ್ನು ವಿವರವಾಗಿ ತಿಳಿಸಿರುವುದರಿಂದ ಇದಕ್ಕೆ ಕರ್ಮಯೋಗವೆಂದು ಹೆಸರು.

## ನಾಲ್ಕನೆಯ ಅಧ್ಯಾಯ

ಮೂರನೆಯ ಅಧ್ಯಾಯದಲ್ಲಿ ಪ್ರಕೃತಿಸಂಬಂಧ ಪಡೆದಿರುವ ಬದ್ಧಚೇತನನಾದ ಮೋಕ್ಷಾರ್ಥಿಯು ಮೋಕ್ಷದಲ್ಲಿ ಇಚ್ಛೆ ಹುಟ್ಟಿದ ಒಡನೆಯೇ ಜ್ಞಾನಯೋಗಾಭ್ಯಾಸಕ್ಕೆ ಅಧಿಕಾರಿ ಯಾಗಲಾರನು ಆದ್ದರಿಂದ ಅವನು ಕರ್ಮಯೋಗವನ್ನೇ ಮಾಡ ಬೇಕು ಎಂದೂ, ಜ್ಞಾನಯೋಗಾಧಿಕಾರಿಯೂ ಕೂಡ, ''ಈ ಕರ್ಮದಿಂದ ಈ ಫಲವನ್ನು ಸಾಧಿಸುವೆನು'' ಎಂಬ ಫಲಾ ಪೇಕ್ಷೆಯನ್ನೂ, ''ಈ ಕರ್ಮವು ನನಗೆ ಫಲವನ್ನು ಸಾಧಿಸಿಕೊಡು ವುದರಿಂದ ನನ್ನದು'' ಎಂಬ ಸಂಗವನ್ನು "ಈ ಕರ್ಮವನ್ನು ನಾನು ಮಾಡುವೆನು'' ಎಂಬ ಕರ್ತೃತ್ವ ಅನುಸಂಧಾನವನ್ನೂ ಬಿಟ್ಟು ಸತ್ತ್ವರಜಸ್ತಮೋಗುಣಗಳು ತಮ್ಮ ತಮ್ಮ ಸ್ವರೂಪಕ್ಕೆ ಅನುಗುಣವಾದ ಕರ್ಮಗಳನ್ನು ಚೇತನನಿಂದ ಮಾಡಿಸುವುವು ಮತ್ತು ತನಗೆ ಶರೀರೇಂದ್ರಿಯಗಳನ್ನು ಕೊಟ್ಟ ಪರಮಾತ್ಮನೇ ತನ್ನಿಂದ ಕರ್ಮಗಳನ್ನು ಮಾಡಿಸುವನು ಎಂದೂ ತಿಳಿದು ಅಕರ್ತೃತ್ವಾನುಸಂಧಾನದೊಂದಿಗೆ ಮಾಡುವ ಕರ್ಮಯೋಗವೇ ಶ್ರೇಷ್ಠ ವಾದುದು ಎಂದೂ, ಮತ್ತು ಪ್ರಸಿದ್ಧಿಹೊಂದಿರುವ ಶ್ರೇಷ್ಠನಾದ ಜ್ಞಾನಯೋಗಿಯಾದರೂ ಮುಖ್ಯವಾಗಿ ಕರ್ಮಯೋಗವನ್ನೇ ಮಾಡತಕ್ಕದ್ದು ಎಂದು ಹೇಳಲ್ಪಟ್ಟಿತು

ಈಗ ನಾಲ್ಕನೇ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಕರ್ಮ ಯೋಗವು ಲೋಕರಕ್ಷಣಾರ್ಥವಾಗಿ ಈ ಮನ್ವಂತರದ ಆದಿಯಲ್ಲೇ ತನ್ನಿಂದಲೇ ಹೇಳಲ್ಪಟ್ಟಿರುವುದರಿಂದ ಇದು ಬಹಳ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿರುವ ಶ್ರೇಷ್ಠವಾದ ಮಾರ್ಗವೆಂದು ಹೇಳಿ ಕರ್ಮಯೋಗದ ಕರ್ತವ್ಯತೆಯನ್ನು ಧೃಡಪಡಿಸಿದ್ದಾನೆ. ಅಪ್ರಾಸಂಗಿಕವಾಗಿ ಉಂಟಾದ ಅರ್ಜುನನ ಸಂದೇಹಗಳನ್ನು ನಿವೃತ್ತಿಮಾಡುವಸಲುವಾಗಿ ಭಗವದವತಾರಗಳ ರಹಸ್ಯವನ್ನು (ಅಂದರೆ ಉದ್ದೇಶ, ಕಾಲ ಮತ್ತು ಫಲಗಳನ್ನು) ವಿವರಿಸುತ್ತಾನೆ

ಅನಂತರ ಕರ್ಮಯೋಗದಲ್ಲೇ ಆತ್ಮಜ್ಞಾನವು ಅಂತರ್ಗತ ವಾಗಿರುವುದರಿಂದ ಕರ್ಮಯೋಗವೇ ಜ್ಞಾನಯೋಗಾಕಾರವನ್ನು ಹೊಂದಿದೆ ಎಂಬುದನ್ನು ಚೆನ್ನಾಗಿತೋರಿಸಿ, ತದನಂತರ ಕರ್ಮ ಯೋಗದ ಸ್ವರೂಪವನ್ನೂ ಅದರಲ್ಲಿರುವ ಭೇದಗಳನ್ನೂ, ಮತ್ತು ಅದರಲ್ಲಿರುವ ಜ್ಞಾನಾಂಶದ ಪ್ರಧಾನತೆಯನ್ನೂ ವಿವರ ವಾಗಿ ತಿಳಿಸಿದ್ದಾನೆ. ಹೀಗೆ ಈ ಅಧ್ಯಾಯದಲ್ಲಿ ಮುಖ್ಯವಾಗಿ ಆರು ವಿಷಯಗಳನ್ನು ತಿಳಿಸಿದ್ದಾನೆ.

### 1) ಕರ್ಮಯೋಗವು ಬಹಳ ಪುರಾತನವಾದುದು (ಶ್ಲೋಕಗಳು 1 ರಿಂದ 3)

**ಶ್ಲೋಕಗಳು 1, 2, 3**—"ನಾನು ನಾಶರಹಿತವಾದ ಈ ಯೋಗವನ್ನು (ಈ ಕರ್ಮಯೋಗವನ್ನು) ಸೂರ್ಯನಿಗೆ ಹೇಳಿದೆನು ಸೂರ್ಯನು ಅದನ್ನು (ತನ್ನ ಪುತ್ರನಾದ) ಮನುವಿಗೆ ಹೇಳಿದನು ಮನುವು (ಅದನ್ನು ತನ್ನ ಪುತ್ರನಾದ ಇಕ್ಷ್ವಾಕುವಿಗೆ ಹೇಳಿದನು "—"ಈ ಪ್ರಕಾರವಾಗಿ ಪರಂಪರೆಯಾಗಿ ಬಂದ ಇದನ್ನು (ಈ ಕರ್ಮಯೋಗವನ್ನು) ರಾಜ ಋಷಿಗಳು ಚೆನ್ನಾಗಿ ತಿಳಿದಿದ್ದಾರೆ ಎಲೈ ಅರ್ಜುನನೇ ಈ ಯೋಗವು ಈ ಲೋಕದಲ್ಲಿ ಈಗ ಬಹಳ ಕಾಲದಿಂದ ನಷ್ಟವಾಗಿದೆ—" "ನೀನು ನನಗೆ ಭಕ್ತನೂ ಮತ್ತು ಸ್ನೇಹಿತನೂ ಆಗಿದ್ದೀಯೆ ಎಂದು ನಿನಗೆ ಅದೇ ಪುರಾತನವಾದ ಈ ಕರ್ಮಯೋಗವು ಈಗ ನನ್ನಿಂದ ಉಪದೇಶಿಸಲ್ಪಟ್ಟಿತು, ಏತಕ್ಕೆಂದರೆ ಇದು ಉತ್ತಮವಾದ ರಹಸ್ಯವಾಗಿದೆ"—

ಅರ್ಜುನ ನಾನು ಇಲ್ಲಿಯವರೆಗೆ ನಿನಗೆ ಹೇಳಿದ ಈ ಕರ್ಮಯೋಗವನ್ನು ಕೇವಲ ಈ ಯುದ್ಧದ ಸಮಯದಲ್ಲಿ ನಿನಗ ಪ್ರೋತ್ಸಾಹವನ್ನು ಉಂಟುಮಾಡುವ ಸಲುವಾಗಿ ಮಾತ್ರ ಹೇಳಿದ್ದೇನೆಂದು ತಿಳಿಯಬೇಡ. ಪರಮಪುರುಷಾರ್ಥ ಸಾಧನ ವಾದ ಈ ಕರ್ಮಯೋಗವನ್ನು ಮನ್ವಂತರಕ್ಕೆ ಮೊದಲೇ ಸಮಸ್ತ ಜಗತ್ತಿನ ಉದ್ಧಾರಕ್ಕಾಗಿ ನಾನೇ ಸೂರ್ಯನಿಗೆ ಹೇಳಿದೆನು ಸೂರ್ಯನು ಈ ಯೋಗವನ್ನು ತನ್ನ ಮಗನಾದ ಮನುವಿಗೂ ಮನುವು ತನ್ನ ಮಗನಾದ ಇಕ್ಷ್ವಾಕುವಿಗ ಉಪದೇಶ ಮಾಡಿದರು. ಈ ರೀತಿಯಾಗಿ ಕರ್ಮಯೋಗವು ಸಂಪ್ರದಾಯಪ್ರಾಪ್ತವಾಗಿ ಅಂದರೆ ತಂದೆಯಿಂದ ಮಗನಿಗೂ, ಗುರುವಿನಿಂದ ಶಿಷ್ಯನಿಗೂ ಪರಂಪರೆ ಯಾಗಿ ಪೂರ್ವಕಾಲದ ರಾಜ ಋಷಿಗಳು (ಜನಕ, ಅಂಬರೀಷ ಮುಂತಾದ ರಾಜರುಗಳು) ತಿಳಿದಿದ್ದರು ಆದರೆ ಇಂತಹ ಮಹಾತ್ಮೆಯುಳ್ಳ ಈ ಕರ್ಮಯೋಗವು ಬಹಳ ಕಾಲದಿಂದ ಮುಂದಿನ ಶ್ರೋತೃಗಳ ಬುದ್ಧಿ ಮಾಂದ್ಯದಿಂದ ಅಂದರೆ ಕೇಳುವ ಮನುಷ್ಯರ ಬುದ್ಧಿಯು ಅಜ್ಞಾನದಿಂದ ತುಂಬಿದ್ದುದರಿಂದ ಅದನ್ನು ಸರಿಯಾಗಿ ಗ್ರಹಿಸದೆ ಕಾಲಕ್ರಮದಲ್ಲಿ ಅದು ನಷ್ಟವಾಗಿ ಹೋಯಿತು ಆದರ ಈಗ ನಾನು ನಿನಗೆ ಉಪದೇಶ ಮಾಡಿರುವ ಈ ಕರ್ಮಯೋಗವು ನಾನು ಹಿಂದೆ ಉಪದೇಶ ಮಾಡಿದ ಪುರಾತನವಾದ ಯೋಗವಲ್ಲದೆ ಬೇರೆಯಲ್ಲ, ನನಗೆ ಆಪ್ತಮಿತ್ರನಾಗಿಯೂ ನನ್ನಲ್ಲಿ ಅತ್ಯಧಿಕಭಕ್ತಿ ಉಳ್ಳವನಾಗಿಯೂ, ನನ್ನನ್ನೇ ಶರಣ ಹೊಕ್ಕವ ವನಾಗಿಯೂ, ಇರುವ ನಿನಗೆ ನಾನು ಅಂಗಪ್ರತ್ಯಯುಗಳೊಂದಿಗೆ ವಿಸ್ತಾರವಾಗಿ ಅದೇ ಕರ್ಮಯೋಗವನ್ನು ಹೇಳಿದ್ದೇನೆ. ಇದು ವೇದಾಂತ ಪ್ರತಿಪಾದ್ಯವಾದ, ಅತ್ಯಂತ ಉತ್ತಮವಾದ ಮತ್ತು ರಹಸ್ಯವಾದ ಜ್ಞಾನವಾಗಿರುವುದರಿಂದ ನನ್ನ ವಿನಹ ಬೇರೆ ಯಾರೂ ಇದನ್ನು ಸರಿಯಾಗಿ ತಿಳಿಸಿ ಉಪದೇಶ ಮಾಡ ಲಾರರು.

### 11 ಭಗವಂತನ ಅವತಾರಗಳ ವಿಷಯ (ಅವುಗಳ ಉದ್ದೇಶ, ಕಾಲ ಮತ್ತು ಫಲ) (ಶ್ಲೋಕಗಳು 4 ರಿಂದ 11)

**ಶ್ಲೋಕ 4**—ಈ ಪ್ರಸಂಗದಲ್ಲಿ (ಅಂದರೆ ಕರ್ಮ ಯೋಗದ ಪ್ರಾಚೀನತೆಯನ್ನು ಧೃಢ ಪಡಿಸುವ ಪ್ರಸಂಗದಲ್ಲಿ) ಭಗವಂತನ ಅವತಾರದ ಯಥಾರ್ಥ ಸ್ವರೂಪವನ್ನು ಯಥಾವತ್ತಾಗಿ ತಿಳಿಯು ವುದಕ್ಕಾಗಿ ಅರ್ಜುನನು ಹೀಗೆ ಕೇಳುತ್ತಾನೆ " ನಿನ್ನ (ವಸು ದೇವ ಪುತ್ರನಾಗಿ ಜನಿಸಿದ ನಿನ್ನ) ಜನ್ಮವು ಈಚೆಗೆ ಉಂಟಾದುದು. ಸೂರ್ಯನ ಜನ್ಮವು ಬಹಳ ಹಿಂದೆಯೇ ಉಂಟಾದುದು. ನೀನು ಬಹಳ ಹಿಂದೆಯೇ (ಮನ್ವಂತರಾದಿಯಲ್ಲಿಯೇ) ಸೂರ್ಯನಿಗೆ ಇದನ್ನು (ಈ ಯೋಗವನ್ನು) ಹೇಳಿದೆಯೆಂಬ ಈ ಮಾತನ್ನು ಹೇಗೆ ತಿಳಿಯಲಿ "—

ಕಾಲ ಸಂಖ್ಯೆಯನ್ನು ನೋಡಿದರೆ ನಿನ್ನ ಜನ್ಮವು ಇತ್ತೀಚಿನದಾಗಿದೆ ಅಂದರೆ ನನ್ನ ಜನ್ಮಕ್ಕೆ ಸಮಕಾಲದಲ್ಲಿ ಉಂಟಾದುದಾಗಿದೆಯಲ್ಲವೆ ಮತ್ತು ಸೂರ್ಯನ ಜನ್ಮವಾದರೋ ಬಹಳ ಹಿಂದಿನದಾಗಿದೆ, ಅಂದರೆ 28 ಸಲ ಚತುರ್ಯುಗಗಳ ಹಿಂದೆಯೇ ಉಂಟಾದುದು ಇಷ್ಟು ಕಾಲ ವ್ಯತ್ಯಾಸವಿರುವಾಗ ನೀನೇ ಆ ಮನ್ವಂತರದ ಆದಿಯಲ್ಲಿ ಸೂರ್ಯನಿಗೆ ಹೇಳಿದೆ ಎಂಬ ಈ ಅಸಂಭಾವಿತವಾದ (ಒಪ್ಪಲನರ್ಹವಾದ) ಮಾತನ್ನು ಹೇಗೆ ನಿಜವೆಂದು ತಿಳಿಯಲಿ ಎಂದು ಅರ್ಜುನನು ಪ್ರಶ್ನೆ ಮಾಡುತ್ತಾನೆ ಆದರ ಸರಿಯಾಗಿ ನೋಡಿದರೆ ಇಲ್ಲಿ ಯಾವ ವಿರೋಧ ಅಭಿಪ್ರಾಯವೂ ಇಲ್ಲ ಏಕೆಂದರ ಶ್ರೀಕೃಷ್ಣನು ಈ ಯೋಗ ವನ್ನು ಜನ್ಮಾಂತರದಲ್ಲಿ ವಿವಸ್ವತನಿಗ ಉಪದೇಶಮಾಡಿದ್ದನು ಜನ್ಮಾಂತರದ ಕೃತಿಗಳ ಸ್ಮರಣೆ ಮಹಾತ್ಮರಿಗೆ ಮುಂದಿನ ಜನ್ಮ ಗಳಲ್ಲಿ ಇರಲು ಸಾಧ್ಯವಾಗಿರುವುದರಿಂದ ಶ್ರೀಕೃಷ್ಣನು ತಾನು ಹಿಂದಿನ ಜನ್ಮದಲ್ಲಿ (ಅವತಾರದಲ್ಲಿ) ವಿವಸ್ವತನಿಗೆ ಮಾಡಿದ ಉಪದೇಶವನ್ನು ಈಗ ಮತ್ತೆ ಅರ್ಜುನನಿಗ ಹೇಳುತ್ತಿದ್ದಾನೆ ಅಷ್ಟೆ. ಇದರಲ್ಲಿ ಅಸಂಭಾವಿತವಾದುದು ಏನು ಇಲ್ಲ ಆದರೆ ಅರ್ಜುನನಿಗ ಈ ಮಾತನ್ನು ಹೇಳುತ್ತಿರುವ ವಸುದೇವತನಯು ನಾದ ಶ್ರೀಕೃಷ್ಣನು ಸರ್ವೇಶ್ವರನೆಂದು ತಿಳಿಯದೋ ಎಂದರೆ

ಅದೂ ಅವನಿಗೆ ಚೆನ್ನಾಗಿ ತಿಳಿದಿತ್ತು. ಏಕೆಂದರೆ ಅವನೇ ಮುಂದೆ ಹತ್ತನೇ ಅಧ್ಯಾಯದಲ್ಲಿ ಶ್ರೀಕೃಷ್ಣನನ್ನು ಪರಬ್ರಹ್ಮ ಪರಂಧಾಮ, ಪರಮ ಪವಿತ್ರನೆಂದೂ, ಸನಾತನ ದಿವ್ಯಪುರುಷನೆಂದೂ, ಆದಿದೇವನೆಂದೂ ಜನ್ಮರಹಿತನೆಂದೂ, ಸರ್ವವ್ಯಾಪಿ ಸರ್ವೇಶ್ವರನೆಂದೂ ಕರೆದಿದ್ದಾನೆ. ಯುಧಿಷ್ಠಿರನು ಮಾಡಿದ ರಾಜಸೂಯಯಾಗದಲ್ಲಿ ಕೂಡ ಭೀಷ್ಮಾದಿಗಳ ಮಾತಿನಿಂದ ಶ್ರೀಕೃಷ್ಣನೇ ಸಕಲ ಜಗತ್ತಿನ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣನೆಂಬುದನ್ನು ಅರ್ಜುನನು ಅರಿತಿದ್ದಾನೆ. ಇದರಿಂದ ಅರ್ಜುನನಿಗೆ ವಸುದೇವ ಪುತ್ರನಾದ ಕೃಷ್ಣನೇ ಸಾಕ್ಷಾತ್ ಭಗವಂತನೆಂಬುದು ತಿಳಿದೇ ಇದ್ದಿತು ಎಂಬುದು ಸ್ಪಷ್ಟವಾಯಿತು. ಆದಾಗ್ಯೂ ತಿಳಿಯದವನಂತೆ ಹೀಗೆ ಪ್ರಶ್ನೆ ಮಾಡಲು ಕಾರಣವೇನು ಎಂದರೆ ಅದಕ್ಕೆ ಹೀಗೆ ಸಮಾಧಾನ ಹೇಳಿದ್ದಾರೆ—ನಿಖಿಲ ಹೇಯಪ್ರತ್ಯನೀಕನಾಗಿಯೂ, ಸಮಸ್ತ ಕಲ್ಯಾಣ ಪರಿಪೂರ್ಣನಾಗಿಯೂ, ಸರ್ವೇಶ್ವರನಾಗಿಯೂ, ಸರ್ವಜ್ಞನಾಗಿಯೂ, ಸತ್ಯಸಂಕಲ್ಪನಾಗಿಯೂ, ಅವಾಪ್ತ ಸಮಸ್ತ ಕಾಮನಾಗಿಯೂ ಇರುವ ಪರಮಾತ್ಮನು ಕರ್ಮವಶರಾದ ಈ ದೇವಮನುಷ್ಯಾದಿಗಳಿಗೆ ಸಮಾನನಾಗಿ (ಅಂದರೆ ಅವರಲ್ಲೇ ಒಬ್ಬನಾಗಿ) ಜನ್ಮವೆತ್ತಿರುವ ಈ ಅವಕಾಶವು (ಜನ್ಮವು) ಇಂದ್ರಜಾಲಾದಿಗಳಂತೆ ಸುಳ್ಳಾದುದೇ ಅಥವ ಸತ್ಯವಾದುದೇ? ಸತ್ಯವಾದುದಾದರೆ ಆ ಅವತಾರದ (ಜನ್ಮದ) ಪ್ರಕಾರವೇನು? ಅವತಾರವೆತ್ತುವ ದೇಹದ ಸ್ವರೂಪವೆಂತಹುದು? ಅವತಾರಕ್ಕೆ ಕಾರಣವೇನು? ಅವತಾರವು ಯಾವ ಕಾಲದಲ್ಲಿ ಯಾವ ಉದ್ದೇಶಕ್ಕಾಗಿ ಆಗುತ್ತದೆ? ಇವೇ ಮುಂತಾದ ವಿಷಯಗಳನ್ನು ತಿಳಿಯುವುದಕ್ಕಾಗಿ ಅರ್ಜುನನು ಈ ಪ್ರಶ್ನೆಯನ್ನು ಕೇಳಿದ ಹಾಗೆ ತೋರುತ್ತದೆ. ಅಂದರೆ ಭಗವಂತನ ಅವತಾರ ಸ್ವರೂಪವನ್ನು ತಿಳಿಯಲು ಅರ್ಜುನನು ಹೀಗೆ ಪ್ರಶ್ನೆಮಾಡಿದ್ದಾನೆ ಎಂದು ಅಭಿಪ್ರಾಯ.

**ಶ್ಲೋಕ 5**—ಶ್ರೀ ಕೃಷ್ಣನು ಹೇಳುತ್ತಾನೆ, "ಅರ್ಜುನ! ನನಗೆ ಅನೇಕ ಜನ್ಮಗಳು (ಅವತಾರಗಳು) ಕಳೆದು ಹೋದುವು. ನಿನಗೂ ಹಾಗೆಯೇ ಅನೇಕ ಜನ್ಮಗಳು ಕಳೆದು ಹೋದುವು. ಅವುಗಳೆಲ್ಲವನ್ನೂ ನಾನು ತಿಳಿದಿದ್ದೇನೆ. ಶತ್ರುಗಳನ್ನು ಪರಿತಪಿಸುವಂತೆ ಮಾಡುವ ಅರ್ಜುನನೇ! ನೀನು ಅವುಗಳನ್ನು ತಿಳಿದಿಲ್ಲ"

ಈ ಶ್ಲೋಕದಿಂದ ಜನ್ಮದ (ಅವತಾರದ) ಸತ್ಯತ್ವವು ಹೇಳಲ್ಪಟ್ಟಿದೆ. "ನನಗೆ ಅನೇಕ ಜನ್ಮಗಳು ಕಳೆದುಹೋಗಿವೆ" ಎಂದೂ "ನಿನಗೂ ಕೂಡ ಅನೇಕ ಜನ್ಮಗಳು ಕಳೆದುಹೋಗಿವೆ" ಎಂದೂ ಹೇಳುವುದರಿಂದ ಈ ಶ್ಲೋಕದಲ್ಲಿ ಜನ್ಮಗಳ ಸತ್ಯತ್ವವು ಹೇಳಲ್ಪಟ್ಟಿದೆ. ಅಂದರೆ ಜೀವಾತ್ಮನಾದ ನಿನ್ನ ಜನ್ಮಗಳು ಹೇಗೆ ಸತ್ಯವೊ ಹಾಗೆಯೇ ಪರಮಾತ್ಮನಾದ ನನ್ನ ಅವತಾರಗಳೂ ಸತ್ಯವಾದುವು ಎಂದು ಹೇಳಿದಹಾಗಾಯಿತು.

**ಶ್ಲೋಕ 6**—ಭಗವದವತಾರದ ಪ್ರಕಾರವನ್ನು ಅವತಾರ ಶರೀರದ ಯಥಾರ್ಥ ಸ್ವರೂಪವನ್ನು ಮತ್ತು ಅವತಾರಕ್ಕೆ ಕಾರಣವನ್ನೂ ಹೇಳುತ್ತಾರೆ—"ನಾನು ಜನ್ಮರಹಿತನಾಗಿದ್ದರೂ ಕೂಡ ನಾಶರಹಿತವಾದ ಸ್ವರೂಪವುಳ್ಳವನಾಗಿದ್ದರೂ ಕೂಡ, ಪ್ರಾಣಿಗಳಿಗೆಲ್ಲಾ ಒಡೆಯನಾಗಿದ್ದರೂ ಕೂಡ, ನನ್ನ ಸ್ವಂತ ಪ್ರಕೃತಿಯನ್ನು (ಸ್ವಭಾವವನ್ನು) ನನ್ನ ಜೊತೆಯಲ್ಲಿ ಹೊಂದಿದವನಾಗಿಯೇ (ನನ್ನ ಸ್ವಂತಪ್ರಕೃತಿಯನ್ನು ಆಶ್ರಯಿಸಿಕೊಂಡೇ) ನನ್ನ ಸಂಕಲ್ಪದಿಂದಲೇ ಅವತರಿಸುವೆನು (ಜನ್ಮಹೊಂದುವೆನು)—

ಅಜತ್ವ, ಅವ್ಯಯತ್ವ, ಸರ್ವೇಶ್ವರತ್ವವೇ ಮೊದಲಾದ ಪರಮೇಶ್ವರತ್ವದ ಪ್ರಕಾರವನ್ನು (ಸ್ವಭಾವವನ್ನು) ಬಿಡದೇ ನನ್ನ ಸ್ವಕೀಯವಾದ ಸ್ವಭಾವಗಳೊಂದಿಗೇ (ಅಂದರೆ ಅವುಗಳನ್ನು ಆಶ್ರಯಿಸಿಕೊಂಡೇ) ನನ್ನ ಮಾಯೆಯಿಂದಲೇ (ಅಂದರೆ ನನ್ನ ಸಂಕಲ್ಪದಿಂದಲೇ) ಅವತರಿಸುವೆನು ಇಲ್ಲಿ ಪ್ರಕೃತಿ ಎಂದರೆ ಸ್ವಭಾವವೆಂದು ಅರ್ಥಮಾಡಿದ್ದಾರೆ. ನನ್ನ ಸ್ವಂತವಾದ ಸ್ವಭಾವಗಳನ್ನು ಆಶ್ರಯಿಸಿಕೊಂಡು ನನ್ನ ಸ್ವರೂಪದಿಂದಲೇ ನನ್ನ ಇಚ್ಛೆಯಿಂದಲೇ ಅವತರಿಸುವೆನು ಎಂದು ಶ್ರೀಕೃಷ್ಣನು ಹೇಳಿರುವುದಾಗಿ ಅರ್ಥವಾಗುತ್ತದೆ. ಅವನ ಸ್ವರೂಪವು ಶ್ರುತಿವಾಕ್ಯಗಳಿಂದ ತಿಳಿಯಲ್ಪಟ್ಟಿದೆ "ಅವನು ಪ್ರಕೃತಿಮಂಡಲದ ಹೊರಗೆ ಸೂರ್ಯನಂತೆ ಪರಂಜ್ಯೋತಿ ಸ್ವರೂಪನಾಗಿ ಪ್ರಕಾಶಿಸುತ್ತಿದ್ದಾನೆ"—"ಆದಿತ್ಯದಲ್ಲಿ ದಿವ್ಯತೇಜೋರೂಪನಾದ ಪುರುಷನಾಗಿದ್ದಾನೆ" "ಹೃದಯಾಕಾಶದಲ್ಲಿರುವ ಪರಮ ಪುರುಷನು ಪರಿಶುದ್ಧವಾದ ಮನಸ್ಸಿನಿಂದ ಮಾತ್ರ ಗ್ರಾಹ್ಯನಾಗಿ, ನಿತ್ಯನಾಗಿ ಜ್ಯೋತಿಸ್ವರೂಪನಾಗಿದ್ದಾನೆ". "ಅವನು ಸ್ವಯಂಪ್ರಕಾಶನೂ, ಸತ್ಯವಾದ ಸಂಕಲ್ಪವುಳ್ಳವನೂ, ಸರ್ವಕ್ಕೂ ಆಧಾರವಾದ ಆಕಾಶವನ್ನೇ ಶರೀರವಾಗಿ ಉಳ್ಳವನೂ, ಸಮಸ್ತ ಕರ್ಮಗಳನ್ನೂ ತನಗಾಗಿಯೇ ಉಳ್ಳವನೂ, ಸಮಸ್ತ ಕಾಮಗಳನ್ನೂ ಸಂಕಲ್ಪಮಾತ್ರದಿಂದಲೇ ಪಡೆದಿರುವವನೂ ಸರ್ವಗಂಧ ಸರ್ವರಸರೂಪನೂ ಆಗಿದ್ದಾನೆ". "ಅವನು ದಿವ್ಯಮಂಗಳ ವಿಗ್ರಹವುಳ್ಳವನಾಗಿದ್ದಾನೆ" ಈ ರೀತಿಯಾಗಿ ಶ್ರುತಿಯಲ್ಲಿ ಅವನ ಸ್ವರೂಪವನ್ನು ವರ್ಣಿಸಿದ್ದಾರೆ

ಇಲ್ಲಿ ಮಾಯಾ ಎಂದರೆ ಜ್ಞಾನವೆಂದು ಅರ್ಥ ಹೇಳಿದ್ದಾರೆ. "ಮಾಯಾವಯುನಂ ಜ್ಞಾನಂ"– ಎಂಬ ವಚನದ ಪ್ರಕಾರ ಇಲ್ಲಿ ಮಾಯಾ ಎಂಬ ಪದವು ಜ್ಞಾನ ಪರ್ಯಾಯ ವಾಚಕ ವಾದುದು. ಆತ್ಮ ಮಾಯಯಾ ಎಂದರೆ ತನ್ನದಾದ ಮಾಯೆ ಯಿಂದ ಅಂದರೆ ತನ್ನ ಜ್ಞಾನದಿಂದ ಅಂದರೆ ತನ್ನ ಸಂಕಲ್ಪದಿಂದ ಅವತರಿಸುವೆನು ಎಂದು ಅಭಿಪ್ರಾಯ. ಆದ್ದರಿಂದ ಸಕಲ ದೋಷ ರಹಿತತ್ವ ಮತ್ತು ಸಮಸ್ತ ಕಲ್ಯಾಣ ಗುಣಾತ್ಮಕತ್ವವೇ ಮುಂತಾದ ಸಮಸ್ತ ಈಶ್ವರ ಸಂಬಂಧವಾದ (ಈಶ್ವರೀಯ) ಸ್ವಭಾವವನ್ನು ಬಿಡದೆ ತನ್ನ ಸ್ವರೂಪವನ್ನೇ ದೇವಮನುಷ್ಯಾದಿ ಗಳಿಗೆ ಸದೃಶವಾದ ಆಕಾರವನ್ನಾಗಿ ಮಾಡಿಕೊಂಡು ತನ್ನ ಸಂಕಲ್ಪದಿಂದಲೇ ದೇವಮನುಷ್ಯಾದಿ ರೂಪವುಳ್ಳವನಾಗಿ ಅವತರಿಸುವೆನು ಎಂದು ಅರ್ಥ. ಶ್ರುತಿಯೂ ಇದನ್ನೇ "ಅ ಜಾಯ ಮಾನೋಬಹುಧಾವಿಜಾಯತೇ" ಅಂದರೆ 'ಉತ್ಪತ್ತಿ ಇಲ್ಲದವನಾಗಿದ್ದರೂ ಬಹುವಿಧವಾಗಿ ಅವತರಿಸು ವೆನು.'' ಎಂದು ಹೇಳಿದೆ ಗೀತೆಯಲ್ಲಿಯೂ ಈ ನಾಲ್ಕು ಶ್ಲೋಕಗಳಲ್ಲಿ ಇದನ್ನೇ ತಿಳಿಸಿದ್ದಾರೆ ಭಗವಂತನು ಇತರ ಸಾಧಾ ರಣ ಪುರುಷರಂತೆ ಜನ್ಮವೆತ್ತದೆ ಮೇಲೆ ಹೇಳಿದ ಪ್ರಕಾರ ತನ್ನ ಸಂಕಲ್ಪದ ಮೂಲಕ ದೇವಮನುಷ್ಯಾದಿ ರೂಪದಲ್ಲಿ ಅವತರಿಸು ತ್ತಾನೆ ಎಂದು ಅರ್ಥ.

**ಶ್ಲೋಕ –7** ಇಲ್ಲಿ ಶ್ರೀ ಕೃಷ್ಣನು ಭಗವಂತನ ಅವತಾರದ ಕಾಲವನ್ನು ಹೇಳುತ್ತಾನೆ. "ಯಾವ ಯಾವ ಕಾಲಗಳಲ್ಲಿ ಧರ್ಮಕ್ಕೆ ಕೊರತೆ ಉಂಟಾಗುತ್ತದೆಯೋ, ಅಧರ್ಮದ ಅಭಿವೃದ್ಧಿ ಉಂಟಾಗುತ್ತದೆಯೋ ಆಗ ನನ್ನನ್ನು ನಾನು ಸೃಷ್ಟಿ ಸುವೆನು. (ನಾನು ಅವತರಿಸುವೆನು)''– ನನ್ನ ಅವತಾರಕ್ಕೆ ಕಾಲನಿಯಮವಿಲ್ಲ ಯಾವಯಾವ ಕಾಲಗಳಲ್ಲೆಲ್ಲಾ ಧರ್ಮಕ್ಕೆ ಚ್ಯುತಿ ಉಂಟಾಗುತ್ತದೆಯೋ ಅಂದರೆ ವೇದೋಕ್ತವಾದ ಚತು ರ್ವರ್ಣ ಚತುರಾಶ್ರಮಗಳ ವ್ಯವಸ್ಥೆಯಿಂದ ಕೂಡಿದ ಕರ್ಮಗಳಿಗೆ ಹಾನಿಯುಂಟಾಗುತ್ತದೆಯೋ ಮತ್ತು ಯಾವ ಯಾವ ಕಾಲ ಗಳಲ್ಲಿ ಅದಕ್ಕೆ ವ್ಯತಿರಿಕ್ತವಾದ ಅಭಿವೃದ್ಧಿ ಉಂಟಾಗುತ್ತದೆಯೋ ಆಗ ನಾನೇ ನನ್ನ ಸಂಕಲ್ಪದಿಂದಲೇ ಮೇಲೆ ಹೇಳಿದ ರೀತಿ ಯಲ್ಲಿ ಅವತರಿಸುವೆನು.

**ಶ್ಲೋಕ–8** ಇಲ್ಲಿ ಶ್ರೀ ಕೃಷ್ಣನು ಅವತಾರದ ಪ್ರಯೋಜನವನ್ನು ತಿಳಿಸುತ್ತಾನೆ. "ಸಾಧುಗಳನ್ನು ರಕ್ಷಿಸುವು ದಕ್ಕಾಗಿಯೂ, ದುಷ್ಕರ್ಮಿಗಳನ್ನು ನಾಶಗೊಳಿಸುವುದಕ್ಕಾಗಿಯೂ, ಧರ್ಮವನ್ನು ಚೆನ್ನಾಗಿ ಸ್ಥಾಪಿಸುವುದಕ್ಕಾಗಿಯೂ ಯುಗಯುಗ ಗಳಲ್ಲಿ ಅವತರಿಸುವೆನು''–

ಇಲ್ಲಿ ಭಗವಂತನು ಮುಖ್ಯವಾಗಿ ಮೂರುಪ್ರಯೋಜನ ಗಳಿಗಾಗಿ ತಾನು ಅವತರಿಸುವೆನು ಎಂಬುದನ್ನು ತಿಳಿಸಿದ್ದಾನೆ. ಸಾಧುಗಳ ಸಂರಕ್ಷಣೆಯೇ ಅವತಾರದ ಮೊದಲನೆಯ ಪ್ರಯೋ ಜನ. ಸಾಧುಗಳೆಂದರೆ ಮೇಲೆ ವಿವರಿಸಿದ ಲಕ್ಷಣವುಳ್ಳ ಧರ್ಮಶೀಲ ರಾದ ವೈಷ್ಣವಾಗ್ರೇಸರರಾದ ಮತ್ತು ನನ್ನನ್ನು ಚೆನ್ನಾಗಿ ಆಶ್ರಯಿ ಸುವ ಪ್ರವೃತ್ತಿ ಉಳ್ಳವರಾದ ನನ್ನ ಭಕ್ತರು ಅವರು ನನ್ನ ನಾಮ, ಕರ್ಮ ಮತ್ತು ಸ್ವರೂಪ ಗಳು ವಾಕ್ಕಿಗೂ ಮನಸ್ಸಿಗೂ ಅಗೋಚರವಾಗಿರುವುದರಿಂದ ನನ್ನ ದರ್ಶನವನ್ನು ಹೊಂದದೆ ತಮ್ಮ ಜೀವನಧಾರಣೆ ಪೋಷಣೆಗಳಲ್ಲಿ ಸ್ವಲ್ಪವೂ ಸುಖವನ್ನು ಹೊಂದದವರಾಗಿ ನನ್ನ ದರ್ಶನ ಹೊಂದದ ಕ್ಷಣಮಾತ್ರದ ಕಾಲವನ್ನು ಕೂಡ ಸಹ ಸಾವಿರು ಕಲ್ಪಗಳ ಸಮಾನವಾಗಿ ಭಾವಿಸುತ್ತಾ (ನನ್ನವಿರಹ ತಾಪದಿಂದ) ಕೃಶವಾದ ಶರೀರವುಳ್ಳವರಾಗಿ ಆಗುವರು. ಅವರಿಗೆ ನನ್ನ ಸ್ವರೂಪಲೀಲೆಗಳ ದರ್ಶನವನ್ನು ಕೊಟ್ಟು ಮತ್ತು ನನ್ನೊ ಡನೆ ಮಾತುಕತೆಗಳನ್ನಾಡುವ ಸದವಕಾಶವನ್ನು ಕರುಣಿಸಿ ಅವ ರನ್ನು ವಿರಹತಾಪದಿಂದ ಕಾಪಾಡುವುದಕ್ಕಾಗಿ ನಾನು ಅವತಾರ ಗಳನ್ನು ಎತ್ತುವೆನು. ಇವರಿಗೆ ಪ್ರತಿಯಾಗಿ ಅಂದರೆ ಭಗವದ್ವಿ

ಮುಖರಾಗಿ ದುಷ್ಟಕರ್ಮಗಳನ್ನು ಮಾಡುವವರನ್ನು ನಾಶಗೊಳಿಸುವುದು ಅವತಾರದ ಎರಡನೆಯ ಪ್ರಯೋಜನ ಕ್ಷಯಿಸಿಹೋಗುತ್ತಿರುವ ಧರ್ಮವನ್ನು ಸ್ಥಾಪಿಸುವುದೇ ಅವತಾರದ ಮೂರನೆಯ ಪ್ರಯೋಜನ. ಭಗವದಾರಾಧನ ರೂಪವಾದ ಧರ್ಮವು ಕ್ಷಯಿಸಿ ಹೋಗುತ್ತಿದೆ. ಆದ್ದರಿಂದ ನನ್ನ ಆರಾಧ್ಯಸ್ವರೂಪವನ್ನು ಸಾಕ್ಷಾತ್ತಾಗಿ ಪ್ರದರ್ಶಿಸುವುದರ ಮೂಲಕ ಅದನ್ನು ಸಂಸ್ಥಾಪನೆ ಮಾಡುವುದಕ್ಕಾಗಿ ನಾನು ಅವತರಿಸುತ್ತೇನೆ. ಮೇಲೆ ವಿವರಿಸಿದ ಮೂರು ಪ್ರಯೋಜನಗಳಿಗಾಗಿ ನಾನು ದೇವಮನುಷ್ಯಾದಿ ರೂಪಗಳಲ್ಲಿ ಯುಗಯುಗಗಳಲ್ಲಿ ಅವತರಿಸುವೆನು. ಅವತಾರ ಕಾಲಕ್ಕೆ ಕೃತತ್ರೇತಾದಿ ಯುಗಗಳ ಯಾವ ವಿಶೇಷ ನಿಯಮವೂ ಇಲ್ಲ ಎಂದು ಅಭಿಪ್ರಾಯ (ಈ ಕಾರ್ಯಗಳನ್ನು ಭಗವಂತನು ತಾನು ಇರುವ ಸ್ಥಳದಿಂದಲೇ ತನ್ನ ಸಂಕಲ್ಪ ಮಾತ್ರದಿಂದಲೇ ಮಾಡಲಾರನೇ ? ಇದಕ್ಕಾಗಿ ಏತಕ್ಕೆ ಅವತರಿಸಬೇಕು ? ಎಂಬ ಶಂಕೆ ಹುಟ್ಟುತ್ತದೆ ಅದಕ್ಕೆ ಉತ್ತರವಾಗಿ ತಿಳಿಸುವುದೇನೆಂದರೆ ಈ ಕಾರ್ಯಗಳನ್ನು ಭಗವಂತನು ಸಂಕಲ್ಪ ಮಾತ್ರದಿಂದಲೇ ಮಾಡಬಲ್ಲನು ಆದರೆ ಭಗವದ್ಭಕ್ತರು ತಮ್ಮ ಇಡೀ ಜೀವನವೆಲ್ಲಾ ಭಗವಂತನಲ್ಲಿ ಭಕ್ತಿಪ್ರಪತ್ತಿಗಳನ್ನು ಮಾಡಿ ಅವನ ದರ್ಶನಾದಿಗಳಿಗೆ ಆಸೆಪಡುತ್ತಿರುವರು ಕರುಣಾನಿಧಿಯಾಗಿಯೂ, ಭಕ್ತ ಪರಾಧೀನನಾಗಿಯೂ ಇರುವ ಭಗವಂತನಿಗೆ ತನ್ನ ಭಕ್ತರ ಆಸೆಯನ್ನು ಸಫಲಗೊಳಿಸುವುದು ಮುಖ್ಯ ಕರ್ತವ್ಯ ಅದಕ್ಕಾಗಿ ಅವತರಿಸಲೇಬೇಕು ದುಷ್ಟನಿಗ್ರಹವನ್ನು ಬೇಕಾದರೆ ಸಂಕಲ್ಪ ಮಾತ್ರದಿಂದ ಮಾಡಬಹುದು. ಆದರೆ ಅಲ್ಲಿಯೂ ಕೂಡ ಅಂದರೆ ದುಷ್ಟನಿಗ್ರಹ ಮಾಡುವಾಗಲೂ ಕೂಡ ಇವನ ಸ್ವರೂಪದರ್ಶನವುಂಟಾದರೆ ಅನೇಕ ದುರ್ಜನರು ಸಜ್ಜನರಾಗಿ ಮಾರ್ಪಡುವರು ತಾನೇ ಸ್ವಂತವಾಗಿ ಅವತರಿಸಿ ದುಷ್ಟ ಶಿಕ್ಷಣ ಮಾಡುವುದರಲ್ಲಿ ಈ ಒಂದು ಮಹದ್ಗುಣವಿರುವುದು–ಇನ್ನು ಮೂರನೆಯ ಪ್ರಯೋಜವಾದ ಭಗವದಾರಾಧನಾರೂಪವಾದ ಧರ್ಮಸಂಸ್ಥಾಪನೆ ಮಾಡುವಾಗ ತಾನೇ ಸರ್ವ ಕರ್ಮ ಸಮಾರಾಧ್ಯನು ಎಂಬುದನ್ನು ಪ್ರತಿಪಾದಿಸಲು ತನ್ನ ದಿವ್ಯ ಮಂಗಳ ವಿಗ್ರಹವನ್ನು ತೋರಿಸಬೇಕಾಗುವುದು. ಈ ಕಾರಣಗಳಿಂದ ಭಗವದವತಾರವು ಅತ್ಯವಶ್ಯಕವಾದುದು )

ಇನ್ನು ಮುಂದೆ ಮೂರು ಶ್ಲೋಕಗಳಿಂದ ಭಗವದವತಾರ ರಹಸ್ಯ ಜ್ಞಾನದ ಫಲವನ್ನು ತಿಳಿಸುತ್ತಾನೆ–

**ಶ್ಲೋಕ—9** " ನನ್ನ ಜನ್ಮವೂ (ಅವತಾರವೂ) ಮತ್ತು ಕರ್ಮವೂ (ಅವತಾರಕಾಲದಲ್ಲಿ ಮಾಡಿದ ದಿವ್ಯ ಚೇಷ್ಟಿತಗಳೂ) ದಿವ್ಯವಾದುದು (ಅಪ್ರಾಕೃತವಾದುದು) ಎಂದು ಯಾವನು ಹೀಗೆ ಯಥಾರ್ಥವಾಗಿ ತಿಳಿಯುವನೋ ಅವನು ದೇಹವನ್ನು ಬಿಟ್ಟಮೇಲೆ ಮತ್ತೆ (ಪುನಃ) ಜನ್ಮವನ್ನು ಹೊಂದುವುದಿಲ್ಲ, ನನ್ನನ್ನು ಹೊಂದುತ್ತಾನೆ "

ಭಗವಂತನಾದ ನನ್ನ ಅವತಾರವು ಕರ್ಮ ಮೂಲಕವಾಗಿ ಉಂಟಾದ ಜನ್ಮವಲ್ಲ. ಹೇಯವಾದ ಸತ್ವರಜಸ್ತಮೋಗುಣಗಳಿಂದ ಕೂಡಿದ ಪ್ರಕೃತಿ ಸಂಬಂಧ ರೂಪವಾದ ಜನ್ಮವಲ್ಲ. ಆದರೆ ಸರ್ವೇಶ್ವರತ್ವ, ಸರ್ವಜ್ಞತ್ವ ಸತ್ಯ ಸಂಕಲ್ಪತ್ವವೇ ಮುಂತಾದ ಸಮಸ್ತ ಕಲ್ಯಾಣ ಗುಣಗಳಿಂದ ಸೇರಿರುವಂತಹದು ಮತ್ತು ತನ್ನ ಭಕ್ತರಾದ ಸಾಧು ಜನರನ್ನು ಕಾಪಾಡಲು ಅಂದರೆ ಅವರಿಗೆ ತನ್ನ ಆಶ್ರಯ ನೀಡುವುದೊಂದನ್ನೇ ಪ್ರಯೋಜನವಾಗಿ ಹೊಂದಿರುವಂತಹುದು ಮತ್ತು ದಿವ್ಯವಾದುದು ಅಂದರೆ ಅಪ್ರಾಕೃತವಾದುದು, ಅಸಾಧಾರಣವಾದುದು ಎಂದು ನನ್ನ ಜನ್ಮ ಮತ್ತು ಚೇಷ್ಟಿತಗಳನ್ನು (ಅವತಾರ ಮತ್ತು ಅದರ ಮೂಲಕ ಮಾಡಿದ ಲೀಲೆಗಳನ್ನು) ಯಥಾರ್ಥವಾಗಿ (ಸಂಶಯರಹಿತವಾಗಿ) ಯಾವನು ತಿಳಿಯುತ್ತಾನೆಯೋ ಅವನು ಈಗಿರುವ ತನ್ನ ದೇಹವನ್ನು ತ್ಯಜಿಸಿದ ಮೇಲೆ ಮತ್ತೆ ಜನ್ಮವನ್ನು ಹೊಂದುವುದಿಲ್ಲ–ನನ್ನನ್ನೇ ಹೊಂದುತ್ತಾನ ನನ್ನ ದಿವ್ಯವಾದ ಜನ್ಮ ಮತ್ತು ಚೇಷ್ಟಿತಗಳನ್ನು ಯಥಾರ್ಥವಾಗಿ ತಿಳಿಯುವುದರಿಂದ ನನ್ನ ಸಮಾಶ್ರಯಣಕ್ಕೆ (ನನ್ನನ್ನು ಆಶ್ರಯಿಸುವುದಕ್ಕೆ) ವಿರೋಧಿಗಳಾದ ಸಮಸ್ತ ಪಾಪಗಳಿಂದ ಬಿಡಲ್ಪಟ್ಟವನಾಗುತ್ತಾನೆ ಮತ್ತು ಈ ಜನ್ಮದಲ್ಲೇ ಮೇಲೆ ಹೇಳಿದ ರೀತಿಯಲ್ಲಿ ನನ್ನನ್ನು ಆಶ್ರಯಿಸಿ ನನ್ನೊಬ್ಬನನ್ನೇ ಪ್ರೀತಿಸುವವನಾಗಿ ಮತ್ತು ನನ್ನೊಬ್ಬನನ್ನೇ ಚಿತ್ತದಲ್ಲಿ ಉಳ್ಳವನಾಗಿ ನನ್ನನ್ನೇ ಹೊಂದುವವನು.

ಮೇಲಿನ ಶ್ಲೋಕದ ಅಭಿಪ್ರಾಯವನ್ನೇ ವಿವರಿಸುತ್ತಾನೆ.

**ಶ್ಲೋಕ—10** "ಜ್ಞಾನ ತಪಸ್ಸಿನಿಂದ (ನನ್ನ ಅವತಾರಗಳ ಜ್ಞಾನ ರೂಪವಾದ ತಪಸ್ಸಿನಿಂದ) ಪರಿಶುದ್ಧರಾಗಿ (ಪಾಪಗಳನ್ನೆಲ್ಲಾ ಕಳೆದುಕೊಂಡವರಾಗಿ) ಅನೇಕರು ರಾಗಭಯಕ್ರೋಧರಹಿತರಾಗಿ ನನ್ನನ್ನೇ ಯಾವಾಗಲೂ ಮನಸ್ಸಿನಲ್ಲಿ ಉಳ್ಳವರಾಗಿ ( ನನ್ನಲ್ಲೇ ನೆಟ್ಟ ಮನಸುಳ್ಳವರಾಗಿ) ನನ್ನನ್ನೇ ಆಶ್ರಯಿಸುವವರಾಗಿ ನನ್ನ ಸ್ವಭಾವವನ್ನು ಹೊಂದುತ್ತಾರೆ"–

ನನ್ನ ಜನ್ಮ ಮತ್ತು ಕರ್ಮಗಳ ತತ್ವಜ್ಞಾನವೆಂಬ ತಪಸ್ಸಿನಿಂದ ಪವಿತ್ರರಾದ ಅನೇಕರು ಈ ರೀತಿಯಾಗಿ ಆಗುವರು ಅಂದರೆ ಪುನರ್ಜನ್ಮವಿಲ್ಲದೆ ನನ್ನ ಸ್ವಭಾವವಾದ ಅಪಹತಪಾಪ್ಮತ್ವಾದಿ ಗುಣಾದಿಗಳನ್ನು ಹೊಂದುವರು ಎಂದು ಅಭಿಪ್ರಾಯ ಶ್ರುತಿಯಲ್ಲಿಯೂ ಧೀರರು ಭಗವಂತನ ಜನ್ಮವನ್ನು ಚೆನ್ನಾಗಿ ತಿಳಿಯುತ್ತಾರೆ ಎಂದು ಹೇಳಿದೆ. ಧೀರರು ಎಂದರೆ ದೀಮಂತಾ ಅಗ್ರೇಸರರು. ಅಂದರೆ ಬುದ್ಧಿವಂತರಲ್ಲಿ ಅಗ್ರಗಣ್ಯರಾದವರೇ ಭಗವಂತನ ಜನ್ಮ ಪ್ರಕಾರವನ್ನು ತಿಳಿಯುತ್ತಾರೆ ಎಂದು ಅರ್ಥ.

**ಶ್ಲೋಕ—11** ಇಲ್ಲಿ ಶ್ರೀ ಕೃಷ್ಣನು ನನ್ನ ಆಶ್ರಯವನ್ನು ಇಚ್ಛಿಸುವವರ ರಕ್ಷಣೆಯನ್ನು ಕೇವಲ ದೇವ ಮನುಷ್ಯಾದಿರೂಪದಲ್ಲಿ ಅವತರಿಸುವದರಿಂದ ಮಾತ್ರ ಮಾಡುವುದಿಲ್ಲ ಅವರವರ ಇಚ್ಛಾನುಸಾರವಾಗಿ ಅವರವರಿಗೆದರ್ಶನ ಕೊಟ್ಟು ರಕ್ಷಿಸುವೆನು ಎಂದು ಹೇಳಿದ್ದಾನೆ

"ಯಾರು ಹೇಗೆ (ಯಾವ ಪ್ರಕಾರವಾಗಿ) ನನ್ನನ್ನು ಆಶ್ರಯಿಸುತ್ತಾರೆಯೋ ಅವರನ್ನು ಹಾಗೆಯೇ (ಅದೇ ಪ್ರಕಾರವಾಗಿ) ಅನುಗ್ರಹಿಸುವೆನು ಮನುಷ್ಯರು ಎಲ್ಲಾ ಪ್ರಕಾರದಿಂದಲೂ ನನ್ನ ಸ್ವಭಾವವನ್ನೇ ಅನುಸರಿಸಿ ನಡೆಯುತ್ತಾರೆ"–

ನನ್ನ ಆಶ್ರಯವನ್ನು ಇಚ್ಛಿಸುವವರು, ಅವರ ಅಪೇಕ್ಷೆಗೆ ಅನುರೂಪವಾಗಿ ಯಾವ ಪ್ರಕಾರದಿಂದ ನನ್ನನ್ನು ಸಂಕಲ್ಪಿಸಿಕೊಂಡು ಆಶ್ರಯಿಸುತ್ತಾರಯೋ ಅವರನ್ನು ಕುರಿತು ಅದೇರೀತಿ ಅಂದರೆ ಅವನ ಇಷ್ಟ ಪ್ರಕಾರವಾಗಿ ಅವರಿಗೆ ದರ್ಶನವನ್ನು ಕೊಡುವೆನು ಈ ವಿಷಯದಲ್ಲಿ ಹೆಚ್ಚು ಹೇಳುವುದೇನಿದೆ? ನನ್ನನ್ನು ಅನುಸರಿಸಬೇಕೆಂಬ ಮನೋರಥವುಳ್ಳ ಎಲ್ಲಾ ಮನುಷ್ಯರೂ ನನ್ನ ಎಲ್ಲಾ ಸ್ವಭಾವಗಳನ್ನು ಅವು ಯೋಗಿಗಳ ವಾಕ್ಕಿಗೂ ಮನಸ್ಸಿಗೂ ಅಗೋಚರವಾಗಿದ್ದರೂ ಕೂಡ ತಮ್ಮ ಕಣ್ಣು ಮುಂತಾದ ಇಂದ್ರಿಯಗಳಿಂದ ತಾವು ಅಪೇಕ್ಷಿಸಿದ ಸ್ವರೂಪದಲ್ಲಿ ಎಲ್ಲಾ ಪ್ರಕಾರದಿಂದಲೂ ಸರ್ವಕಾಲದಲ್ಲಿಯೂ ಅನುಭವಿಸುತ್ತಾ ಅನುಸರಿಸುತ್ತಾರೆ ಎಂದು ಅಭಿಪ್ರಾಯ.

ಇಲ್ಲಿಯವರೆಗೆ ಪ್ರಾಸಂಗಿಕವಾಗಿ ಬಂದ ಅವತಾರ ರಹಸ್ಯ ವಿಷಯವನ್ನು ಹೇಳಿ ಮುಗಿಸಿದ್ದಾರೆ ಅದರ ಸಾರಾಂಶವೇನೆಂದರೆ ಭಗವಂತನು ಅವತರಿಸುವುದು ಕೇವಲ ಅವನ ಇಚ್ಛೆಯಿಂದ, ಅವನ ಲೀಲೆಗೆ ಮಾತ್ರವೇ ಹೊರತು ಯಾವ ಕರ್ಮಬಂಧನದಿಂದಲೂ ಅಲ್ಲ, ಅವನ ಅವತಾರ ಶರೀರವು ಅಪ್ರಾಕೃತವಾದುದು, ದಿವ್ಯವಾದುದು, ಪ್ರಕೃತಿಯ ದೋಷಗಳೊಂದೂ ಅದಕ್ಕೆ ಇಲ್ಲ. ಅವತಾರಕ್ಕೆ ಯಾವ ಕಾಲನಿಯಮವೂ ಇಲ್ಲ. ಜಗತ್ತಿನಲ್ಲಿ ಧರ್ಮಗ್ಲಾನಿಯುಂಟಾಗಿ ಅಧರ್ಮವು ತಲೆಎತ್ತಿದಾಗ ಭಗವಂತನು ಅವತರಿಸುತ್ತಾನೆ. ಸಾದು ಪರಿತ್ರಾಣ, ದುಷ್ಟ ಶಿಕ್ಷಣ, ಧರ್ಮಸಂಸ್ಥಾಪನವೇ ಅವತಾರಕ್ಕೆ ಮುಖ್ಯ ಪ್ರಯೋಜನ ಭಗವಂತನ ಅವತಾರಗಳನ್ನೂ ಆಯಾ ಅವತಾರಗಳಲ್ಲಿ ಅವನು ಮಾಡಿದ ಕೆಲಸಕಾರ್ಯಗಳನ್ನೂ ತತ್ವವತ್ತಾಗಿ ತಿಳಿದು ಅನುಸಂಧಾನ ಮಾಡುವವರಿಗೆ ಪುನರ್ಜನ್ಮವಿಲ್ಲ. ಅವರು ಭಗವಂತನನ್ನೇ ಹೊಂದುತ್ತಾರೆ. ಭಗವಂತನ ಜನ್ಮಕರ್ಮಗಳ ಜ್ಞಾನರೂಪವಾದ ತಪಸ್ಸಿನಿಂದ ಭಗವಂತನನ್ನು ಹೊಂದಲು ವಿರೋಧವಾಗಿರುವ ಸಕಲ ಪಾಪಗಳೂ ನಾಶವಾಗಿ ಅವರು ಪರಿಶುದ್ಧರಾಗಿ, ರಾಗದ್ವೇಷಗಳಿಂದ ಬಿಡುಗಡೆಹೊಂದಿ ಸದಾಮನಸ್ಸಿನಲ್ಲಿ ಭಗವಂತನ ಸ್ಮರಣೆ ಹೊಂದಿದವರಾಗಿ ಭಗವಂತನನ್ನೇ ಆಶ್ರಯಿಸಿ ಅವನ ಸ್ವಭಾವವನ್ನೇ ಹೊಂದಿದವರಾಗುತ್ತಾರೆ. ಅದೂ ಅಲ್ಲದೆ ಭಕ್ತರು ಯಾವ ರೀತಿ ಭಗವಂತನನ್ನು ಧ್ಯಾನಿಸಿ ಆಶ್ರಯಿಸುತ್ತಾರೋ ಅದೇ ರೀತಿ ಅವನು ಅವರಿಗೆ ದರ್ಶನವಿತ್ತು ಅನುಗ್ರಹಿಸುತ್ತಾನೆ ಯೋಗಿಗಳ ಮನೋವಾಕ್ಕುಗಳಿಗೆ ಅಗೋಚರನಾಗಿರುವ ಭಗವಂತನ ಸ್ವಭಾವಗಳನ್ನೆಲ್ಲಾ ಭಕ್ತರು ತಮ್ಮ ಕಣ್ಣು ಮುಂತಾದ ಇಂದ್ರಿಯಗಳ ಮೂಲಕ ಅನುಭವಿಸುತ್ತಾ ಅವನನ್ನೇ ಅನುಸರಿಸುತ್ತಾರೆ ಎಂದು ಅಭಿಪ್ರಾಯ

## (111) ಕರ್ಮಯೋಗದ ಜ್ಞಾನಾಕಾರತೆಯ ನಿರೂಪಣೆ—

### (ಶ್ಲೋಕಗಳು 12ರಿಂದ 24)

(1) ಕರ್ಮಯೋಗವನ್ನು ಅನುಷ್ಠಿಸುವ ಅಧಿಕಾರಿಗಳ ದುರ್ಲಭತೆ— (ಶ್ಲೋಕ—12)

**ಶ್ಲೋಕ 12**—"ಕರ್ಮಗಳಿಗೆ ಫಲವನ್ನು ಅಪೇಕ್ಷಿಸುವವರು (ಲೌಕಿಕ ಸಕಾಮ ಪುರುಷರು) ಈ ಲೋಕದಲ್ಲಿ (ಇಂದ್ರಾದಿ) ದೇವತೆಗಳನ್ನು ಪೂಜಿಸುತ್ತಾರೆ. ಏತಕ್ಕೆಂದರೆ ಮನುಷ್ಯ ಲೋಕದಲ್ಲಿ ಕರ್ಮದಿಂದ ಉಂಟಾಗುವ ಸಿದ್ಧಿಯು ಶೀಘ್ರವಾಗಿ ಉಂಟಾಗುತ್ತದೆ."—ಅನಾದಿ ಕಾಲದಿಂದ ಪ್ರವೃತ್ತಿಸಿಕೊಂಡು ಬಂದಿರುವ ಅನಂತವಾದ ಪಾಪರಾಶಿಗಳು ನಾಶವಾಗದೇ ಇರುವುದರಿಂದ ಸಮಸ್ತ ಲೌಕಿಕ ಪುರುಷರೂ ವಿವೇಕರಹಿತರಾಗಿ, ತಮ್ಮ ಕರ್ಮಗಳಿಗೆಲ್ಲಾ ಶೀಘ್ರದಲ್ಲಿ ಫಲ ಲಭಿಸಬೇಕೆಂಬ ಆಸೆಯುಳ್ಳವರಾಗಿರುತ್ತಾರೆ. ಅವರು ಪುತ್ರ ಪಶು ಅನ್ನಾದಿಗಳೇನ್ನು ಮತ್ತು ಸ್ವರ್ಗಭೋಗಾದಿಗಳೇನು ಇವುಗಳಿಗಾಗಿ ಇಂದ್ರಾದಿದೇವತೆಗಳನ್ನು ಪೂಜಿಸುತ್ತಾರೆ.

ಏಕೆಂದರೆ ಈ ಮನುಷ್ಯ ಲೋಕದಲ್ಲಿ ಯಜ್ಞದಾನಾದಿ ಕರ್ಮಗಳ ಮೂಲಕ ದೇವತೆಗಳನ್ನು ಪೂಜಿಸುವುದರಿಂದ ಪುತ್ರ, ಪಶು, ಅನ್ನಾದಿ ಪ್ರಾಪ್ತಿರೂಪ ಫಲವು ಶೀಘ್ರವಾಗಿ ಲಭಿಸುತ್ತದೆ. ಇಲ್ಲಿ ಮನುಷ್ಯಲೋಕ ಶಬ್ದದಿಂದ ಸ್ವರ್ಗಾದಿಫಲಗಳೂ ಸಂಗ್ರಹಿಸಿ ಹೇಳಲ್ಪಟ್ಟಂತೆ ಅರ್ಥ ಮಾಡಿದ್ದಾರೆ. ಆದ್ದರಿಂದ ಕರ್ಮಗಳಿಗೆ ಫಲಗಳನ್ನು ಅಪೇಕ್ಷಿಸುವ ಸಮಸ್ತ ಮಾನವರೂ ಇಂದ್ರಾದಿ ದೇವತೆಗಳನ್ನು ಶಾಸ್ತ್ರವಿಧಿಗೆ ಅನುಸಾರವಾಗಿ ಪೂಜಿಸುತ್ತಾರೆ. ಆದರೆ ಆ ಇಂದ್ರಾದಿ ದೇವತೆಗಳಿಗೆ ಆತ್ಮಸ್ವರೂಪನಾದ ಸಮಸ್ತ ಯಜ್ಞಗಳ ಭೋಕ್ತೃವಾದ ನನ್ನನ್ನು ಫಲಾಭಿಸಂಧಿರಹಿತನಾಗಿ ಯಾವನೂ ಕೂಡ ಪೂಜಿಸುವುದಿಲ್ಲ. ಹೃದಯದಿಂದ ಸಂಸಾರದಲ್ಲಿ ಜಿಹಾಸೆ ಹೊಂದಿದವನಾಗಿ ಮೋಕ್ಷದಲ್ಲಿ ಆಸೆಯನ್ನು ಹೊಂದಿ ಮೇಲೆ ಹೇಳಿದ ಲಕ್ಷಣಗಳಿಂದ ಕೂಡಿದ, ನನ್ನ (ಭಗವಂತನ) ಆರಾಧನರೂಪವಾದ ಕರ್ಮಯೋಗವನ್ನು ಯಾವನೂ ಆರಂಭಿಸುವುದಿಲ್ಲ. ಅಂದರೆ ಅಂತಹ ಕರ್ಮಯೋಗನಿಷ್ಠನು ಬಹಳ ದುರ್ಲಭನು ಎಂದು ಅರ್ಥ ಅಂದರೇನು ಬಹುಮಂದಿ ಜನರು ಕರ್ಮಯೋಗವನ್ನು ಆರಂಭಿಸುವುದಿಲ್ಲ.

(2) ಕರ್ಮಯೋಗಕ್ಕೆ ವಿರೋಧಿಗಳಾದ ಪಾಪಗಳನ್ನು ನಾಶಪಡಿಸುವ ಮಾರ್ಗ—(ಶ್ಲೋಕಗಳು–13, 14, 15)

**ಶ್ಲೋಕಗಳು 13, 14, 15**—"ಗುಣ ಮತ್ತು ಕರ್ಮಗಳ ವಿಭಾಗಗಳಿಂದ ಚತುರ್ವರ್ಣಗಳು ನನ್ನಿಂದ ಸೃಷ್ಟಿಸಲ್ಪಟ್ಟಿವೆ ನಾನು ಅದರ ಕರ್ತೃವಾಗಿದ್ದರೂ ಕೂಡ ಅವಿನಾಶಿಯಾದ ನನ್ನನ್ನು ಅಕರ್ತೃವನ್ನಾಗಿ ತಿಳಿ''.

"ಸೃಷ್ಟ್ಯಾದಿ ಕರ್ಮಗಳು ನನಗೆ ಆ ಕರ್ಮಗಳ ಫಲದಲ್ಲಿ ಆಸೆಯೂ ಇಲ್ಲ. ಈ ಪ್ರಕಾರವಾಗಿ ಯಾರೂ ನನ್ನನ್ನು ಚೆನ್ನಾಗಿ ತಿಳಿಯುತ್ತಾನೆಯೋ ಅವನು (ಪುಣ್ಯ ಪಾಪರೂಪ) ಕರ್ಮಗಳಿಂದ ಬಂಧಿಸಲ್ಪಡುವುದಿಲ್ಲ'' — ''ಈ ರೀತಿಯಾಗಿ ತಿಳಿದುಕೊಂಡು ಪೂರ್ವಕಾಲದ ಮೋಕ್ಷಾರ್ಥಿಗಳೂ ಕೂಡ ಕರ್ಮಮಾಡಿದ್ದಾರೆ. ಆ ಕಾರಣದಿಂದ ನೀನೂ ಪೂರ್ವಿಕರಿಂದ ಮಾಡಲ್ಪಟ್ಟ ಪುರಾತನವಾದ ಕರ್ಮವನ್ನೇ ಮಾಡು '—

ಚತುರ್ವರ್ಣವೇ ಮೊದಲಾದುವು ಅಂದರ ಬ್ರಹ್ಮನಿಂದ ಹಿಡಿದು ಕಂಬದವರೆಗಿದ ಜಗತ್ತಿನ ಸಮಸ್ತ ವಸ್ತುಗಳೂ ತಮ್ಮ ತಮ್ಮಲ್ಲಿರುವ ಸತ್ತ್ವಾದಿಗುಣಗಳಿಗೆ ಅನುಗುಣವಾಗಿ ವಿಭಾಗಿಸಲ್ಪಟ್ಟು ಆಯಾ ವಿಭಾಗಗಳಿಗೆ ಅನುಗುಣವಾದ ಶಮಾದಿಕರ್ಮ ವಿಭಾಗಗಳನ್ನು ಹೊಂದಿ ಚತುರ್ವರ್ಣಗಳಾಗಿ ವಿಂಗಡಿಸಲ್ಪಟ್ಟು ನನ್ನಿಂದ ಸೃಷ್ಟಿಸಲ್ಪಟ್ಟಿವೆ ಈ ಚಾತುರ್ವರ್ಣದಿಂದ ಕೂಡಿದ ಜಗತ್ತು ನನ್ನಿಂದಲೇ ಸೃಷ್ಟಿಸಲ್ಪಡುತ್ತದೆ, ರಕ್ಷಿಸಲ್ಪಡುತ್ತದೆ ಮತ್ತು ನನ್ನಿಂದಲೇ ಪ್ರಳಯವನ್ನೂ ಹೊಂದುತ್ತದೆ. ಈ ವಿಧವಾದ ಪ್ರಪಂಚಸೃಷ್ಟಿಗೆ ನಾನು ಕಾರಣನು ಆದರೆ ವಿಚಿತ್ರ ಸೃಷ್ಟ್ಯಾದಿಗಳಿಗೆ ನಾನೇ ಕರ್ತೃವಾಗಿ ಕಾರಣನಾಗಿದ್ದಾಗ್ಯೂ ಕೂಡನನ್ನನ್ನು ಕರ್ತೃವಲ್ಲ ಮತ್ತು ಕಾರಣವಲ್ಲವೆಂದೂ ತಿಳಿ ಎಂದು ಈ ಶ್ಲೋಕದಲ್ಲಿ ಶ್ರೀ ಕೃಷ್ಣನು ಹೇಳಿದ್ದಾನೆ.

ಆದರೆ ಇದು ಹೇಗೆ ಸಾಧ್ಯವೆಂದರೆ ಅದಕ್ಕೆ ಉತ್ತರವನ್ನು ಮುಂದಿನ ಶ್ಲೋಕದಲ್ಲಿ (14 ನೇ ಶೋಕದಲ್ಲಿ) ತಿಳಿಸಿದ್ದಾನೆ ಈ ವಿಚಿತ್ರಸೃಷ್ಟ್ಯಾದಿಗಳು ನನಗೆಸಂಬಂಧಿಸುವುದಿಲ್ಲ. ಅಂದರೆ ಸೃಷ್ಟಿಕಾರ್ಯದಲ್ಲಿರುವ ಈ ದೇವಮನುಷ್ಯಾದಿ ವಿಚಿತ್ರ ವೈವಿಧ್ಯತೆಗಳು ನನ್ನಿಂದ ಪ್ರಯುಕ್ತವಾದವುಗಳಲ್ಲಿಲ್ಲ ಅದಕ್ಕೆ ಸೃಷ್ಟಿಸಲ್ಪಡುವ ಆಯಾಜೀವಿಗಳ ಪುಣ್ಯಪಾಪರೂಪವಾದ ಕರ್ಮಗಳೇ ಕಾರಣ. ಆದ್ದರಿಂದ ವಿಚಿತ್ರವಾದ ಸೃಷ್ಟಿ ವೈವಿಧ್ಯತೆಗೆ ನಾನು ಕರ್ತನಲ್ಲ. ಪುಣ್ಯ ಪಾಪರೂಪವಾದ ಕರ್ಮಗಳಲ್ಲಿ ಜೀವಿಗಳಲ್ಲಿ ಒಬ್ಬರಿಗೊಬ್ಬರಿಗೆ ತಾರತಮ್ಯವಿರುವುದರಿಂದ, ಆ ತಾರತಮ್ಯವೇ ಈ ವಿಚಿತ್ರ ಸೃಷ್ಟಿಗೆ ಕಾರಣವಾಗಿದೆ ಆ ತಾರತಮ್ಯಕ್ಕೆ ಅನುಗುಣವಾಗಿ ಸುಖದುಃಖರೂಪವಾದ ವಿಷಮ ಸೃಷ್ಟಿ ಉಂಟಾಗುತ್ತದೆ. ಸೃಷ್ಟಿಸಲ್ಪಟ್ಟಿರುವ ಜೀವಿಗಳು ಸೃಷ್ಟಿನಿಯಮಕ್ಕೆ ಅನುಗುಣವಾಗಿ ಆ ಸೃಷ್ಟಿಯಿಂದ ಉಂಟಾದ ಇಂದ್ರಿಯಗಳನ್ನೂ ಶರೀರಗಳನ್ನೂ ಪಡೆದಿದ್ದಾರೆ. ಫಲಾಶಕ್ತಿಯಿಂದ ಕೂಡಿದ ಅವರ ಕರ್ಮಗಳಿಗೆ ಅನುರೂಪವಾಗಿ ಸೃಷ್ಟಿಯನಿಯಮಾನುಸಾರ ಆ ಸೃಷ್ಟಿಯಿಂದಲೇ ಪ್ರಾಪ್ತವಾದ ಭೋಗಗಳನ್ನು ಅವರವರು ಭೋಗಿಸುತ್ತಾರೆ. ಆದ್ದರಿಂದ ಸೃಷ್ಟ್ಯಾದಿ ಫಲದಲ್ಲೂ, ಕರ್ಮಗಳಫಲದಲ್ಲೂ ಆ ಜೀವಿಗಳಿಗೆ ಆಸೆ ಇದೆಯೋ ಹೊರತು (ಭಗವಂತನಾದ) ನನಗೆ ಯಾವ ಆಸೆಯೂ ಇಲ್ಲ ಆದ್ದರಿಂದ ಕರ್ಮವು ಜೀವಿಗಳಿಗೆ ಅಂಟಿಕೊಳ್ಳುವುದೇ ವಿನಹ (ಭಗವಂತನಾದ) ನನಗ ಸಂಬಂಧಿಸುವುದೇ ಇಲ್ಲ ಎಂದು ಅಭಿಪ್ರಾಯ ಇದನ್ನೇ ವೇದಾಂತ ಸೂತ್ರದಲ್ಲಿ ವ್ಯಾಸರು, "ವೈಷಮ್ಯನೈರ್ಘೃಣ್ಯೇನ ಸಾಪೇಕ್ಷತ್ವಾತ್"- ಅಂದರೆ ''ಈಶ್ವರನಿಗ ವಿಷಮತೆಯಾಗಲಿ ನಿರ್ದಯತೆಯಾಗಲಿ ಇಲ್ಲ, ಏತಕ್ಕೆಂದರೆ ಸೃಷ್ಟಿರಚನಾಕಾರ್ಯವು ಕರ್ಮ ಸಾಪೇಕ್ಷವಾದುದು (ಅಂದರೆಚೇತನ

[ಚೇತನ] ರ ಕರ್ಮಾನುಗುಣವಾಗಿ ನಡೆಯುವುದು ಎಂದು ಹೇಳಿದ್ದಾರೆ. ಇದನ್ನೇ ಭಗವಾನ್ ಪರಾಶರರು ವಿಷ್ಣು ಪುರಾಣದಲ್ಲಿ ''ಸೃಷ್ಟಿಸಲ್ಪಡುವ ಜೀವಿಗಳ ಸೃಷ್ಟಿಕಾರ್ಯದಲ್ಲಿ ಈಶ್ವರನು ಕೇವಲ ನಿಮಿತ್ತ ಮಾತ್ರದವನಾಗಿದ್ದಾನೆ. ಏತಕ್ಕೆಂದರೆ ಸೃಷ್ಟಿಸಲ್ಪಡುವ ಜೀವಿಗಳ ಪ್ರಾಚೀನಕರ್ಮ ವಾಸನೆಯ ಶಕ್ತಿಗಳು ಪ್ರಧಾನ ಕಾರಣಗಳಾಗಿವೆ'' ಎಂದು ಹೇಳಿದ್ದಾರೆ. ಒಟ್ಟಿನಲ್ಲಿ ಈ ಶ್ಲೋಕದ ಸಾರಾಂಶವೇನೆಂದರೆ—ದೇವ ಮನುಷ್ಯಾದಿ ವಿಚಿತ್ರ ಸೃಷ್ಟಿಕಾರ್ಯದಲ್ಲಿ ಸೃಷ್ಟಿಸಲ್ಪಡುವ ಚೇತನರ ಪ್ರಾಚೀನಕರ್ಮದ ಶಕ್ತಿಯೇ ಪ್ರಧಾನಕಾರಣವಾಗಿರುವುದರಿಂದ, ಚೇತನನು ತನ್ನದಾದ ಪ್ರಾಚೀನ ಕರ್ಮಶಕ್ತಿಯಿಂದಲೇ ದೇವಮನುಷ್ಯಾದಿ ವಸ್ತುಭಾವವನ್ನು ಹೊಂದಲ್ಪಡುತ್ತಾನೆ. ಆದ್ದರಿಂದ ಪರಮಪುರುಷನು ಜೀವರುಗಳ ಸೃಷ್ಟಿಗೆ ಮಾತ್ರ ಕಾರಣನೇ ವಿನಃ ಅವರಲ್ಲಿರುವ ದೇವಮನುಷ್ಯಾದಿ ವಿಚಿತ್ರ ಸೃಷ್ಟಿ ಭೇದಗಳಿಗೆ ಕಾರಣನಲ್ಲ. ಆದ್ದರಿಂದ ಯಾರು ನಾನು (ಭಗವಂತನು) ಸೃಷ್ಟ್ಯಾದಿಕರ್ತನಾಗಿದ್ದರೂ ಕೂಡ, ನನ್ನನ್ನು (ವಿಚಿತ್ರಸೃಷ್ಟಿಗೆ) ಅಕರ್ತನನ್ನಾಗಿಯೂ ಮತ್ತು ಸೃಷ್ಟ್ಯಾದಿಕರ್ಮಗಳ ಫಲದಲ್ಲಿ ಸಂಗರಹಿತನನ್ನಾಗಿಯೂ ಚೆನ್ನಾಗಿ ತಿಳಿಯುತ್ತಾನೆಯೋ ಅವನು ಕರ್ಮಯೋಗ ಆರಂಭಕ್ಕೆ ವಿರೋಧಿಯಾದ, ಫಲಸಂಗಾದಿಗಳಿಗೆ ಕಾರಣವಾದ ಪ್ರಾಚೀನ ಕರ್ಮಗಳಿಂದ ಬಿಡುಗಡೆ ಹೊಂದುತ್ತಾನೆ ಎಂದು ಶ್ರೀಕೃಷ್ಣನು ಹೇಳಿದ್ದಾನೆ.

ಈ ರೀತಿಯಾಗಿ ನನ್ನನ್ನು ತಿಳಿದುಕೊಂಡು (ಅಂದರೆ ಪರಮಾತ್ಮನಾದ ನಾನು ಸೃಷ್ಟಿಗೆ ಕೇವಲ ನಿಮಿತ್ತಮಾತ್ರ ಕಾರಣನೆಂದೂ ಸೃಷ್ಟಿ ವೈಚಿತ್ರ್ಯಕ್ಕೆ ಜೀವಾತ್ಮರೇ ಪ್ರಧಾನಕಾರಣರೆಂದೂ ತಿಳಿದುಕೊಂಡು) ಆದರ ಫಲವಾಗಿ ಕರ್ಮಯೋಗಾಭ್ಯಾಸಕ್ಕೆ ವಿಘ್ನಗಳಾದ ಪಾಪಗಳಿಂದ ವಿಮುಕ್ತರಾದ ಪೂರ್ವೀಕರಾದ ಮೋಕ್ಷಾರ್ಥಿಗಳಿಂದಲೂ ಕೂಡ ಮೇಲೆ ಹೇಳಿದ ಲಕ್ಷಣಗಳಿಂದ ಕೂಡಿದ ಕರ್ಮವು ಮಾಡಲ್ಪಟ್ಟಿತು ಆದ್ದರಿಂದ ನೀನು ಮೇಲೆ ಹೇಳಿದ ಪ್ರಕಾರ (ಅಂದರೆ ಭಗವಂತನ ಕರ್ತೃತ್ವ, ಅಕರ್ತೃತ್ವಜ್ಞಾನದಿಂದಲೂ, ಅವತಾರ ರಹಸ್ಯಜ್ಞಾನದಿಂದಲೂ ಕೂಡಿದವನಾಗಿ) ಪಾಪವಿಮುಕ್ತರಾದ ವಿವಸ್ವಾನ್, ಮನು ಮುಂತಾದವರು ಮಾಡಿದ, ಪುರಾತನವಾದ (ನಾನು ಹಿಂದೆಯೇ ವಿವಸ್ವಾನ್, ಮನು ಮುಂತಾದವರಿಗೆ ಹೇಳಿದ) ಮತ್ತು ಮುಂದೆ ನಿನಗೆ ಹೇಳುವ ಕರ್ಮಯೋಗವನ್ನೇ ಮಾಡು ಎಂದು ಶ್ರೀಕೃಷ್ಣನು 15 ನೇ ಶ್ಲೋಕದಲ್ಲಿ ಹೇಳಿದ್ದಾನೆ.

(3) ಕರ್ಮಯೋಗದ ದುರವಗಾಹತ್ವವು-ಮುಂದೆ ಉಪದೇಶಿಸುವ ಕರ್ಮಯೋಗವನ್ನು ತಿಳಿಯುವುದು ಬಹಳ ಕಷ್ಟ—

(ಶ್ಲೋಕಗಳು 16 ಮತ್ತು 17)

## ಶ್ಲೋಕ–16

''ಕರ್ಮವು ಯಾವುದು ? (ಕರ್ಮದ ಸ್ವರೂಪವೇನು ?) ಅಕರ್ಮವು ಯಾವುದು ? (ಕರ್ಮವಲ್ಲದುದು ಅಂದರೆ ಜ್ಞಾನವು ಯಾವುದು?) ಎಂಬ ವಿಷಯದಲ್ಲಿ ವಿದ್ವಾಂಸರೂ ಕೂಡ ಮೋಹಗೊಂಡವರಾಗಿದ್ದಾರೆ. ಯಾವುದನ್ನು ತಿಳಿದರೆ ಅಶುಭದಿಂದ ಮುಕ್ತನಾಗುವೆಯೋ (ಈ ಹೇಯವಾದ ಪ್ರಕೃತಿ ಸಂಬಂಧದಿಂದ ಬಿಡುಗಡೆ ಹೊಂದುವೆಯೋ) ಆ ಕರ್ಮಯೋಗವನ್ನು ನಿನಗೆ ಹೇಳುತ್ತೇನೆ' —

ಮುಮುಕ್ಷುಗಳು ಅನುಷ್ಠಿಸಬೇಕಾದ ಕರ್ಮದ ಸ್ವರೂಪವೆಂತಹುದು ? ಅಕರ್ಮವು ಯಾವುದು ? ಎಂದರೆ ಈ ಪ್ರಕರಣದಲ್ಲಿ ಫಲಾಭಿಸಂಧಿರಹಿತವಾಗಿ, ಭಗವದಾರಾಧನರೂಪವಾಗಿ ಮಾಡುವುದೇ ಕರ್ಮವೆಂದೂ , ಕರ್ತೃವಿನ ಆತ್ಮನ ಯಥಾರ್ಥವಾದ ಜ್ಞಾನವೇ ಅಕರ್ಮವೆಂದೂ ಹೇಳಲ್ಪಟ್ಟಿದೆ. ಅನುಷ್ಠಿಸಬೇಕಾದ ಕರ್ಮ ಮತ್ತು ಆದರಲ್ಲಿ ಅಂತರ್ಗತವಾದ ಜ್ಞಾನ (ಅಕರ್ಮ) ಈ ಎರಡು ವಿಷಯಗಳ ಸ್ವರೂಪವನ್ನು ತಿಳಿಯುವುದರಲ್ಲಿ ವಿದ್ವಾಂಸರಾದ ಪುರುಷರೂ ಕೂಡ ಮೋಹಗೊಂಡವರಾಗಿದ್ದಾರೆ

ಮತ್ತು ಇವುಗಳನ್ನು ಯಥಾರ್ಥವಾಗಿ ತಿಳಿಯಲಾರರು ಈ ರೀತಿ ಅಂತರ್ಗತವಾಗಿ ಜ್ಞಾನವನ್ನು ಹೊಂದಿರುವ ಯಾವ ಕರ್ಮವುಂಟೋ ಅದನ್ನು ನಿನಗೆ ಹೇಳುತ್ತೇನೆ ಅದನ್ನು ತಿಳಿದು ಅನುಷ್ಠಿಸುವುದರಿಂದ ಅಶುಭವಾದ ಸಂಸಾರ ಬಂಧನದಿಂದ ಬಿಡುಗಡೆ ಹೊಂದುತ್ತೀಯೆ ಕರ್ತವ್ಯ ಕರ್ಮದ ಜ್ಞಾನಕ್ಕೆ ಅದರ ಅನುಷ್ಠಾನವೇ ಫಲವು (ಕರ್ಮ, ಅಕರ್ಮ ಇವುಗಳ ವಿಷಯವನ್ನು ಸರಿಯಾಗಿ ತಿಳಿದು ಅದನ್ನು ಅನುಷ್ಠಿಸುವುದೇ ಕರ್ಮಯೋಗವು ಎಂದು ಅಭಿಪ್ರಾಯ)

**ಶ್ಲೋಕ—17**

ಕರ್ಮಯೋಗವನ್ನು ತಿಳಿಯುವುದು ಏಕೆ ಕಷ್ಟ ಎಂಬುದನ್ನು ಈ ಶ್ಲೋಕವು ತಿಳಿಸುತ್ತದೆ— 'ಕರ್ಮದ ವಿಷಯದಲ್ಲಿ ತಿಳಿಯಬೇಕಾದ ಅಂಶಗಳಿವೆ ವಿಕರ್ಮದ ವಿಷಯದಲ್ಲಿ ತಿಳಿಯಬೇಕಾದ ಅಂಶಗಳಿವೆ ಮತ್ತು ಅಕರ್ಮದ ವಿಷಯದಲ್ಲಿಯೂ ತಿಳಿಯಬೇಕಾದ ಅಂಶಗಳಿವೆ ಆದ್ದರಿಂದ ಕರ್ಮಮಾರ್ಗವು ಗಹನವಾದುದು (ಕರ್ಮಮಾರ್ಗವನ್ನು ತಿಳಿಯುವುದು ಕಷ್ಟ)'.

ಕರ್ಮಯೋಗವನ್ನು ತಿಳಿಯಬೇಕಾದರೆ ಮೊದಲು ಕರ್ಮ, ವಿಕರ್ಮ ಮತ್ತು ಅಕರ್ಮ ಎಂಬ ಮೂರು ಪದಗಳ ಅರ್ಥವನ್ನೂ ಮತ್ತು ಅವುಗಳಲ್ಲಿರುವ ತಿಳಿಯಬೇಕಾದ ಅಂಶಗಳನ್ನೂ ತಿಳಿಯಬೇಕು. ಮೋಕ್ಷಸಾಧನಭೂತವಾದ ಕರ್ಮಾನುಷ್ಠಾನವೇ ಕರ್ಮವು. ನಿತ್ಯ ನೈಮಿತ್ತಿಕ ಕಾಮ್ಯಕರ್ಮಗಳಿಗೆ ಸಾಧನವಾದ ದ್ರವ್ಯಾರ್ಜನೆ ಮೊದಲಾದ ವಿವಿಧತೆಯನ್ನು ಹೊಂದಿರುವ ವಿಧವಿಧವಾದ ಕರ್ಮಗಳೇ ವಿಕರ್ಮವು. ಜ್ಞಾನವೇ ಅಕರ್ಮವು ಕರ್ಮ ವಿಕರ್ಮ ಮತ್ತು ಅಕರ್ಮಗಳಲ್ಲಿ ತಿಳಿಯಬೇಕಾದ ಅಂಶಗಳು ಅನೇಕ ಇರುವುದರಿಂದ ಇವುಗಳಿಂದ ಕೂಡಿರುವ ಕರ್ಮಯೋಗದ ಸ್ವರೂಪವನ್ನು ತಿಳಿಯುವುದು ಬಹಳ ಕಷ್ಟವಾದುದು ಎಂದು ಅಭಿಪ್ರಾಯ.

(4) ಕರ್ಮಯೋಗದ ಜ್ಞಾನಾಕಾರತೆಯ ವಿವರಣೆ—

(ಶ್ಲೋಕಗಳು 18 ರಿಂದ 24)

ಕರ್ಮಯೋಗದಲ್ಲಿ ತಿಳಿಯಬೇಕಾದ ಕರ್ಮ, ಅಕರ್ಮ ಮತ್ತು ವಿಕರ್ಮಗಳ ವಿಷಯಗಳು ಮುಂದೆ ವಿವರಿಸಲ್ಪಡುತ್ತವೆ. ಆದರೆ ವಿಕರ್ಮದ ವಿಷಯವು ಹಿಂದೆ 2ನೇ ಅಧ್ಯಾಯದಲ್ಲಿ "ವ್ಯವಸಾಯಾತ್ಮಿಕಾ ಬುದ್ಧಿಃ" ಎಂಬ 41ನೇ ಶ್ಲೋಕದಲ್ಲಿ ವಿವರವಾಗಿ ತಿಳಿಸಿರುವುದರಿಂದ ಇಲ್ಲಿ ಅದನ್ನು ಮತ್ತೆ ವಿಸ್ತರಿಸಿ ಹೇಳುವುದಿಲ್ಲ. ವಿಕರ್ಮದ ವಿಷಯದಲ್ಲಿ ತಿಳಿಯಬೇಕಾದ ಅಂಶವೇನೆಂದರೆ— ನಿತ್ಯ ನೈಮಿತ್ತಿಕ ಕಾಮ್ಯಕರ್ಮಗಳಲ್ಲಿ ಮತ್ತು ಅವುಗಳಿಗೆ ಸಾಧನವಾದ ದ್ರವ್ಯಾರ್ಜನಾದಿ ಕರ್ಮಗಳಲ್ಲಿ ಫಲಭೇದದಿಂದ ಉಂಟಾಗುವ ವೈವಿಧ್ಯತೆಯನ್ನು ಬಿಟ್ಟು ಬಿಟ್ಟು, ಮೋಕ್ಷ ಒಂದನ್ನೇ ಫಲವನ್ನಾಗಿ ಹೊಂದಿ ಶಾಸ್ತ್ರದ ಏಕಾರ್ಥವನ್ನು ತಿಳಿದುಕೊಂಡು ಅದನ್ನು ಅನುಸಂಧಾನ ಮಾಡಬೇಕು (ಇದರ ವಿಷಯವನ್ನು ವಿವರವಾಗಿ ತಿಳಿಯಬೇಕಾದರೆ 2ನೇ ಅಧ್ಯಾಯದ 41ನೇ ಶ್ಲೋಕದ ಅರ್ಥವನ್ನು ಮತ್ತೆ ಓದಿ ತಿಳಿದುಕೊಳ್ಳಬಹುದು)

**ಶ್ಲೋಕ 18**—ಕರ್ಮ ಮತ್ತು ಅಕರ್ಮದ ವಿಷಯವು ಈ ಶ್ಲೋಕದಲ್ಲಿ ತಿಳಿಸಿದೆ.

"ಯಾವನು ಕರ್ಮದಲ್ಲಿ ಅಕರ್ಮವನ್ನು ನೋಡುವನೋ (ಕರ್ಮಯೋಗವನ್ನು ಆಚರಿಸುವಾಗ ಆತ್ಮಯಥಾತ್ಮ ಜ್ಞಾನವನ್ನು ಅನುಸಂಧಾನ ಮಾಡುವನೋ), ಯಾವನು ಅಕರ್ಮದಲ್ಲಿ ಕರ್ಮವನ್ನು ನೋಡುವನೋ (ಆತ್ಮಯಥಾತ್ಮಜ್ಞಾನ ಅನುಸಂಧಾನ ಮಾಡುವಾಗ ಕರ್ಮಯೋಗವನ್ನು ಅನುಷ್ಠಿಸುವನೋ) ಅವನು ಮನುಷ್ಯರಲ್ಲಿ ಬುದ್ಧಿವಂತನು; ಅವನು ಯೋಗ್ಯನು, ಅವನು ಸಮಸ್ತ ಕರ್ಮಗಳನ್ನೂ ಮಾಡುವವನು"—

ಇಲ್ಲಿ 'ಅಕರ್ಮ' ಎಂಬ ಪದದಿಂದ ಕರ್ಮಕ್ಕಿಂತ ಬೇರೆಯಾದ ಮತ್ತು ಈ ಪ್ರಕರಣದಲ್ಲಿ ವಿಚಾರ ಮಾಡುತ್ತಿರುವ ಆತ್ಮಜ್ಞಾನವು ಹೇಳಲ್ಪಡುತ್ತದೆ ಕರ್ಮವನ್ನು ಮಾಡುತ್ತಿರುವಾಗಲೇ ಆತ್ಮಜ್ಞಾನವನ್ನು ಯಾವನು ನೋಡುವನೋ (ಅನುಸಂಧಾನಮಾಡುವನೋ) ಮತ್ತು ಅಕರ್ಮದಲ್ಲಿ ಅಂದರೆ ಆತ್ಮಜ್ಞಾನದಲ್ಲಿ ಯಾವನು ಕರ್ಮವನ್ನು ನೋಡುವನೋ (ಅನುಷ್ಠಿಸುವನೋ) ಎಂದು ಹೇಳಿರುವುದರ ಅಭಿಪ್ರಾಯವೇನು ಎಂದರೆ— ಕರ್ಮಯೋಗವನ್ನು ಅನುಷ್ಠಿಸುವಾಗ ಆತ್ಮಯಥಾರ್ಥ ಸ್ವರೂಪವನ್ನು ಅನುಸಂಧಾನ ಮಾಡುತ್ತಿರಬೇಕು. ಆಗ ಕರ್ಮಕಾಲದಲ್ಲಿ ಆತ್ಮನ ಯಥಾರ್ಥಸ್ವರೂಪದ ಅನುಸಂಧಾನವು ನಡೆಯುತ್ತಿರುವುದರಿಂದ ಕರ್ಮವು ಜ್ಞಾನದ ಆಕಾರವನ್ನು ಹೊಂದುವುದು ಮತ್ತು ಆ ಜ್ಞಾನವು ಕರ್ಮದ ಒಳಗೆ ಅಡಗಿರುವುದರಿಂದ (ಕರ್ಮದಲ್ಲಿ ಅಂತರ್ಗತವಾಗಿರುವುದರಿಂದ) ಆ ಜ್ಞಾನವೂ ಕರ್ಮದ ಆಕಾರವನ್ನು ಹೊಂದುವುದು. ಅಂದರೇನು ಕರ್ಮಕ್ಕೆ ಜ್ಞಾನವೂ, ಜ್ಞಾನಕ್ಕೆ ಕರ್ಮವೂ ಸೇರಿದುದಾಗಿ ಎರಡೂ ಒಂದರೊಂದಿಗೆ ಒಂದು ಮಿಳಿತವಾಗುತ್ತದೆ. ಹೀಗೆ ಆತ್ಮ ಯಥಾರ್ಥಸ್ವರೂಪ ಜ್ಞಾನದ ಅನುಸಂಧಾನವನ್ನೊಳಗೊಂಡಿರುವುದಾಗಿ ಕರ್ಮವನ್ನು ಯಾವನು

ತಿಳಿಯುತ್ತಾನೆಯೋ ಅವನು ಬುದ್ಧಿವಂತನು. ಅಂದರೆ ಸಮಸ್ತ ಶಾಸ್ತ್ರಗಳ ಅಭಿಪ್ರಾಯವನ್ನು ತಿಳಿದವನೂ, ಮನುಷ್ಯರಲ್ಲಿ ಅವನು ಮೋಕ್ಷಕ್ಕೆ ಅರ್ಹನೂ, ಮತ್ತು ಅವನೇ ಸಮಸ್ತ ಕರ್ಮಗಳನ್ನು ಸಮಸ್ತಶಾಸ್ತ್ರಗಳ ಅಭಿಪ್ರಾಯಕ್ಕೆ ಅನುಸಾರವಾಗಿ ಅನುಷ್ಠಿಸುವವನೂ ಆಗುತ್ತಾನೆ

**ಶ್ಲೋಕ 19**—ಪ್ರತ್ಯಕ್ಷವಾಗಿ ಮಾಡಲ್ಪಡುತ್ತಿರುವ ಕರ್ಮಕ್ಕೆ ಜ್ಞಾನಾಕಾರತೆಯು ಹೇಗೆಸಂಭವಿಸುತ್ತದೆ ಎಂಬಶಂಕೆಗೆ ಈ ಶ್ಲೋಕದಲ್ಲಿ ಉತ್ತರಹೇಳಿದೆ- ''ಯಾರ ಪ್ರಾರಂಭಿಸಿದ ಸಮಸ್ತ ಕರ್ಮಗಳೂ ಕಾಮದಿಂದಲೂ (ಇಚ್ಛೆ ಅಥವ ಫಲಾಸಕ್ತಿಯಿಂದಲೂ) ಮತ್ತು ಸಂಕಲ್ಪದಿಂದಲೂ ಬಿಡಲ್ಪಟ್ಟದೆಯೋ, ಜ್ಞಾನವೆಂಬ ಅಗ್ನಿಯಿಂದ ದಹಿಸಲ್ಪಟ್ಟ ಕರ್ಮವುಳ್ಳಅವನನ್ನು ಬುದ್ಧಿವಂತರು ಪಂಡಿತನೆಂದು ಹೇಳುವರು''–

ಮೋಕ್ಷಾರ್ಥಿಯಾದ ಮನುಷ್ಯನು ಮಾಡುವ ಸಮಸ್ತ ದ್ರವ್ಯಾರ್ಜನೆ ಮೊದಲಾದ ಲೌಕಿಕ ಕರ್ಮಸಹಿತವಾದ ನಿತ್ಯನೈಮಿತ್ತಿಕ ಮತ್ತು ಕಾಮ್ಯರೂಪವಾದ ಸಕಲಕರ್ಮೋದ್ಯೋಗಗಳೂ ಕಾಮದಿಂದ ಅಂದರೆ ಫಲಾಸಕ್ತಿಯಿಂದ ಬಿಡಲ್ಪಟ್ಟವುಗಳಾಗಿರಬೇಕು ಮತ್ತು ಸಂಕಲ್ಪ ವರ್ಜಿತಗಳಾಗಿರಬೇಕು ಸಂಕಲ್ಪವೆಂದರೆ ಪ್ರಕೃತಿ (ಶರೀರ) ಮತ್ತು ಪ್ರಕೃತಿಯ ಗುಣಗಳೊಂದಿಗೆ (ಸತ್ತ್ವರಜಸ್ತಮೋಗುಣಗಳೊಂದಿಗೆ) ತನ್ನನ್ನು ಏಕೀಭವಿಸಿದಂತೆ ತಿಳಿದು (ಅಂದರೆ ಪ್ರಕೃತಿಯ ಗುಣಗಳು ಮಾಡುವ ಕರ್ಮಗಳನ್ನು ತಾನು ಸಂಕಲ್ಪಿಸಿ ಮಾಡುವೆನೆಂದು ಭ್ರಮಿಸಿ) ಅನುಸಂಧಾನ ಮಾಡುವುದೇ ಸಂಕಲ್ಪವು. ಆದರೆ ಮೋಕ್ಷಾರ್ಥಿಯು ಪ್ರಕೃತಿಗಿಂತ ವಿಲಕ್ಷಣವಾದ ಆತ್ಮಸ್ವರೂಪದ ಅನುಸಂಧಾನದೊಂದಿಗ ಕರ್ಮ ಮಾಡುವುದರಿಂದ ಅವನು ಆ ಸಂಕಲ್ಪದಿಂದ (ಪ್ರಕೃತಿಯೊಂದಿಗೆ ಏಕೀಭವಿಸುವ ಭ್ರಮಾಜ್ಞಾನದಿಂದ ರಹಿತನಾಗಿರುತ್ತಾನೆ ಈ ಪ್ರಕಾರವಾಗಿ ಕರ್ಮ ಮಾಡುವ ಅವನು ತಾನು ಮಾಡುವ ಕರ್ಮದೊಳಗೆ ಅಡಗಿರುವ ಆತ್ಮ ಯಥಾರ್ಥಸ್ವರೂಪಜ್ಞಾನವೆಂಬ ಅಗ್ನಿಯುಮೂಲಕ ಭಸ್ಮಮಾಡಲ್ಪಟ್ಟ ಪ್ರಾಚೀನಕರ್ಮಗಳನ್ನು ಪಡೆದವನಾಗುತ್ತಾನೆ. (ಅಂದರೆ ಅವನು ಆತ್ಮ ಸ್ವರೂಪಜ್ಞಾನ ಅನುಸಂಧಾನದೊಂದಿಗೆ ಕರ್ಮಮಾಡುವುದರಿಂದ ಆ ಜ್ಞಾನಾಗ್ನಿಯು ಅವನ ಪ್ರಾಚೀನ ಕರ್ಮಗಳನ್ನು ಭಸ್ಮಮಾಡಿ ನಾಶಮಾಡುತ್ತದೆ). ಅವನನ್ನು ತತ್ತ್ವಜ್ಞರು ಪಂಡಿತನೆಂದು ಕರೆಯುತ್ತಾರೆ. ಆದ್ದರಿಂದ ಕರ್ಮದ ಜ್ಞಾನಾಕಾರತ್ವವು ಸಿದ್ಧವಾಗುತ್ತದೆ.

**ಶ್ಲೋಕ 20**—ಮೇಲಿನ ಶ್ಲೋಕದ ಅಭಿಪ್ರಾಯ ಮತ್ತೆ ಇಲ್ಲಿ ವಿವರಿಸಲ್ಪಟ್ಟಿದೆ –''ಕರ್ಮ ಫಲದಲ್ಲಿ ಆಸಕ್ತಿಯನ್ನು ಬಿಟ್ಟು, ನಿತ್ಯನಾದ ಆತ್ಮನಲ್ಲಿ ತೃಪ್ತನಾಗಿ, ಆಶ್ರಯರಹಿತನಾಗಿ (ಪ್ರಕೃತಿಯಲ್ಲಿ ಆಶ್ರಯ ಬುದ್ಧಿರಹಿತನಾಗಿ), ಕರ್ಮದಲ್ಲಿ ಪ್ರವೃತ್ತಿ ಉಳ್ಳವನಾಗಿದ್ದರೂ ಕೂಡ ಆ ಮನುಷ್ಯನು ಏನನ್ನೂ ಮಾಡುವನಾಗುವುದಿಲ್ಲ'' (ಯಾವ ಕರ್ಮದಲ್ಲಿಯೂ ಕರ್ತೃತ್ವ ಉಳ್ಳವನಾಗುವುದಿಲ್ಲ)''.

ಕರ್ಮಫಲದಲ್ಲಿ ಸಂಗವನ್ನು ಬಿಟ್ಟು, ನಿತ್ಯನಾದ ಆತ್ಮನಲ್ಲಿಯೇ ತೃಪ್ತಿಯುಳ್ಳವನಾಗಿ, ಅಸ್ಥಿರವಾದ ಪ್ರಕೃತಿಯಲ್ಲಿ (ದೇಹದಲ್ಲಿ) ಆಶ್ರಯಬುದ್ಧಿ ಇಲ್ಲದವನಾಗಿ, ಯಾವನು ಕರ್ಮಗಳನ್ನು ಮಾಡುತ್ತಾನೆಯೋ ಅವನು ಕರ್ಮಗಳಲ್ಲಿ ಅಭಿಮುಖವಾದ ಪ್ರವೃತ್ತಿಉಳ್ಳವನಾಗಿದ್ದರೂಕೂಡ (ಕರ್ಮಗಳನ್ನು ಮಾಡುತ್ತಿದ್ದರೂಕೂಡ) ಸ್ವಲ್ಪವೂ ಕರ್ಮ ಮಾಡಿದವನಾಗುವುದಿಲ್ಲ (ಅಂದರೆ ಏನೊಂದೂ ಕರ್ಮವನ್ನು ಮಾಡಿದವನಾಗುವುದಿಲ್ಲ) ಅವನು ಕರ್ಮದ ಹೆಸರಿನಲ್ಲಿ ಜ್ಞಾನದ ಅಭ್ಯಾಸವನ್ನೇ ಮಾಡುತ್ತಾನೆ ಎಂದು ಅರ್ಥ.

**ಶ್ಲೋಕ 21**—ಮುಂದಿನ ನಾಲ್ಕು ಶ್ಲೋಕಗಳಿಂದ ಮತ್ತೆ ಕರ್ಮದ ಜ್ಞಾನಾಕಾರತೆಯು ವಿವರಿಸಲ್ಪಟ್ಟಿದೆ—''ಆಸೆಯಿಲ್ಲದವನನಾಗಿ (ಕರ್ಮದ ಫಲದಲ್ಲಿ ಆಸೆಯಿಲ್ಲದವನಾಗಿ), ಜಯಿಸಲ್ಪಟ್ಟ ಬುದ್ಧಿ ಮತ್ತು ಮನಸ್ಸು ಉಳ್ಳವನಾಗಿ ಸಮಸ್ತ ಪರಿಗ್ರಹಗಳನ್ನೂ (ಐಹಿಕ ವಿಷಯೋಪಭೋಗವನ್ನೂ) ತ್ಯಜಿಸಿದವನಾಗಿ, ಕೇವಲ ಶಾರೀರಿಕವಾದ ಕರ್ಮಗಳನ್ನು ಮಾಡುತ್ತಿದ್ದರೂ ಅವನು ಪಾಪವನ್ನು ಗಳಿಸುವುದಿಲ್ಲ''

ಫಲಾಭಿಸಂಧಿ ರಹಿತನಾಗಿ, ಬುದ್ಧಿ ಮತ್ತು ಮನಸ್ಸುಗಳನ್ನು ಜಯಿಸಿದವನಾಗಿ, ಆತ್ಮಒಂದನ್ನೇ ಪ್ರಯೋಜನವಾಗಿ ಹೊಂದಿರುವವನಾಗಿರುವುದರಿಂದ ಪ್ರಕೃತಿ ಮತ್ತು ಪ್ರಾಕೃತಿಕ ವಸ್ತುಗಳಲ್ಲಿ ಮಮತೆಯಿಲ್ಲದವನಾಗಿ, ತನ್ನ ಜೀವಮಾನವನ್ನೆಲ್ಲಾ ಶರೀರದ ಮೂಲಕ ಕರ್ಮ ಮಾಡುತ್ತಾ ಕಳೆದರೂ, ಆ ಪುರುಷನು ಪಾಪವನ್ನು ಅಂದರೆ ಸಂಸಾರ ಬಂಧನವನ್ನು ಹೊಂದುವುದಿಲ್ಲ ಅಂದರೆ ಜ್ಞಾನಯೋಗ ನಿಷ್ಠೆಯಲ್ಲಿ ತೊಡಗದೆ ಕೇವಲ ಈ ಪ್ರಕಾರವಾದ ಕರ್ಮಯೋಗ ಅನುಷ್ಠಾನದಿಂದಲೇ ಅವನು ಆತ್ಮದರ್ಶನವನ್ನು ಹೊಂದಬಲ್ಲನು ಎಂದು ಅಭಿಪ್ರಾಯ.

**ಶ್ಲೋಕ 22**—"ತಾನಾಗಿ ಲಭಿಸಿದ ಲಾಭದಲ್ಲಿ ಸಂತುಷ್ಟನಾಗಿ ದ್ವಂದ್ವಗಳನ್ನು ಅತಿಕ್ರಮಿಸಿದನಾಗಿ, ಮಾತ್ಸರ್ಯ ರಹಿತನಾಗಿ, ಸಿದ್ಧಿ ಅಸಿದ್ಧಿಗಳಲ್ಲಿ (ಜಯಾಪಜಯಗಳಲ್ಲಿ) ಸಮಭಾವ ಹೊಂದಿದವನಾಗಿರುವವನು ಕರ್ಮಗಳನ್ನು ಮಾಡಿದರೂ ಬಂಧನವನ್ನು ಹೊಂದುವುದಿಲ್ಲ."—

ಯಾವ ಪ್ರಯತ್ನವೂ ಇಲ್ಲದೆ ತಾನಾಗಿ ಲಭಿಸಿದ ಕೇವಲ ಶರೀರಧಾರಣೆಗೆ ಬೇಕಾದ ವಸ್ತುಗಳಲ್ಲಿ ಸಂತೋಷ ಪಡುವವನು (ಅಂದರೆ ಶರೀರಧಾರಣೆಗೆ ತನಗೆ ಎಷ್ಟು ದೊರಕುವುದೋ ಅಷ್ಟರಲ್ಲಿ ತೃಪ್ತಿಉಳ್ಳವನೂ), ಸಾಧನೆಯು ಪೂರ್ತಿಯಾಗುವ ವರಗೆ ಶೀತೋಷ್ಣ ಸುಖದುಃಖಾದಿ ದ್ವಂದ್ವಗಳನ್ನು ಸಹಿಸುವವನೂ, ಅನಿಷ್ಟ ಪ್ರಾಪ್ತಿಗೆ ತನ್ನ ಕರ್ಮಗಳೇ ಕಾರಣಗಳೆಂದು ಭಾವಿಸಿ ಇತರರ ಮೇಲೆ ಮಾತ್ಸರ್ಯವನ್ನು ತೋರದವನೂ, ಯುದ್ಧಾದಿ ಕರ್ಮಗಳಲ್ಲಿ ಉಂಟಾಗುವ ಜಯಾಪಜಯ ರೂಪಗಳಾದ ಸಿದ್ಧಿ ಅಸಿದ್ಧಿಗಳಲ್ಲಿ ಸಮಚಿತ್ತ ಹೊಂದಿದವನೂ ಆದ ಪುರುಷನು ಕರ್ಮವನ್ನೇ ಮಾಡುತ್ತಿದ್ದಾಗ್ಯೂ, ಜ್ಞಾನನಿಷ್ಠೆ ಇಲ್ಲದೆಯೇ (ಅಂದರೆ ಅವನು ಜ್ಞಾನನಿಷ್ಠೆಯನ್ನು ಅನುಷ್ಠಿಸದೇ ಇದ್ದಾಗ್ಯೂ ಕೂಡ ಬಂಧನವನ್ನು ಹೊಂದುವುದಿಲ್ಲ ಅಂದರೆ ಸಂಸಾರವನ್ನು ಹೊಂದುವುದಿಲ್ಲ.

**ಶ್ಲೋಕ—23** "ಆಸಕ್ತಿರಹಿತನೂ, ಮುಕ್ತನೂ, ಜ್ಞಾನದಲ್ಲಿ ನಿಲ್ಲಿಸಲ್ಪಟ್ಟ ಮನಸ್ಸುಳ್ಳವನೂ ಮತ್ತು ಯಜ್ಞಕ್ಕಾಗಿ ಕರ್ಮಮಾಡುವವನೂ ಆದ ಪುರುಷನ ಸಮಸ್ತವಾದ ಕರ್ಮಗಳೂ (ಪಾಪಗಳೂ) ಸಂಪೂರ್ಣವಾಗಿ ನಾಶವಾಗುತ್ತವೆ."

ಆತ್ಮ ಯಥಾರ್ಥ ಸ್ವರೂಪಜ್ಞಾನದಲ್ಲಿ ಲೀನವಾದ ಮನಸ್ಸುಳ್ಳವನಾಗಿರುವುದರಿಂದ ಅದಕ್ಕೆ ವ್ಯತಿರಿಕ್ತವಾದ ಇತರ ಸಮಸ್ತವಿಷಯಗಳಲ್ಲಿ ಆಸಕ್ತಿರಹಿತನಾಗಿ, ಆ ಕಾರಣದಿಂದಲೇ ಐಹಿಕ ವಿಷಯಗಳ ಪರಿಗ್ರಹದಿಂದ ಬಿಡಲ್ಪಟ್ಟವನಾಗಿ (ಪ್ರಾಕೃತಿಕ ವಿಷಯೋಪಭೋಗಗಳ ಸಂಗದಿಂದ ಬಿಡಲ್ಪಟ್ಟವನಾಗಿ) ಮೇಲೆ ಹೇಳಿದ ಲಕ್ಷಣಗಳಿಂದ ಕೂಡಿ ಯಜ್ಞಕ್ಕೋಸ್ಕರ ಕರ್ಮಾಚರಣೆಯಲ್ಲಿ ಮಗ್ನನಾಗಿರುವ ಪುರುಷನ ಬಂಧನರೂಪವಾದ ಸಮಸ್ತ ಪ್ರಾಚೀನಕರ್ಮಗಳೂ ಸಂಪೂರ್ಣವಾಗಿ (ನಿಶ್ಶೇಷವಾಗಿ) ನಷ್ಟವಾಗುತ್ತವೆ (ಇಲ್ಲಿ "ಯಜ್ಞಾಯಾಚರತಃ ಕರ್ಮ" ಎಂದು ಹೇಳಿರುವುದರ ಅರ್ಥವನ್ನು ಚೆನ್ನಾಗಿ ಗಮನಿಸಿ ತಿಳಿಯಬೇಕು ಯಜ್ಞವೆಂದರೆ ಏನು ಎಂಬುದನ್ನು ಹಿಂದೆಯೇ ತಿಳಿಸಿದೆ. ಭಗವದಾರಾಧನೆ ಎಂಬ ಭಾವನೆಯಿಂದ ಭಗವದರ್ಪಣವಾಗಿ ನಿಸ್ವಾರ್ಥವಾಗಿ ಕರ್ತವ್ಯ ಕರ್ಮಗಳನ್ನು ಮಾಡುವುದೇ ಯಜ್ಞವು ಎಂದು ಯಜ್ಞ ಶಬ್ದಕ್ಕೆ ಬಹಳ ವಿಸ್ತಾರವಾದ ಅರ್ಥವನ್ನು ತಿಳಿಸಿದೆ. ಹೀಗೆ ಮಾಡಿದರೆ ಸಮಸ್ತ ಕರ್ಮಗಳೂ ಭಗವಂತನ ಪೂಜೆಯಾಗಿ ಪರಿಣಮಿಸುತ್ತವೆ ಎಂಬ ಅಭಿಪ್ರಾಯವು ಮುಂದಿನ ಶ್ಲೋಕದಲ್ಲಿ ವಿವರವಾಗಿ ತಿಳಿಸಲ್ಪಟ್ಟಿದ)

**ಶ್ಲೋಕ—24** ಪ್ರಕೃತಿ ವಿಯುಕ್ತನಾದ ಆತ್ಮನ ಸ್ವರೂಪ ಜ್ಞಾನ ಅನುಸಂಧಾನದೊಂದಿಗೆ ಕರ್ಮಮಾಡುವುದರಿಂದ ಕರ್ಮಕ್ಕೆ ಜ್ಞಾನಾಕಾರತೆ ಉಂಟಾಗುತ್ತದೆ ಎಂದು ಇಲ್ಲಿಯವರೆಗೆ ಹೇಳಿ ಈ ಮುಂದಿನ ಶ್ಲೋಕದಲ್ಲಿ ಸಮಸ್ತ ಪರಿಕರಗಳೊಂದಿಗೆ ಕೂಡಿದ ಸಮಸ್ತಕರ್ಮಗಳನ್ನೂ ಅವು ಪರಮಪುರುಷಾತ್ಮಕತ್ವವಾದ ಸ್ವರೂಪವನ್ನು ಹೊಂದಿರುವಿಕೆಯನ್ನು ಅನುಸಂಧಾನ ಮಾಡುತ್ತಾ ಕರ್ಮ ಮಾಡುವುದರಿಂದಲೂ ಕರ್ಮಕ್ಕೆ ಜ್ಞಾನಾಕಾರತೆ ಉಂಟಾಗುತ್ತದ ಎಂದು ಶ್ರೀ ಕೃಷ್ಣ ತಿಳಿಸಿದ್ದಾನೆ

"ಬ್ರಹ್ಮವೆಂಬ ಅರ್ಪಣದಿಂದ, ಬ್ರಹ್ಮವೆಂಬ ಹವಿಸ್ಸು, ಬ್ರಹ್ಮವೆಂಬ ಅಗ್ನಿಯಲ್ಲಿ ಬ್ರಹ್ಮವೆಂಬ ಕರ್ತನ ಮೂಲಕ ಹೋಮ ಮಾಡಲ್ಪಡುತ್ತದೆ ಈ ರೀತಿಯಾಗಿ ಸಮಸ್ತ ಕರ್ಮವೂ ಬ್ರಹ್ಮಾತ್ಮಕವಾಗಿರುವುದರಿಂದ ಬ್ರಹ್ಮಮಯವಾದುದೆಂದು ಧ್ಯಾನ ಮಾಡುವವನಿಂದ ಬ್ರಹ್ಮನೇ ಹೊಂದಲ್ಪಡುವವನಾಗಿದ್ದಾನೆ"

ಯಾವುದರ ಮೂಲಕ (ಯಾವ ಸಾಮಗ್ರಿಯ ಮೂಲಕ) ಹವಿಸ್ಸು ಅರ್ಪಿಸಲ್ಪಡುತ್ತದೆಯೋ ಆ ಅರ್ಪಿಸುವ ಉಪಕರಣವು ಅರ್ಪಣವೆಂದು ಹೇಳಿದೆ ಅದು ಬ್ರಹ್ಮಕಾರ್ಯವಾಗಿರುವುದರಿಂದ ಅದು ಬ್ರಹ್ಮವು. ಆ ಬ್ರಹ್ಮವು (ಬ್ರಹ್ಮರೂಪವಾದ ಉಪಕರಣವು ಆ ಹವಿಸ್ಸೂ ತಾನೂ ಸ್ವತಃ ಬ್ರಹ್ಮರೂಪವಾದುದು ಅದು ಬ್ರಹ್ಮರೂಪವಾದ ಅಗ್ನಿಯಲ್ಲಿ ಬ್ರಹ್ಮರೂಪನಾದ ಕರ್ತನ ಮೂಲಕ ಹೋಮ ಮಾಡಲ್ಪಡುತ್ತದ ಹೀಗೆ ಸಮಸ್ತ ಕರ್ಮವೂ ಬ್ರಹ್ಮಾತ್ಮಕವಾಗಿರುವುದರಿಂದ ಬ್ರಹ್ಮಮಯವಾದುದು ಎಂದು ಯಾರು ನಿಶ್ಚಯಿಸಿಕೊಂಡು ಅನುಸಂಧಾನ ಮಾಡುತ್ತಾನೆಯೋ 'ಅವನು ಬ್ರಹ್ಮಕರ್ಮ ಸಮಾಧಿ' ಹೊಂದಿರುವ ಪುರುಷನು ಆ ಬ್ರಹ್ಮಕರ್ಮ ಸಮಾಧಿ ಪುರುಷನು (ಅಂದರೆ ಕರ್ಮವು ಬ್ರಹ್ಮಾತ್ಮಕವಾದುದು, ಬ್ರಹ್ಮಮಯವಾದುದು ಎಂದು ಧ್ಯಾನ ಮಾಡುವ ಪುರುಷನು) ಹೊಂದುವ ವಸ್ತುವೂ ಬ್ರಹ್ಮನೇ ಆಗಿದ್ದಾನೆ.

ಅವನು ಸಾಕ್ಷಾತ್ಕರಿಸುವ ಆತ್ಮಸ್ವರೂಪವೂ ಬ್ರಹ್ಮಾತ್ಮಕ ವಾಗಿರುವುದರಿಂದ (ಅಂದರೆ ಬ್ರಹ್ಮನನ್ನು ಆತ್ಮನನ್ನಾಗಿ ಹೊಂದಿರು ವುದರಿಂದ) ಬ್ರಹ್ಮರೂಪವಾದುದು ಮುಮುಕ್ಷುಗಳು ಕರ್ಮ ಮಾಡುವಾಗ ಕರ್ಮಬ್ರಹ್ಮಾತ್ಮಕವಾದುದು ಎಂಬ ಜ್ಞಾನಾನು ಸಂಧಾನ ದೊಂದಿಗೆ ಕರ್ಮಮಾಡುವುದರಿಂದ ಅವರ ಕರ್ಮಗಳು ಜ್ಞಾನಾಕಾರವಾದವುಗಳಾಗಿವೆ ಈ ರೀತಿಯಾದ ಕರ್ಮಗಳು ಜ್ಞಾನನಿಷ್ಠೆಯ ಅಪೇಕ್ಷೆ ಇಲ್ಲದೆಯೇ ತಾವೇ ಸಾಕ್ಷಾತ್ತಾಗಿ ಆತ್ಮ ಸಾಕ್ಷಾತ್ಕಾರಕ್ಕೆ ಸಾಧನಗಳಾಗಿವೆ,

[ಇಲ್ಲಿಯವರೆಗೆ ಕರ್ಮದಜ್ಞಾನಾಕಾರತೆಯು ಪ್ರತಿ ಪಾದಿಸಲ್ಪ ಟ್ಟಿದೆ ಒಟ್ಟಿನಲ್ಲಿ ಇದರ ಸಾರಾಂಶವೇನೆಂದರೆ—ಕರ್ಮಯೋಗವು ಎರಡು ವಿಧವಾದ ಜ್ಞಾನಾನುಸಂಧಾನದೊಂದಿಗೆ ಅನುಷ್ಠಿಸಲ್ಪಡು ವುದರಿಂದ ಅದಕ್ಕೆ ಎರಡು ವಿಧವಾದ ಜ್ಞಾನಾಕಾರತೆ ಉಂಟಾ ಗುತ್ತದೆ

(1) ಆತ್ಮಯಥಾರ್ಥಸ್ವರೂಪವಾದ ಜ್ಞಾನಾನುಸಂಧಾನ ದಿಂದ ಉಂಟಾಗುವ ಜ್ಞಾನಾಕಾರತೆ–ಮುಮುಕ್ಷುವು ಆತ್ಮಯಥಾರ್ಥ ಸ್ವರೂಪಜ್ಞಾನ ಹೊಂದಿ ಅವರ ಅನುಸಂಧಾನದೊಂದಿಗೆ ಕರ್ಮ ಮಾಡುವುದರಿಂದ ಪ್ರಕೃತಿ ಮತ್ತು ಪ್ರಕೃತಿಯ ಗುಣಗಳಿಂದ (ಸತ್ತ್ವರಜಸ್ತಮೋಗುಣಗಳಿಂದ) ಮಾಡಲ್ಪಡುವ ಕರ್ಮಗಳಿಗೆ ಪ್ರಕೃತಿ ವಿಮುಕ್ತನಾದ ಆತ್ಮನಾದ ನಾನು ಕರ್ತೃವಲ್ಲ ಎಂಬ ಜ್ಞಾನಾನುಸಂಧಾನದ ಮೂಲಕ ಕರ್ಮಕ್ಕೆ ಜ್ಞಾನಾಕಾರ ಉಂಟಾಗುತ್ತದೆ

(11) ಸಮಸ್ತವೂ ಬ್ರಹ್ಮಾತ್ಮಕವಾದುದೆಂಬ ಜ್ಞಾನಾನು ಸಂಧಾನ ಉಂಟಾಗುವ ಜ್ಞಾನಾಕಾರತೆ ಪರಬ್ರಹ್ಮನು ಸಮಸ್ತ ವಸ್ತುಗಳಿಗೂ ಅಂತರಾತ್ಮನಾಗಿರುವುದರಿಂದ ಸಮಸ್ತ ಪದಾರ್ಥ ಗಳೂ, ಸಮಸ್ತ ಕಾರ್ಯಗಳೂ, ಮತ್ತು ಕರ್ತೃವಾದ ಜೀವಾತ್ಮನೂ ಮುಂತಾಗಿ ಸಮಸ್ತವೂ ಬ್ರಹ್ಮಾತ್ಮಕವಾಗಿರುವುದರಿಂದ ಕರ್ಮ ಯೋಗಿಯು ತಾನು ಮಾಡುವ ಕರ್ಮಗಳೆಲ್ಲವೂ ಬ್ರಹ್ಮಾತ್ಮಕವಾಗಿ ಬ್ರಹ್ಮಮಯವಾದವುಗಳಾಗಿವೆ ಎಂಬ ಜ್ಞಾನಾನುಸಂಧಾನದೊಂದಿಗೆ ಕರ್ಮಮಾಡುವುದರಿಂದ ಕರ್ಮಕ್ಕೆ ಜ್ಞಾನಾಕಾರತೆ ಉಂಟಾಗುತ್ತದೆ

ಇಲ್ಲಿ ಅಂದರೆ 23 ಮತ್ತು 24ನೇ ಶ್ಲೋಕಗಳಲ್ಲಿ ಬಹಳ ಮುಖ್ಯವಾದ ಕರ್ಮಯೋಗದ ಅಭ್ಯಾಸಗಳನ್ನು ಶ್ರೀ ಕೃಷ್ಣನು ತಿಳಿಸಿದ್ದಾನೆ 23ನೇ ಶ್ಲೋಕದಲ್ಲಿ ಸಂಗರಹಿತನಾಗಿ, ಮುಕ್ತ ನಾಗಿ ಯಜ್ಞಕ್ಕೋಸ್ಕರ ಕರ್ಮಮಾಡುವವನ ಪಾಪಗಳು ನಾಶ ವಾಗುತ್ತವೆ ಎಂದುಹೇಳಿದ್ದಾನೆ ಯಜ್ಞವೆಂದರೆ ಸ್ವಾರ್ಥರಹಿತನಾಗಿ ಪರಮಾತ್ಮನಿಗೆ ಅರ್ಪಿತವಾಗಲೆಂದು ಭಗವದಾರಾಧನ ರೂಪವಾಗಿ ತನ್ನ ಪಾಲಿಗೆಬಂದ ಕರ್ತವ್ಯ ಕರ್ಮಗಳನ್ನು ಮಾಡುವಿಕೆ ಎಂದು ಹಿಂದೆಯೇ ಹೇಳಿದೆ ಹೀಗೆ ಮನಸ್ಸಿನಲ್ಲಿ ಭಗವಂತನನ್ನು ಸ್ಮರಿಸುತ್ತಾ ಕರ್ಮ ಮಾಡಿದರೆ ಮಾಡುವ ಕರ್ಮವೆಲ್ಲಾ ಪವಿತ್ರವಾಗಿ ಭಗವಂತನಿಗೆ ಪೂಜೆಯಾಗುವುದರಿಂದ ಕರ್ಮಮಾಡುವವನ ಪಾಪ ಗಳು ನಾಶವಾಗುತ್ತವೆ ಇನ್ನು 24ನೇ ಶ್ಲೋಕದಲ್ಲಿ ಸಮಸ್ತ ಯಜ್ಞದಲ್ಲೂ ಕರ್ತೃವಾದ ತಾನು, ಅಗ್ನಿಯೂ, ಇತರಯಜ್ಞ ಸಾಧನಗಳೂ ಎಲ್ಲವೂ ಬ್ರಹ್ಮಾತ್ಮಕವೆಂದು ಭಾವಿಸಿ ಯಜ್ಞಕರ್ಮ ಗಳನ್ನು ಮಾಡಬೇಕು ಎಂದು ಹೇಳಿದ್ದಾನೆ. ಅಂದರೆ ಸಮಸ್ತ ವಸ್ತುಗಳಲ್ಲೂ ಪರಮಾತ್ಮನು ಅಂತರ್ಯಾಮಿಯಾಗಿರುವುದರಿಂದ ಯಜ್ಞಮಾಡುವ ಸಲಕರಣೆಯೂ ಬ್ರಹ್ಮ, ಹವಿಸ್ಸೂ ಬ್ರಹ್ಮ, ಅಗ್ನಿಯೂ ಬ್ರಹ್ಮ, ಯಜ್ಞಮಾಡುವ ಪುರುಷನೂ ಬ್ರಹ್ಮ, ಅವನು ಮಾಡುವ ಕರ್ಮವೂ ಬ್ರಹ್ಮ ಮತ್ತು ಕೊನೆಗೆ ಲಭಿಸುವ ಫಲವೂ ಬ್ರಹ್ಮ ಎಂದು ತಿಳಿಸಿದೆ ಅಂದರೇನೆ ಭಗವದಾರಾಧನ ರೂಪವಾಗಿ ಕರ್ಮಮಾಡುವುದು ಯಜ್ಞ ಎಂದು ಹೇಳುವುದು ಮಾತ್ರವಲ್ಲದಿ ಕರ್ಮಮಾಡುವ ಪುರುಷ, ಕರ್ಮಮಾಡಲು ಬೇಕಾದ ಸಲಕರಣೆಗಳೂ, ಮಾಡುವ ಕರ್ಮ ಮತ್ತು ಅದರ ಫಲ ಮುಂತಾಗಿ ಸಕಲವೂ ಬ್ರಹ್ಮಾ ತ್ಮಕವಾಗಿರುವುದರಿಂದ ಸಮಸ್ತವೂ ಬ್ರಹ್ಮಮಯವಾಗಿದೆ ಆದ್ದರಿಂದ ಕರ್ಮವು ಬ್ರಹ್ಮಾತ್ಮಕವಾದುದು ಬ್ರಹ್ಮಮಯವಾದುದು

ಮಾಡುತ್ತಾರೆ ಮತ್ತು ಹಾಗೆಯೇ ಮತ್ತೆ -ಕೆಲವರು ಪ್ರಾಣದಲ್ಲಿ (ಉಚ್ಛ್ವಾಸದಲ್ಲಿ) ಅಪಾನನನ್ನು (ನಿಶ್ವಾಸವನ್ನು), ಹೋಮ ಮಾಡುತ್ತಾರೆ "—"ಇನ್ನು ಕೆಲವರು ನಿಯತಾಹಾರವುಳ್ಳವರಾಗಿ ಪ್ರಾಣ ಅಪಾನ ಎರಡನ್ನೂ ಬಂಧಿಸಿ ಪ್ರಾಣಗಳಲ್ಲಿ ಪ್ರಾಣಗಳನ್ನು (ಉಚ್ಛ್ವಾಸದಲ್ಲಿ -ಉಚ್ಛ್ವಾಸವನ್ನು) ಹೋಮ ಮಾಡುತ್ತಾರೆ ಇವರುಗಳೆಲ್ಲರೂ ಕೂಡ ಯಜ್ಞವನ್ನು ತಿಳಿದವರೂ ಮತ್ತು ಯಜ್ಞದಿಂದ ನಾಶ ಮಾಡಲ್ಪಟ್ಟ ಪಾಪಗಳನ್ನು ಉಳ್ಳವರೂ ಆಗಿದ್ದಾರೆ"— "ಮತ್ತು ಯಜ್ಞಶೇಷವಾದ ಅಮೃತವನ್ನು ಭುಂಜಿಸುವವರಾಗಿ ಶಾಶ್ವತ ಬ್ರಹ್ಮವನ್ನು ಹೊಂದುತ್ತಾರೆ ಕುರುಶ್ರೇಷ್ಠನಾದ ಅರ್ಜುನನೇ! ಯಜ್ಞರಹಿತನಾದ ಪುರುಷನಿಗೆ ಈ ಲೋಕವೇ ಇಲ್ಲ, ಅವನಿಗೆ ಬೇರೆ ಲೋಕವು (ಮೋಕ್ಷವು) ಎಲ್ಲಿಂದ ಬರುವುದು!"

ಕೆಲವು ಕರ್ಮಯೋಗಿಗಳು ಪ್ರಾಣಾಯಾಮ ಅಭ್ಯಾಸಗಳನ್ನು ನಿಷ್ಠೆಯಿಂದ ಮಾಡುತ್ತಾರೆ (ಪ್ರಾಣಾಯಾಮವಾದರೋ ಪೂರಕ, ರೇಚಕ ಮತ್ತು ಕುಂಭಕಗಳೆಂದು ಮೂರು ವಿಧವಾಗಿದೆ ಪೂರಕವೆಂದರೆ ಪ್ರಾಣವಾಯುವನ್ನು ಉಚ್ಛ್ವಾಸದ ಮೂಲಕ ಒಳಗೆ ತೆಗೆದುಕೊಂಡು ತುಂಬಿಕೊಳ್ಳುವುದು ರೇಚಕವೆಂದರೆ ಪ್ರಾಣವಾಯುವನ್ನು ನಿಶ್ವಾಸದ ಮೂಲಕ ಹೊರಗೆ ಕಳುಹಿಸುವುದು ಕುಂಭಕವೆಂದರೆ—ಒಳಗೆ ತೆಗೆದುಕೊಂಡ ಪ್ರಾಣವಾಯುವನ್ನು ಸ್ವಲ್ಪಕಾಲ ತಡೆದು ಶ್ವಾಸನಿರೋಧ ಮಾಡುವುದೇ ಕುಂಭಕವು ಈ ಶ್ವಾಸನಿರೋಧ ಕಾಲದಲ್ಲಿ ಪ್ರಾಣಾಯಾಮ ಮಂತ್ರವನ್ನು ಜಪಿಸುತ್ತಿರಬೇಕು ಶ್ರೀ ರಾಮಾನುಜಾಚಾರ್ಯರು ಈ ಮೂರು ವಿಧವಾದ ಪ್ರಾಣಾಯಾಮದ ಅಭ್ಯಾಸಗಳಲ್ಲಿ ನಿರತರಾದವರನ್ನು ಪ್ರತ್ಯೇಕವಾಗಿ ಮೂರು ವಿಧವಾದ ಕರ್ಮಯೋಗಿಗಳೆಂದು ವಿವರಿಸುತ್ತಾರೆ) ಪ್ರಾಣವನ್ನು ಅಪಾನದಲ್ಲಿ ಹೋಮ ಮಾಡುವವರು ಪೂರಕರು ಅಂದರೆ 'ಪೂರಕ ಪ್ರಾಣಾಯಾಮ ಪರರು'; ಪ್ರಾಣದಲ್ಲಿ 'ಅಪಾನವನ್ನೂ ಹೋಮ ಮಾಡುವವರು ರೇಚಕರು ಅಂದರೆ 'ರೇಚಕ ಪ್ರಾಣಾಯಾಮ ಪರರು ಮತ್ತು ಪ್ರಾಣ ಅಪಾನಗಳ ಗತಿಯನ್ನು ತಡೆದು ಪ್ರಾಣವನ್ನು ಪ್ರಾಣದಲ್ಲಿ ಹೋಮ ಮಾಡುವವರು ಕುಂಭಕರು ಅಂದರೆ ಕುಂಭಕ ಪ್ರಾಣಾಯಾಮ ಪರರು ಈ ಮೂರು ವಿಧವಾದ ಪ್ರಾಣಾಯಾಮ ಅಭ್ಯಾಸನಿಷ್ಠರೂ ನಿಯತಾಹಾರವುಳ್ಳವರಾಗಿರುತ್ತಾರೆ ಎಂದು ಹೇಳಿದೆ

ದ್ರವ್ಯಯಜ್ಞದಿಂದ ಆರಂಭಿಸಿ ಪ್ರಾಣಾಯಾಮದವರೆಗೂ ಹೇಳಲ್ಪಟ್ಟ ವಿಧವಿಧವಾದ ಕರ್ಮಯೋಗ ಅಭ್ಯಾಸಗಳಲ್ಲಿ, ತಮಗೆ ಇಷ್ಟವಾದವುಗಳಲ್ಲಿ ಪ್ರವೃತ್ತಿಹೊಂದಿದ ಈ ಸಮಸ್ತ ಕರ್ಮಯೋಗಿಗಳೂ, "ಸಹಯಜ್ಞಾಃ ಪ್ರಜಾಸೃಷ್ಟ್ವಾ"—ಎಂದು ಹಿಂದೆಯೇ ಹೇಳಿದ ಮಹಾಯಜ್ಞದ ಮಹಿಮೆಯನ್ನರಿತು ತತ್ಪೂರ್ವಕವಾಗಿ ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ಯಜ್ಞರೂಪವಾಗಿ ಆಚರಿಸುವ ವಿಧಾನವನ್ನರಿತವರಾಗಿ, ಅದರಲ್ಲೇ ನಿಷ್ಠೆಹೊಂದಿದವರಾಗಿ, ಆ ಕಾರಣದಿಂದಲೇ ತಮ್ಮ ಪಾಪಗಳನ್ನೆಲ್ಲಾ ಹೋಗಲಾಡಿಸಿಕೊಳ್ಳುತ್ತಾರೆ ಮತ್ತು ಯಜ್ಞಶೇಷವಾದ ಅಮೃತವನ್ನು ಭೋಜನಮಾಡಿ ಶರೀರಧಾರಣೆ ಮಾಡಿಕೊಳ್ಳುತ್ತಾರೆ ಹೀಗೆ ಕರ್ಮಯೋಗದಲ್ಲಿ ಚೆನ್ನಾಗಿ ನಿರತರಾಗಿರುವ ಪುರುಷರು ಸನಾತನವಾದ ಬ್ರಹ್ಮವನ್ನು ಹೊಂದುತ್ತಾರೆ. (ನಿತ್ಯನೈಮಿತ್ತಿಕಾದಿ ಕರ್ಮಗಳನ್ನೆಲ್ಲಾ ಭಗವದಾರಾಧನ ರೂಪವಾಗಿ ಆಚರಿಸುವುದೇ ಯಜ್ಞವೆಂದೂ, ಭಗವನ್ನಿವೇದನವಾದ ಪ್ರಸಾದಗಳೇ ಯಜ್ಞಶೇಷಗಳಾದ ಅಮೃತಗಳೆಂದೂ ಹಿಂದೆಯೇ ತಿಳಿಸಿದೆ. ಈ ರೀತಿಯಾಗಿ ಯಜ್ಞರೂಪವಾಗಿ ಕರ್ಮಗಳನ್ನು ಆಚರಿಸುತ್ತಾ ಯಜ್ಞಶೇಷಗಳನ್ನು ಭೋಜನ ಮಾಡುತ್ತಾ ಇರುವ ಕರ್ಮಯೋಗಿಗಳೆಲ್ಲರೂ ಭಕ್ತಿಗೆ ಪ್ರತಿಬಂಧಕಗಳಾದ ಪಾಪಗಳನ್ನೆಲ್ಲಾ ಹೋಗಲಾಡಿಸಿಕೊಂಡು ಭಕ್ತಿಯೋಗಕ್ಕೆ ಅರ್ಹತೆ ಪಡೆದು ತನ್ಮೂಲಕ ಪರಬ್ರಹ್ಮಪ್ರಾಪ್ತಿ ಹೊಂದುತ್ತಾರೆ ಎಂದು ಅಭಿಪ್ರಾಯ ಶ್ರೀ ಕೃಷ್ಣನು ಕರ್ಮಯೋಗದಲ್ಲಿ ಅನೇಕ ವಿಧಗಳನ್ನು 25 ರಿಂದ 29ನೇ ಶ್ಲೋಕದವರೆಗೆ ತಿಳಿಸಿದ್ದಾನೆ ಆದರೆ ವಿಧವಿಧವಾದ ಈ ಕರ್ಮಯೋಗಗಳ ಅನುಷ್ಠಾನಗಳಲ್ಲಿ ವ್ಯತ್ಯಾಸವಿದ್ದರೂ ಫಲದಲ್ಲಿ ಯಾವ ವ್ಯತ್ಯಾಸವೂ ಇಲ್ಲ ಎಂದು ಇಲ್ಲಿ ತಿಳಿಸಿದ್ದಾನೆ ಯಾವ ವಿಧವಾದ ಕರ್ಮವಾದರೂ ಸರಿ ಅದನ್ನು ಯಜ್ಞಾರ್ಥವಾಗಿ ಭಗವದರ್ಪಿತ ದೃಷ್ಟಿಯಿಂದ ಮಾಡಿದರೆ ಪಾಪಗಳೆಲ್ಲಾ ನಾಶವಾಗಿ, ಚಿತ್ತಶುದ್ಧಿಯಾಗಿ ಭಗವದ್ಭಕ್ತಿ ಲಭಿಸುವುದು ಎಂದು ಹೇಳಿದ್ದಾನೆ)—

ಆದರೆ ಹೀಗೆ ಯಜ್ಞರೂಪವಾಗಿ ಕರ್ಮಗಳನ್ನು ಆಚರಿಸದವನ ಗತಿ ಎಂತಹುದು ಎಂಬುದನ್ನು 31ನೇ ಶ್ಲೋಕದಲ್ಲಿ ವಿವರಿಸುತ್ತಾನೆ—ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ಯಜ್ಞರೂಪವಾಗಿ ಆಚರಿಸದ ಪುರುಷನಿಗೆ ಈ ಲೋಕವೇ ಇಲ್ಲವು. ಅಂದರೆ ಈ ಪ್ರಕೃತಿ ಸಂಬಂಧವಾದ ಲೋಕಕ್ಕೆ ಸಂಬಂಧಪಟ್ಟ ಧರ್ಮ, ಅರ್ಥ, ಕಾಮವೆಂಬ ಪುರುಷಾರ್ಥಗಳು ಸಿದ್ಧಿಸುವುದಿಲ್ಲವು. ಹೀಗಿರುವಾಗ ಅಂದರೆ ಈ ಪ್ರಾಕೃತ ಪುರುಷಾರ್ಥಗಳಾದ ಧರ್ಮ ಅರ್ಥಕಾಮಗಳೇ ಸಿದ್ಧಿಸಿದ ಮೇಲೆ ಇದಕ್ಕಿಂತ ಬೇರೆಯಾದ ಮೋಕ್ಷ ಪುರುಷಾರ್ಥವು ಹೇಗೆ ಲಭಿಸೀತು ? ಪರಮ ಪುರುಷಾರ್ಥವೇ ಮೋಕ್ಷವಾಗಿರುವುದರಿಂದ ಅದಕ್ಕಿಂತ ಬೇರೆಯಾದ ಧರ್ಮ ಅರ್ಥಕಾಮ ಪುರುಷಾರ್ಥಗಳೆಲ್ಲವೂ ಪ್ರಾಕೃತ ಪುರುಷಾರ್ಥಗಳೆಂದು ಅಭಿಪ್ರಾಯ

ಒಟ್ಟಿನಲ್ಲಿ ಯಜ್ಞರೂಪವಾಗಿ ಕರ್ಮಗಳನ್ನು ಆಚರಿಸುವ ಕರ್ಮಯೋಗಿಗೆ ಇಹದಲ್ಲಿ ಧರ್ಮ ಅರ್ಥ ಕಾಮ ಪುರುಷಾರ್ಥಗಳೂ, ಪರದಲ್ಲಿ ಪರಮ ಶ್ರೇಯಸ್ಸಾದ ಮೋಕ್ಷ ಪುರುಷಾರ್ಥವೂ ಲಭಿಸುವುದೆಂದೂ, ಹಾಗೆ ಮಾಡದವನಿಗೆ ಯಾವ ಪುರುಷಾರ್ಥವೂ ಲಭಿಸುವುದಿಲ್ಲವೆಂದೂ ಅಭಿಪ್ರಾಯ

**ಶ್ಲೋಕ – 32** ಮೇಲಿನ ಶ್ಲೋಕದ ಅಭಿಪ್ರಾಯವೇ ಇಲ್ಲಿ ಮತ್ತೆ ವಿವರಿಸಲ್ಪಟ್ಟಿದೆ "ಈ ರೀತಿಯಾಗಿ ಅನೇಕ ವಿಧಗಳಾದ ಯಜ್ಞವು (ಕರ್ಮಯೋಗವು) ಬ್ರಹ್ಮನನ್ನು ಹೊಂದುವ ಮಾರ್ಗವಾಗಿ ವಿಸ್ತರಿಸಿ ಹೇಳಲ್ಪಟ್ಟಿದೆ. ಅವುಗಳೆಲ್ಲವನ್ನೂ ಕರ್ಮಜನ್ಯವಾದವುಗಳೆಂದು ತಿಳಿ ಹೀಗೆ ತಿಳಿದರೆ ನೀನು ಮುಕ್ತನಾಗುತ್ತೀಯೆ " ಈ ರೀತಿಯಾಗಿ ಬಹಳ ವಿಧಗಳಾದ ಕರ್ಮಯೋಗವು ಬ್ರಹ್ಮಸಾಕ್ಷಾತ್ಕಾರಕ್ಕೆ ಉಪಾಯವಾಗಿ ವಿಸ್ತಾರವಾಗಿ ಹೇಳಲ್ಪಟ್ಟಿದ ಈ ಕರ್ಮಯೋಗವು ಆತ್ಮನಯಥಾರ್ಥಸ್ವರೂಪ ಜ್ಞಾನ ಹೊಂದಲು ಸಾಧನವಾಗಿದ ಇಲ್ಲಿಯವರೆಗೆ ಯಾವುದರ ಲಕ್ಷಣಗಳೂ, ಬೇದಗಳೂ ವರ್ಣಿಸಲ್ಪಟ್ಟವೋ ಆ ಸಮಸ್ತ ಕರ್ಮಯೋಗವೂ ಕರ್ಮಜನಿತವಾದುದೆಂದು ತಿಳಿ ಅಂದರೆ ಪ್ರತಿದಿನವೂ ಅನುಷ್ಠಿಸಲ್ಪಡುವ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನದಿಂದ ಉತ್ಪನ್ನವಾದುದೆಂದು ತಿಳಿ ಹಾಗೆ ತಿಳಿದು ಅದನ್ನು (ಅಂದರೆ ಪ್ರತಿದಿನವೂ ನೀನು ಮಾಡುವ ನಿತ್ಯನೈಮಿತ್ತಿಕ ಕರ್ಮಗಳನ್ನು) ಮೇಲೆ ಹೇಳಿದ ರೀತಿಯಲ್ಲಿ ಅನುಷ್ಠಿಸಿದರೆ ನೀನು ಮುಕ್ತನಾಗುತ್ತೀಯೆ ಅಂದರೆ ನೀನು ಪ್ರತಿದಿನವೂ ಪ್ರತಿಕ್ಷಣವೂ ಅನುಷ್ಠಿಸುತ್ತಿರುವ ನಿತ್ಯನೈಮಿತ್ತಿಕ ಕರ್ಮಗಳೆಲ್ಲವನ್ನೂ ಮೇಲೆ ಉಪದೇಶ ಮಾಡಿರುವ ರೀತಿಯಲ್ಲಿ ಕರ್ಮಯೋಗವಾಗಿ ಅನುಷ್ಠಿಸಿದರೆ ನೀನು ಮುಕ್ತನಾಗಿ ಪರಮಾತ್ಮನನ್ನು ಹೊಂದುತ್ತೀಯೆ ಎಂದು ಅಭಿಪ್ರಾಯ

## V ಕರ್ಮಯೋಗದಲ್ಲಿರುವ ಜ್ಞಾನಾಂಶದ ಪ್ರಧಾನತೆಯ ನಿರೂಪಣೆ (ಶ್ಲೋಕಗಳು 33ರಿಂದ 42)

ಇಲ್ಲಿಯವರೆಗೆ ಜ್ಞಾನವು ಕರ್ಮದಲ್ಲಿ ಅಂತರ್ಗತವಾಗಿರುವುದರಿಂದ ಕರ್ಮಕ್ಕೆ ಜ್ಞಾನಾಕಾರತೆ ಉಂಟು ಎಂದು ಹೇಳಿ, ಈಗ ಮುಂದೆ ಅಂತರ್ಗತವಾಗಿ ಜ್ಞಾನಾಂಶವನ್ನು ಪಡೆದಿರುವ ಕರ್ಮಗಳಲ್ಲಿ ಜ್ಞಾನಾಂಶಕ್ಕೇ ಪ್ರಧಾನತೆ ಹೆಚ್ಚು ಎಂದು ಶ್ರೀ ಕೃಷ್ಣ ವಿವರಿಸುತ್ತಾನೆ

**ಶ್ಲೋಕ—33** "ದ್ರವ್ಯಮಯ ಯಜ್ಞಕ್ಕಿಂತ ಜ್ಞಾನಯಜ್ಞವು ಶ್ರೇಷ್ಠವಾದುದು ಸಮಸ್ತ ಕರ್ಮಗಳೂ ಸಂಪೂರ್ಣವಾಗಿ ಜ್ಞಾನದಲ್ಲಿ (ಆತ್ಮ ಸಾಕ್ಷಾತ್ಕಾರ ರೂಪ ಜ್ಞಾನದಲ್ಲಿ) ಸಮಾಪ್ತಿ ಹೊಂದುತ್ತವೆ" —ಕರ್ಮವು ಎರಡು ವಿಧವಾದ ಆಕಾರಗಳನ್ನು ಹೊಂದಿದೆ (ಒಂದು ಕರ್ಮರೂಪವಾದ ಆಕಾರ ಅಂದರೆ ಕರ್ಮಕ್ಕೆ ಬೇಕಾದ ದ್ರವ್ಯ ಹವಿಸ್ಸು ಮುಂತಾದ ಸಾಮಗ್ರಿಗಳ ಸಹಾಯದಿಂದ ಮಾಡಲ್ಪಡುವ ಕಾರ್ಯರೂಪವಾದ ಯಜ್ಞಾದಿ ಕ್ರಿಯೆಗಳು, ಎರಡನೇಯದು ಆಕರ್ಮದಲ್ಲಿ ಅಡಗಿರುವ ಎರಡು ವಿಧವಾದ ಜ್ಞಾನಾಕಾರತೆ) ಈ ಎರಡು ವಿಧವಾದ ಆಕಾರವುಳ್ಳ ಕರ್ಮದಲ್ಲಿ ದ್ರವ್ಯಮಯವಾದ ಅಂಶಕ್ಕಿಂತ ಅಂದರೆ ದ್ರವ್ಯಗಳ ಮೂಲಕ ಅನುಷ್ಠಿಸಲ್ಪಡುವ ಯಜ್ಞಾದಿ ಕ್ರಿಯೆಗಳಿಗಿಂತ ಆ ಕ್ರಿಯೆಯಲ್ಲಿ ಅಡಗಿರುವ ಕರ್ಮಕ್ಕೆ ಕರ್ತೃವಾದ ತಾನೂ, ತಾನು ಮಾಡುವ ಕರ್ಮ, ಆ ಕರ್ಮಕ್ಕೆ ಬೇಕಾದ ಸಾಧನಗಳು ಮತ್ತು ಅದರ ಫಲ ಎಲ್ಲವೂ ಬ್ರಹ್ಮಾತ್ಮಕವಾದುದು ಎಂಬ ಜ್ಞಾನಮಯವಾದ ಅಂಶವೇ ಶ್ರೇಷ್ಠವಾದುದು ಏತಕ್ಕೆಂದರೆ ಸಮಸ್ತ ಕರ್ಮಗಳೂ, ಅವುಗಳಿಗಿಂತ ಬೇರೆಯಾಗಿ ಆ ಕರ್ಮಯೋಗಾಭ್ಯಾಸದಿಂದ ಲಭಿಸುವ ಸಮಸ್ತ ಫಲಗಳೂ ಜ್ಞಾನದಲ್ಲೇ ಪರ್ಯವಸಾನ ಹೊಂದುತ್ತವೆ. (ಅಂದರೆ ಕರ್ಮಯೋಗದಿಂದ ಸಾಧಿಸಬೇಕಾದ ಫಲವು ಆತ್ಮಸ್ವರೂಪ ಸಾಕ್ಷಾತ್ಕಾರರೂಪ ಜ್ಞಾನವೇ ಆಗಿರುತ್ತದೆ ಎಂದು ಅರ್ಥ) ಸಮಸ್ತ ಸಾಧನಗಳಿಂದಲೂ ಹೊಂದಬೇಕಾದುದಾಗಿರುವ ಆತ್ಮಯಥಾರ್ಥ ಸ್ವರೂಪ ಜ್ಞಾನವು ಕರ್ಮಯೋಗ ಅನುಷ್ಠಾನದಲ್ಲೇ ಸೇರಿರುವುದರಿಂದ, ಕರ್ಮಯೋಗ ಅನುಷ್ಠಾನ ಕಾಲದಲ್ಲೆಲ್ಲಾ ಅಭ್ಯಾಸಮಾಡಲ್ಪಡುತ್ತದೆ ಹೀಗೆ ಪ್ರತಿದಿನವೂ ಕರ್ಮಮಾಡುವಾಗಲೆಲ್ಲಾ ಆತ್ಮಸ್ವರೂಪಜ್ಞಾನವು ಅನುಸಂಧಾನದ ಮೂಲಕ ಅಭ್ಯಾಸ ಮಾಡಲ್ಪಟ್ಟುದಾಗಿ ಕ್ರಮೇಣ ಪ್ರಾಪ್ಯದಶೆಯನ್ನು ಹೊಂದುತ್ತದೆ ಅಂದರೆ ಆತ್ಮಸ್ವರೂಪ ಯಾಥಾತ್ಮ್ಯಜ್ಞಾನ ಸಾಕ್ಷಾತ್ಕಾರದ ಗುರಿಯ ಎಂದು ಅಭಿಪ್ರಾಯ

**ಶ್ಲೋಕ—34**

ಆತ್ಮ ಯಥಾರ್ಥ ಜ್ಞಾನವನ್ನು ಹೊಂದುವುದು ಹೇಗೆ ಎಂಬುದು ಈ ಶ್ಲೋಕದಲ್ಲಿ ವಿವರಿಸಲ್ಪಟ್ಟಿದೆ

"ಅದನ್ನು (ಆತ್ಮ ಜ್ಞಾನವನ್ನು) ಪ್ರಣಾಮಾದಿಗಳನ್ನು ಮಾಡುವುದರಿಂದಲೂ, ಪರಿಪ್ರಶ್ನೆಗಳನ್ನು ಕೇಳುವುದರಿಂದಲೂ ಮತ್ತು ಶುಶ್ರೂಷೆ ಮಾಡುವುದರಿಂದಲೂ ತಿಳಿದುಕೊಳ್ಳುವವನಾಗು ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸಿರುವ ಜ್ಞಾನಿಗಳು ನಿನಗೆ ಅಜ್ಞಾನವನ್ನು ಉಪದೇಶಿಸುತ್ತಾರೆ"—2ನೇ ಅಧ್ಯಾಯದ 17ನೇ ಶ್ಲೋಕವಾದ "ಅವಿನಾಶಿತುತದ್ವಿದ್ಧಿ" ಎಂಬ ಶ್ಲೋಕದಿಂದ "ಏಷಾತೇಽಭಿಹಿತಾಸಾಂಖ್ಯೇ'' ಎಂಬ ಶ್ಲೋಕದವರೆಗೆ ನಾನು ಆತ್ಮ ವಿಷಯ ಜ್ಞಾನವನ್ನು ನಿನಗೆ ಉಪದೇಶ ಮಾಡಿದ್ದೇನೆ ಆತ್ಮ ವಿಷಯ ಜ್ಞಾನದಿಂದ ಕೂಡಿ ಕರ್ಮ ಮಾಡುತ್ತಾ ಇರುವ ನೀನು (ಕರ್ಮಯೋಗಾನುಷ್ಠಾನದಲ್ಲಿರುವ ನೀನು) ನಿನ್ನ ಪುಣ್ಯಪರಿಪಾಕಕ್ಕೆ ಅನುಗುಣವಾಗಿ ಪ್ರಾಪ್ತಕಾಲದಲ್ಲಿ ಜ್ಞಾನಿಗಳನ್ನು ಆಶ್ರಯಿಸಿ ಪ್ರಣಾಮ, ಪರಿಪ್ರಶ್ನೆ, ಸೇವಾದಿಗಳ ಮೂಲಕವಾಗಿ ಅವರಿಂದ ಆ ಜ್ಞಾನವನ್ನು ನಿಸ್ತಾರವಾಗಿ ತಿಳಿದುಕೊಳ್ಳುವವನಾಗು ಎಂದು ಶ್ರೀಕೃಷ್ಣ ಇಲ್ಲಿ ತಿಳಿಸಿದ್ದಾನೆ (ಇದರ ಅಭಿಪ್ರಾಯವೇನೆಂದರೆ ಆತ್ಮ ಯಥಾರ್ಥ ಜ್ಞಾನವನ್ನು (ಆತ್ಮನ ನಿಜಸ್ವರೂಪವನ್ನು) ತಿಳಿಯಬೇಕಾದರೆ ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸಿರುವ ಶ್ರೇಷ್ಠರಾದ ಜ್ಞಾನಿಗಳನ್ನು ಆಶ್ರಯಿಸಬೇಕು ಮೊದಲು ಅವರಿಗೆ ಪ್ರಣಾಮಾದಿಗಳನ್ನು ಮಾಡಬೇಕು ಪ್ರಣಿಪಾತವೆಂದರೆ ನಮಸ್ಕಾರ ಮಾಡುವುದು ಇದು ನಿನ್ನ ವಿನಯವನ್ನು ಸೂಚಿಸುತ್ತದೆ ಅಂದರೆ ನೀನು ನಿನ್ನ ಜ್ಞಾನಿಯಾದ ಗುರುವಿಗೆ ನಮಸ್ಕಾರಮಾಡಿ ಅವನ ಬಳಿ ವಿನಯದಿಂದ ಕೂಡಿದವನಾಗಿರಬೇಕು ಎರಡನೆಯದಾಗಿ ಅವರು ಬೋಧಿಸುವ ವಿಷಯಗಳನ್ನು ಪರಿಪ್ರಶ್ನೆಗಳ ಮೂಲಕ ಚೆನ್ನಾಗಿ ಗ್ರಹಿಸಿಕೊಂಡವನಾಗಬೇಕು ಅಂದರೆ ಮೇಲೆ ಮೇಲೆ ಪ್ರಶ್ನೆಗಳನ್ನು ಹಾಕಿ ನಿನಗಿರುವ ಎಲ್ಲಾ ಶಂಕೆಗಳನ್ನೂ ಪರಿಹಾರ ಮಾಡಿಕೊಳ್ಳಬೇಕು ಮೂರನೆಯದಾಗಿ ಜ್ಞಾನಿಯಾದ ಗುರುವಿಗೆ ಶುಶ್ರೂಷೆ ಮಾಡಬೇಕು. ಅವರೊಂದಿಗೆ ಇದ್ದು ಅವರಿಗೆ ಸೇವೆ ಮಾಡುವುದರಿಂದ ಅವರು ಉಪದೇಶಿಸಿರುವ ತತ್ತ್ವವನ್ನು ಕಾರ್ಯತಃ ಅನುಷ್ಠಿಸುವ ರೀತಿಯನ್ನು ಅವರ ಕಾರ್ಯಗಳನ್ನು ನೋಡಿ ನೀನು ತಿಳಿಯಬಹುದು) ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸಿರುವ ಆ ಜ್ಞಾನಿಗಳು ನೀನು ಮಾಡುವ ನಮಸ್ಕಾರಾದಿ ಸೇವೆಗಳಿಂದ ಪ್ರೀತರಾಗಿ ತತ್ತ್ವವನ್ನು ತಿಳಿಯಬೇಕೆಂಬ ಆಸೆಯಿಂದ ನೀನು ಕೇಳುವ ಪರಿಪ್ರಶ್ನೆಗಳಿಂದ ನಿನಗೆ ಜ್ಞಾನಾರ್ಜನೆಯಲ್ಲಿ ಇರುವ ಆಸೆ ಆತುರ ಉತ್ಸಾಹಗಳನ್ನು ನೋಡಿ ನಿನಗೆ ಜ್ಞಾನವನ್ನು ಉಪದೇಶಮಾಡುತ್ತಾರೆ (ಶಿಷ್ಯನ ಲಕ್ಷಣವು ಈ ಶ್ಲೋಕದಲ್ಲಿ ಚೆನ್ನಾಗಿ ವಿವರಿಸಲ್ಪಟ್ಟಿದೆ ತತ್ತ್ವವನ್ನು ಸಾಕ್ಷಾತ್ಕರಿಸಿರುವ ಗುರುವು ಲಭಿಸದೇ ಇದ್ದರೆ ಆಗ ಈ ಜ್ಞಾನವನ್ನು ಪಡೆಯುವುದು ಹೇಗೆ ಎಂಬ ಶಂಕೆ ಹುಟ್ಟಬಹುದು ಆತ್ಮ ಸಾಕ್ಷಾತ್ಕಾರ ಹೊಂದಿರುವ ಜ್ಞಾನಿಗಳು ಲಭಿಸುವುದು ಬಹಳ ಕಷ್ಟ ಆದ್ದರಿಂದ ಅಂತಹ ಜ್ಞಾನಿಗಳು ರಚಿಸಿರುವ ಗ್ರಂಥಗಳನ್ನು ಚೆನ್ನಾಗಿ ವ್ಯಾಸಂಗಮಾಡಿ ತಿಳಿಯಬೇಕಾಗುತ್ತದ ಪ್ರಣಿಪಾತ ಪರಿಪ್ರಶ್ನೆ ಸೇವಾದಿಗಳಿಂದ ಪವಿತ್ರ ಗ್ರಂಥಗಳನ್ನು ವ್ಯಾಸಂಗಮಾಡಬೇಕು. ಅಂದರೆ ಮೊದಲನೆಯದಾಗಿ ಆ ಗ್ರಂಥಗಳನ್ನು ವಿನಯದಿಂದ, ಅದರ ಗೌರವಗಳೊಂದಿಗೆ ವ್ಯಾಸಂಗ ಮಾಡಬೇಕು, ಅದರಲ್ಲಿ ಅಡಗಿರುವ ವಿಷಯಗಳನ್ನು ನಾವೇ ಸುತ್ತಿ ಸುತ್ತಿ ಪ್ರಶ್ನೆ ಹಾಕಿಕೊಂಡು, ಮೇಲೆ ಮೇಲೆ ಯೋಚನೆಮಾಡಿ, ಇರಬಹುದಾದ ಶಂಕೆಗಳಿಗೆಲ್ಲಾ ಆಗ್ರಂಥದಿಂದಲೇ ಉತ್ತರಪಡೆದು ಪರಿಹಾರ ಮಾಡಿಕೊಳ್ಳಬೇಕು ಮತ್ತು ಮೂರನೆಯದಾಗಿ ಗ್ರಂಥದಲ್ಲಿ ತಿಳಿಸಿರುವ ವಿಷಯಗಳನ್ನು ನಡತೆಯಲ್ಲಿ ಆದಷ್ಟು ಆಚರಿಸಿ ಅರಿತುಕೊಳ್ಳಲು ಪ್ರಯತ್ನಿಸಬೇಕು ಎಂಬ ಅಭಿಪ್ರಾಯವೂ ಇಲ್ಲಿ ವ್ಯಕ್ತವಾಗುತ್ತದೆ ಎನ್ನಬಹುದು ಆದರೆ ಆತ್ಮಸಾಕ್ಷಾತ್ಕಾರ ಹೊಂದಿರುವ ಗುರುವು ಪುಣ್ಯವಶಾತ್ ನಿನಗೆ ಲಭಿಸಿದರೆ ಆಗ ಪ್ರಣಿಪಾತ ಪರಿಪ್ರಶ್ನ ಸೇವಾದಿಗಳ ಮೂಲಕ ಅವನಿಂದ ಗೀತೆಯ 2ನೇ ಅಧ್ಯಾಯದಲ್ಲಿ ಉಪದೇಶಿಸಿರುವ ಜ್ಞಾನವನ್ನು ಉಪದೇಶರೀತ್ಯಾ ಗ್ರಹಿಸುವುದು ಅತ್ಯುತ್ತಮವಾದ ಮಾರ್ಗವೆಂದು ಶ್ರೀಕೃಷ್ಣ ಇಲ್ಲಿ ತಿಳಿಸಿದ್ದಾನೆ)

**ಶ್ಲೋಕ 35**–ಸುಕೃತ ಪರಿಪಾಕದಿಂದ ಲಭಿಸುವ ಆತ್ಮ ಸಾಕ್ಷಾತ್ಕಾರ ಪಡೆದ ಜ್ಞಾನಿಯಾದ ಗುರುವಿನ ಬಳಿ ಪ್ರಣಿಪಾತ ಪರಿಪ್ರಶ್ನೆ ಸೇವಾದಿಗಳ ಮೂಲಕ ಉಪದೇಶ ಹೊಂದಿದರೆ ಆತ್ಮ ಯಥಾರ್ಥಜ್ಞಾನ ಲಭಿಸುತ್ತದೆ ಎಂದು ಮೇಲೆ ವಿವರಿಸಿ, ಈಗ ಜೀವಾತ್ಮನ ನಿಜಸ್ವರೂಪ ಸಾಕ್ಷಾತ್ಕಾರವೆಂಬ ಜ್ಞಾನದ ಲಕ್ಷಣವನ್ನು ತಿಳಿಸಿದ್ದಾನೆ ಆತ್ಮ ಸಾಕ್ಷಾತ್ಕಾರ ಉಂಟಾಗಿದೆ ಎಂದು ತಿಳಿಯುವುದು ಹೇಗೆ ಎಂದರೆ –

"(ಯಾವುದನ್ನು) ಈ ಆತ್ಮ ಯಥಾರ್ಥ ಜ್ಞಾನವನ್ನು ತಿಳಿದವನಾದರೆ ಮತ್ತೆ ಈ ರೀತಿಯಾದ ಮೋಹವನ್ನು ಹೊಂದುವುದಿಲ್ಲ ಮತ್ತು (ಯಾವುದರಿಂದ) ಈ ಆತ್ಮಯಥಾರ್ಥ ಜ್ಞಾನ ಲಾಭದಿಂದ ಸಮಸ್ತ ಚೇತನವರ್ಗವನ್ನೆಲ್ಲಾ ನಿನ್ನಲ್ಲಿ (ನಿನ್ನ ಆತ್ಮನಿಗೆ ಸಮನಾಗಿ) ನೋಡುತ್ತೀಯೆ ಮತ್ತು ಅನಂತರ ನನ್ನಲ್ಲೂ (ಪರಮಾತ್ಮನಾದ ನನಗೆ ಸಮನಾಗಿಯೂ) ನೋಡುತ್ತೀಯೆ''

ಅರ್ಜುನ ಈ ಆತ್ಮಯಥಾರ್ಥ ಜ್ಞಾನವನ್ನು ಸರಿಯಾಗಿ ತಿಳಿದೆಯಾದರೆ ಆಗ ನೀನು ಪುನಃ ಈ ವಿಧವಾದ ದೇಹವೇ ಆತ್ಮವೆಂಬ ಅಭಿಮಾನವನ್ನೂ ಅದರಿಂದ ಉಂಟಾಗುವ ಮಮತಾದಿಗಳಿಗೆ ಕಾರಣವಾದ ಮೋಹವನ್ನೂ ಹೊಂದುವುದಿಲ್ಲ ಅದೂ ಅಲ್ಲದೆ ದೇವ–ಮನುಷ್ಯ ಮುಂತಾದ ಬೇರೆ ಬೇರೆ ಆಕಾರಗಳಿಂದ ಕಾಣುತ್ತಿರುವ ಈ ಸಮಸ್ತ ಚೇತನವರ್ಗವನ್ನೆಲ್ಲಾ ಆಗ ನಿನ್ನ ಆತ್ಮನ ಹಾಗೆಯೇ ಕಾಣುತ್ತೀಯೆ. ಏತಕ್ಕೆಂದರೆ ಪ್ರಕೃತಿ ಸಂಬಂಧದಿಂದ ಬಿಡಲ್ಪಟ್ಟ ಮೇಲೆ ನಿನಗೂ ಮತ್ತು ಇತರ ಸಮಸ್ತ ಚೇತನರಿಗೂ ಜ್ಞಾನೈಕಾಕಾರತೆಯಿಂದ ಸಮತ್ವವು ಇದೆ (ಅಂದರೆ ನಿನ್ನ ಆತ್ಮ ಹೇಗೆ ಜ್ಞಾನಸ್ವರೂಪ ಮತ್ತು ಜ್ಞಾನ ಗುಣ ಹೊಂದಿದೆಯೋ ಹಾಗೆಯೇ ಇತರ ಸಮಸ್ತ ಜೀವಾತ್ಮರೂ ಜ್ಞಾನಸ್ವರೂಪ ಮತ್ತು ಜ್ಞಾನಗುಣ ಹೊಂದಿದ್ದಾರೆ) ಎಂಬ ಅರಿವು ನಿನಗೆ ಉಂಟಾಗುತ್ತದೆ ಪ್ರಕೃತಿ ಸಂಬಂಧದಿಂದ ಬಿಡಲ್ಪಟ್ಟ ಶುದ್ಧಾತ್ಮರೆಲ್ಲರೂ ಜ್ಞಾನೈಕಾಕಾರತೆಯಿಂದ ಸಮರು ಎಂದು ಮುಂದೆ ಗೀತೆಯಲ್ಲಿ "ನಿರ್ದೋಷಹಿಸಮಂಬ್ರಹ್ಮ" ಅಂದರೆ ಪ್ರಕೃತಿಸಂಬಂಧವೆಂಬ ದೋಷದಿಂದ ಬಿಡಲ್ಪಟ್ಟ ಸಮಸ್ತ ಆತ್ಮರೂ ಸಮರು ಎಂದು ಹೇಳಿದೆ, ಅಷ್ಟು ಮಾತ್ರವಲ್ಲದ ಅನಂತರ ಆ ಸಮಸ್ತ ಆತ್ಮರುಗಳನ್ನೂ ಪರಮಾತ್ಮನಾದ ನನ್ನಲ್ಲಿಯೂ ನೋಡುತ್ತೀಯೆ. ಪರಿಶುದ್ಧರಾದ ಸಮಸ್ತ ಆತ್ಮರುಗಳ ಸ್ವರೂಪಕ್ಕೂ ಪರಮಪುರುಷನಾದ ನನ್ನ ಸ್ವರೂಪಕ್ಕೂ (ನಾನೂ ಜ್ಞಾನಸ್ವರೂಪನಾಗಿ, ಜ್ಞಾನಗುಣಕನಾಗಿ ಇರುವುದರಿಂದ) ಸಾಮ್ಯತೆ ಇದೆ ಇದಕ್ಕೂ ಅನೇಕ ಪ್ರಮಾಣವಚನಗಳಿವೆ "ಇದಂ ಜ್ಞಾನಮುಪಾಶ್ರಿತ್ಯಮಮ ಸಾಧರ್ಮ್ಯಮಾಗತಾಃ" ಎಂದು ಗೀತೆಯಲ್ಲೂ "ತಥಾವಿದ್ವಾನ್ ಪುಣ್ಯಪಾಪೇವಿಧೂಯ-ನಿರಂಜನಃ ಪರಮಂಸಾಮ್ಯ ಮುಪೈತಿ"– ಎಂದು ಉಪನಿಷತ್ತಿನಲ್ಲೂ ಹೇಳಿದ ಇತ್ಯಾದಿ ಶ್ರುತಿ ವಾಕ್ಯಗಳಿಂದ ನಾಮರೂಪಾದಿಗಳಿಂದ ರಹಿತವಾದ ಶುದ್ಧ ಆತ್ಮವಸ್ತುವು ಪರಮಪುರುಷನ ಸ್ವರೂಪದೊಂದಿಗೆ ಸಾಮ್ಯತೆ ಪಡೆದಿದೆ ಎಂಬುದು ತಿಳಿಯಲ್ಪಡುತ್ತದೆ ಆದ್ದರಿಂದ ಪ್ರಕೃತಿಸಂಬಂಧದಿಂದ ಬಿಡಲ್ಪಟ್ಟ ಸಮಸ್ತ ಆತ್ಮವಸ್ತುಗಳೂ ಒಂದಕ್ಕೊಂದು ಪರಸ್ಪರ ಸಮವಾದವುಗಳೂ ಮತ್ತು ಸರ್ವೇಶ್ವರನಿಗೂ ಸಮವಾದವುಗಳೂ ಆಗಿವೆ (ಇಲ್ಲಿ ಅಭಿಪ್ರಾಯವೇನೆಂದರೆ–ಪ್ರಕೃತಿ ಸಂಬಂಧದಿಂದ ಬಿಡಲ್ಪಟ್ಟ ಶುದ್ಧ ಜೀವಾತ್ಮರೆಲ್ಲರೂ ಜ್ಞಾನಸ್ವರೂಪರಾಗಿ ಜ್ಞಾನಗುಣಕರಾಗಿ ಇರುವುದರಿಂದ ಪರಸ್ಪರ ಸಮರೆಂದೂ ಮತ್ತು ಹಾಗೆಯೇ ಸರಮೇಶ್ವರನೂ ಜ್ಞಾನಸ್ವರೂಪನಾಗಿ, ಜ್ಞಾನಗುಣಕನಾಗಿ ಇರುವುದರಿಂದ ಆತನೊಂದಿಗೂ ಸಮರೆಂದು ಹೇಳಲ್ಪಟ್ಟಿದೆ

## ಶ್ಲೋಕ 36 ಮತ್ತು 37

ಈ ಎರಡು ಶ್ಲೋಕಗಳಿಂದ ಶ್ರೀ ಕೃಷ್ಣ ಪರಮಾತ್ಮನು ಆತ್ಮಯಾಥಾತ್ಮ್ಯ ಜ್ಞಾನದಿಂದ ಸಮಸ್ತ ಪಾಪಗಳನ್ನೂ ಹೋಗಲಾಡಿಸಿಕೊಳ್ಳಬಹುದು ಎಂದು ಆ ಜ್ಞಾನದ ಮಹಾತ್ಮೆಯನ್ನು ಎರಡು ಉದಾಹರಣೆಗಳ ಮೂಲಕ ತಿಳಿಸಿದ್ದಾನೆ

"ಒಂದು ವೇಳೆ ನೀನು ಸಮಸ್ತ ಪಾಪಿಗಳಿಗಿಂತಲೂ ಹೆಚ್ಚು ಪಾಪ ಮಾಡಿದವನಾಗಿದ್ದಾಗ್ಯೂ ಕೂಡ ಸಮಸ್ತ ಪಾಪಗಳನ್ನೂ ಜ್ಞಾನ ನಾವೆಯ ಮೂಲಕವೇ ದಾಟುವವನಾಗುತ್ತೀಯೆ"

"ಹೇಗೆ ಚನ್ನಾಗಿ ಪ್ರಜ್ವಲಿಸುತ್ತಿರುವ ಬೆಂಕಿಯು ಕಟ್ಟಿಗೆಗಳನ್ನು ಭಸ್ಮೀಭೂತಗಳಾಗಿ ಮಾಡುತ್ತದೆಯೋ ಹಾಗೆಯೇ ಈ ಆತ್ಮವಿಷಯವಾದ ಜ್ಞಾನಾಗ್ನಿಯು ಸಮಸ್ತ ಕರ್ಮಗಳನ್ನೂ ಭಸ್ಮಮಯನಾಗಿ ಮಾಡುತ್ತದೆ"

ನೀನು ಸಮಸ್ತಪಾಪಿಗಳಿಗಿಂತ ಅಧಿಕ ಪಾಪ ಮಾಡಿದವನಾಗಿದ್ದರೂ ಕೂಡ ಸಮಸ್ತ ಪೂರ್ವಾರ್ಜಿತವಾದ ಪಾಪರೂಪವಾದ ಸಮುದ್ರವನ್ನು ಆತ್ಮವಿಷಯಜ್ಞಾನವೆಂಬ ನಾವೆಯಿಂದಲೇ ಸಂಪೂರ್ಣವಾಗಿ ದಾಟಲು ಶಕ್ತನಾಗುವೆ ಹೀಗೆ ದಾಟುವುದು ಮಾತ್ರವಲ್ಲದ ಸಮಸ್ತ ಪಾಪಸಮೂಹವೇ ನಾಶವಾಗಿ ಬಿಡುತ್ತದೆ ಎಂದು 37ನೇ ಶ್ಲೋಕವು ತಿಳಿಸುತ್ತದೆ ಚನ್ನಾಗಿ ಪ್ರಜ್ವಲಿಸುತ್ತಿರುವ ಅಗ್ನಿಯು ಕಟ್ಟಿಗೆಗಳ ಸಮೂಹವನ್ನು ಭಸ್ಮಮಾಡುವಂತೆ ಆತ್ಮಯಾಥಾತ್ಮ್ಯಜ್ಞಾನವೆಂಬ ಅಗ್ನಿಯು ಜೀವಾತ್ಮರ ಅನಾದಿಕಾಲ ಪ್ರವೃತ್ತವಾದ ಅನೇಕ ಪಾಪರಾಶಿಗಳನ್ನು ಭಸ್ಮಮಾಡಿ ನಾಶಗೊಳಿಸುತ್ತದ

## ಶ್ಲೋಕ 38

ಹೀಗೆ ಪಾಪರಾಶಿಗಳನ್ನೆಲ್ಲಾ ನಾಶಗೊಳಿಸುವುದರಿಂದ ಆತ್ಮಜ್ಞಾನವು ಬಹಳ ಪವಿತ್ರವಾದುದು ಎಂಬುದನ್ನು ಈ ಶ್ಲೋಕವು ತಿಳಿಸುತ್ತದ

"ಈ ಜಗತ್ತಿನಲ್ಲಿ ಆತ್ಮಜ್ಞಾನಕ್ಕೆ ಸಮವಾಗಿ ಪವಿತ್ರವಾದುದು ಮತ್ತ್ಯಾವುದೂ ಇಲ್ಲವು ಆತ್ಮಜ್ಞಾನದೊಂದಿಗೆ ಕೂಡಿದ ಕರ್ಮಯೋಗದಲ್ಲಿ ಸಿದ್ಧಿಹೊಂದಿದವನು ಕಾಲಕ್ರಮದಲ್ಲಿ ತನಗೆ ತಾನೇ ತನ್ನ ಆತ್ಮನನ್ನು ಹೊಂದುತ್ತಾನೆ (ಆತ್ಮಸ್ವರೂಪ ಯಥಾರ್ಥ ಜ್ಞಾನವನ್ನು ಹೊಂದುತ್ತಾನೆ)"

ಆತ್ಮ ಜ್ಞಾನಕ್ಕೆ ಸಮವಾಗಿ ಪವಿತ್ರವಾದುದು ಅಂದರೆ ಶುದ್ಧ ಮಾಡುವಂತಹುದು ಈ ಜಗತ್ತಿನಲ್ಲಿ ಬೇರೆ ಯಾವ ವಸ್ತುವೂ ಇಲ್ಲದಿರುವುದರಿಂದ ಆತ್ಮಜ್ಞಾನವು ಸಮಸ್ತ ಪಾಪಗಳನ್ನೂ ನಾಶ ಗೊಳಿಸುತ್ತದೆ ಎಂದು ಅರ್ಥ. ಈ ರೀತಿಯಾಗಿ ಆ ವಿಧವಾದ ಜ್ಞಾನವನ್ನು (ಆತ್ಮಜ್ಞಾನವನ್ನು) ಮೇಲೆ ಉಪದೇಶಿಸಿರುವ ರೀತಿ ಯಲ್ಲಿ ಪ್ರತಿದಿನವೂ ಅನುಷ್ಠಿಸುವ ಜ್ಞಾನಾಕಾರದಿಂದ ಕೂಡಿದ ಕರ್ಮಯೋಗದ ಮೂಲಕ ಸಿದ್ಧಿಯನ್ನು ಹೊಂದಿ ಕಾಲಕ್ರಮದಲ್ಲಿ ತನ ಆತ್ಮವನ್ನು (ಆತ್ಮಸ್ವರೂಪ ಯಥಾರ್ಥ ಜ್ಞಾನವನ್ನು) ತನಗೆ ತಾನೇ ಹೊಂದುತ್ತಾನೆ.

### ಶ್ಲೋಕ 39

ಇದು ಮೇಲಿನ ಶ್ಲೋಕದ ಅಭಿಪ್ರಾಯವನ್ನು ವಿವರಿಸು ತ್ತದೆ—

ಆತ್ಮಜ್ಞಾನ ವೃದ್ಧಿಯಲ್ಲಿ ಶ್ರದ್ಧೆಯುಳ್ಳ ಪುರುಷನು, ಆದರ ಲ್ಲಿಯೇ ಮನಸ್ಸುಳ್ಳವನಾಗಿ, ಅದರಲ್ಲಿಯೇ ನಿಯಮಿಸಲ್ಪಟ್ಟ ಇಂದ್ರಿಯ ಉಳ್ಳವನಾಗಿ ಆ ಜ್ಞಾನವನ್ನು ಹೊಂದುತ್ತಾನೆ, ಜ್ಞಾನ ವನ್ನು ಹೊಂದಿದ ಮೇಲೆ ಶೀಘ್ರದಲ್ಲಿಯೇ ಪರಮಶಾಂತಿಯನ್ನು ಪಡೆಯುತ್ತಾನೆ''—

ಮೇಲೆ ಹೇಳಿದ ಉಪದೇಶಗಳ ಮೂಲಕ ಜ್ಞಾನವನ್ನು ಹೊಂದಿದ ಆ ಪುರುಷನು ಉಪದೇಶಗಳ ಮೂಲಕ ತಾನು ಪಡೆದ ಜ್ಞಾನದಲ್ಲಿಯೇ ಶ್ರದ್ಧೆಯುಳ್ಳವನಾಗಿ, ಅದರಲ್ಲಿಯೇ ತನ್ನ ಮನ ಸ್ಸನ್ನೂ ನಿಯಮಿಸಿ ಮತ್ತು ಅದಕ್ಕಿಂತ ಭಿನ್ನವಾದ ಇತರ ವಿಷಯ ಗಳಲ್ಲಿ ಇಂದ್ರಿಯಗಳನ್ನು ವಿಮುಖಗೊಳಿಸಿ, ಬಹಳ ಶೀಘ್ರಕಾಲ ದಲ್ಲೇ ಮೇಲೆ ಹೇಳಿದ ಲಕ್ಷಣಗಳಿಂದ ಕೂಡಿದ ವಿಪಾಕ ದಶೆ ಯನ್ನು ಹೊಂದಿರುವ ಜ್ಞಾನವನ್ನು ಹೊಂದುವನು. ಆ ವಿಧ ವಾದ ಜ್ಞಾನಸಿದ್ಧಿಯನ್ನು ಹೊಂದಿ ಪರಮಶಾಂತಿಯನ್ನು ಬೇಗನೇ ಪಡೆಯುವನು. ಪರಮ ನಿರ್ವಾಣವನ್ನೂ (ಮೋಕ್ಷವನ್ನೂ) ಪಡೆಯುವನು

### ಶ್ಲೋಕ 40

''ಜ್ಞಾನರಹಿತನೂ, ಶ್ರದ್ಧಾರಹಿತನೂ, ಸಂಶಯದಿಂದ ಕೂಡಿರುವವನೂ ನಾಶ ಹೊಂದುವನು. ಸಂಶಯಾತ್ಮನಿಗೆ ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ, ಸುಖವೂ ಇಲ್ಲ''—

ಮೇಲೆ ತಿಳಿಸಿರುವ ಉಪದೇಶಗಳ ಮೂಲಕ ಲಭಿಸಿರುವ ಜ್ಞಾನವಿಲ್ಲದೆ ಜ್ಞಾನರಹಿತನಾಗಿರುವವನೂ ಉಪದೇಶಿಸಲ್ಪಟ್ಟಿರುವ ಜ್ಞಾನವೃದ್ಧಿಯಲ್ಲಿ ಶ್ರದ್ಧೆಯಿಲ್ಲದೆ ತ್ವರೆಯಿಲ್ಲದವನೂ ಮತ್ತು ಉಪ ದೇಶಿಸಲ್ಪಟ್ಟಿರುವ ಜ್ಞಾನದಲ್ಲಿ ಸಂಶಯದಿಂದ ಕೂಡಿದ ಮನಸ್ಸುಳ್ಳ ವನೂ ನಾಶ ಹೊಂದುವನು. ಈ ಆತ್ಮಯಥಾರ್ಥ ಸ್ವರೂಪ ವಿಷ ಯವಾಗಿ ಉಪದೇಶಿಸಿರುವ ಜ್ಞಾನದಲ್ಲಿ ಸಂಶಯವುಳ್ಳವನಿಗೆ ಈ ಪ್ರಾಕೃತ ಲೋಕವೂ ಇಲ್ಲ ಮತ್ತು ಪರಲೋಕವೂ ಇಲ್ಲ. ಅಂದರೆ ಪ್ರಕೃತ ಲೋಕ ಪುರುಷಾರ್ಥಗಳಾದ ಧರ್ಮ ಅರ್ಥ ಕಾಮಾದಿ ಪುರುಷಾರ್ಥಗಳೂ ಲಭಿಸುವುದಿಲ್ಲ. ಇನ್ನೂ ಮೋಕ್ಷ ಪುರುಷಾರ್ಥ ಹೇಗೆ ಲಭಿಸೀತು ಎಂದು ಅರ್ಥ. ಸಮಸ್ತ ಪುರುಷಾರ್ಥಗಳೂ ಶಾಸ್ತ್ರೀಯ ಕರ್ಮಾನುಷ್ಠಾನದಿಂದ ಲಭಿಸತಕ್ಕದಾಗಿವೆ. ಆದರೆ ಶಾಸ್ತ್ರೀಯ ಕರ್ಮಗಳು ಸಿದ್ಧಿಸಬೇಕಾದರೆ ಆತ್ಮನು ದೇಹಾತಿರಿಕ್ತನು ಎಂಬ ನಿಶ್ಚಯ ಜ್ಞಾನದಿಂದಲೇ ಕರ್ಮಮಾಡಬೇಕು. ಆದ್ದರಿಂದ ದೇಹಾತಿರಿಕ್ತನಾದ ಆತ್ಮನ ಇರುವಿಕೆಯಲ್ಲಿ ಸಂಶಯಪಡುವವನಿಗೆ ಅತ್ಯಲ್ಪ ಸುಖಾನುಭವವೂ ಉಂಟಾಗುವುದಿಲ್ಲ (ಯಾವ ಪುರು ಷಾರ್ಥವೂ ಲಭಿಸುವುದಿಲ್ಲ).

### ಶ್ಲೋಕ 41

''ಯೋಗದಿಂದ ಬಿಡಲ್ಪಟ್ಟ ಕರ್ಮವುಳ್ಳ, (ಅಂದರೆ ಕರ್ಮದಲ್ಲಿ ರುವ ಕರ್ಮಾಂಶಕ್ಕಿಂತ ಜ್ಞಾನಾಂಶಕ್ಕೆ ಪ್ರಧಾನತೆ ಕೊಟ್ಟು ಜ್ಞಾನ ಕಾರತೆಯುಳ್ಳ ಕರ್ಮಯೋಗವುಳ್ಳ) ಜ್ಞಾನದಿಂದ ಕತ್ತರಿಸಲ್ಪಟ್ಟ ಸಂಶಯವುಳ್ಳ ಮತ್ತು ದೃಢವಾದ ಮನಸ್ಸುಳ್ಳ ಪುರುಷನನ್ನು ಕರ್ಮ ಗಳು ಬಂಧಿಸುವುದಿಲ್ಲ'' ಮೇಲೆ ಉಪದೇಶಿಸಿರುವ ಕರ್ಮಯೋಗದ ಮೂಲಕ ಯಾರು ಕರ್ಮವನ್ನು ತ್ಯಾಗಮಾಡಿದ್ದಾನೆಯೋ ಅಂದರೆ ಕರ್ಮದಲ್ಲಿರುವ ಕತೃತ್ವಜ್ಞಾನ ಮತ್ತು ಅದರ ಫಲದಲ್ಲಿ ಇರುವ ಆಸಕ್ತಿ ಇವುಗಳನ್ನು ತ್ಯಾಗಮಾಡಿ ಜ್ಞಾನಾಕಾರತೆಯುಳ್ಳ ಕರ್ಮ ಯೋಗವನ್ನು ಆಚರಿಸುವವನನ್ನು, ಉಪದೇಶಿಸಲ್ಪಟ್ಟ ಆತ್ಮ ಜ್ಞಾನದಿಂದ ಆತ್ಮವಿಷಯದಲ್ಲಿ ನಿವೃತ್ತವಾದ ಸಂಶಯವುಳ್ಳವನನ್ನು ಮತ್ತು ಉಪದೇಶಿಸಲ್ಪಟ್ಟ ವಿಷಯದಲ್ಲಿ ದೃಢವಾದ ನಂಬಿಕೆಯಿಂದ ಕೂಡಿದ ಮನಸ್ಸುಳ್ಳವನನ್ನು ಬಂಧಕ್ಕೆ ಕಾರಣಗಳಾದ ಪ್ರಾಚೀನ ವಾದ ಅನಂತ ಕರ್ಮಗಳು ಬಂಧಿಸಲಾರವು.

### ಶ್ಲೋಕ 42

''ಆದ್ದರಿಂದ ಅಜ್ಞಾನದಿಂದ ಉಂಟಾದ ಹೃದಯದಲ್ಲಿರುವ ಈ ಸಂಶಯವನ್ನು ಆತ್ಮಜ್ಞಾನವೆಂಬ ಶಕ್ತಿಯಿಂದ ಕತ್ತರಿಸಿ ಕರ್ಮ ಯೋಗವನ್ನು ಆಚರಿಸುವವನಾಗು ಅರ್ಜುನನೇ ಎದ್ದೇಳು''

ಆದ್ದರಿಂದ ಎಲೈ ಅರ್ಜುನನೇ ಅನಾದಿ ಕಾಲದಿಂದಲೂ ಅಜ್ಞಾನದಿಂದ ಉಂಟಾಗಿ ದಿನ್ನ ಹೃದಯದಲ್ಲಿರುವ ಆತ್ಮ ವಿಷಯ ವಾದ ಈ ಸಂಶಯವನ್ನು ನಾನು ಇಲ್ಲಿಯವರೆಗೂ ಉಪದೇಶಿಸಿರುವ ಆತ್ಮ ವಿಷಯ ಜ್ಞಾನವೆಂಬ ಕತ್ತಿಯಿಂದ ಕತ್ತರಿಸಿ, ನಾನು ಇಲ್ಲಿ ಉಪದೇಶಿಸಿರುವ ಕರ್ಮಯೋಗವನ್ನು ಅನುಷ್ಠಿಸು ; ಅದಕ್ಕಾಗಿ ಅರ್ಜುನನೇ ಎದ್ದು ಸಿದ್ಧನಾಗು ಎಂದು ಶ್ರೀ ಕೃಷ್ಣನು ಅರ್ಜುನ ನನ್ನು ಯುದ್ಧ ಮಾಡಲು ಪ್ರೇರಿಪಿಸುತ್ತಾನೆ

ಗೀತೆಯ ಉಪದೇಶ ಪ್ರಾರಂಭವಾಗಿರುವುದೇ ಅರ್ಜುನನ ಸಂಶಯ ನಿವೃತ್ತಿಗಾಗಿ ಮತ್ತು ಅವನಲ್ಲಿ ಉದ್ಭವವಾಗಿರುವ ಮೋಹನಾಶಕ್ಕಾಗಿ ,ಆದ್ದರಿಂದ ಪರಮಾತ್ಮ ಇಲ್ಲಿ ಅರ್ಜುನನಿಗೆ ಮೊದಲು ಆತ್ಮ ಸ್ವರೂಪ ಜ್ಞಾನವನ್ನು ಉಪದೇಶಮಾಡಿ, ಅನಂತರ ಆ ಜ್ಞಾನದ ಮೂಲಕ ಅವನ ಹೃದಯದಲ್ಲಿರುವ ಸಂಶಯಗಳನ್ನೆಲ್ಲಾ ಹೋಗಲಾಡಿಸಿಕೊಂಡು, ಸ್ವಧರ್ಮವಾದ ಯುದ್ಧವನ್ನು ಕರ್ಮಯೋಗವಾಗಿ ಮಾಡಲು ಸಿದ್ಧನಾಗುವಂತೆ ಹೇಳುತ್ತಾನೆ

**ಈ ಅಧ್ಯಾಯದ ಸಾರಾಂಶ**—ನಾಲ್ಕನೇ ಅಧ್ಯಾಯ ದಲ್ಲಿ ಮುಖ್ಯವಾಗಿ 5 ವಿಷಯಗಳಿಗೆ.

### 1) ಕರ್ಮ ಯೋಗದ ಪರಮ ಪ್ರಾಚೀನತೆ —
(ಶ್ಲೋಕಗಳು 1 ರಿಂದ 3)

ಈ ಕರ್ಮ ಯೋಗವನ್ನು ಬಹಳ ಹಿಂದಿನ ಕಾಲದಲ್ಲಿ ಭಗವಂತನೇ ಸೂರ್ಯನಿಗೆ ಉಪದೇಶ ಮಾಡಿದ್ದಾಗಿಯೂ, ಸೂರ್ಯನು ಅದನ್ನು ತನ್ನ ಮಗನಾದ ಮನುವಿಗೂ, ಮನುವು ಇಕ್ವಾಕುವಿಗೂ ಕ್ರಮವಾಗಿ ಉಪದೇಶ ಮಾಡಿದ್ದಾರೆಂದೂ, ಹೀಗೆ ಪರಂಪರೆಯಾಗಿ ಹಿಂದೆಯೇ ಈ ಯೋಗವು ಉಪದೇಶಿಸಲ್ಪಟ್ಟಿದೆ ಎಂದೂ, ಈಗ ಈ ಉತ್ತಮವಾದ ಯೋಗವನ್ನು ಅರ್ಜುನನಿಗೆ ತಾನು ಉಪ ದೇಶಿಸುತ್ತಿರುವುದಾಗಿಯೂ ಶ್ರೀ ಕೃಷ್ಣ ಪರಮಾತ್ಮ ಹೇಳಿದ್ದಾನೆ·

### 2) ಭಗವದವತಾರಗಳ ಮಹಿಮೆ :—
(ಶ್ಲೋಕಗಳು 4 ರಿಂದ 11)

ಪ್ರಾಸಂಗಿಕವಾಗಿ ಇಲ್ಲಿ ಭಗವದವತಾರಗಳ ಉದ್ದೇಶ, ಕಾಲ ಮತ್ತು ಫಲಗಳ ವಿಷಯವು ತಿಳಿಸಿದೆ ಇದರ ಸಾರಾಂಶ ಮೇಲೆಯೇ ತಿಳಿಸಿ ಆಗಿದೆ

### 3) ಕರ್ಮಯೋಗದ ಜ್ಞಾನಾಕಾರತೆಯ ನಿರೂಪಣೆ :—
(ಶ್ಲೋಕಗಳು 12 ರಿಂದ 24)

(1) ಕರ್ಮಯೋಗವನ್ನು ಅನುಷ್ಠಿಸುವ ಅಧಿಕಾರಿಗಳ ದುರ್ಲಭತೆ ಬಹುಮಂದಿ ಮಾನವರು ಫಲಾಸಕ್ತರಾಗಿರುವುದರಿಂದ ಫಲಗಳನ್ನು ಶೀಘ್ರವಾಗಿ ಹೊಂದುವುದಕ್ಕಾಗಿ ಇಂದ್ರಾದಿ ದೇವತೆ ಗಳನ್ನು ಪೂಜಿಸುತ್ತಾರೆ, ಮೋಕ್ಷಾರ್ಥಿಗಳಾಗಿ ಭಗವದಾರಾಧನ ರೂಪವಾಗಿ ಕರ್ಮಯೋಗವನ್ನು ಆಚರಿಸುವವರು ಬಹಳ ವಿರಳ

(11) ಕರ್ಮಯೋಗಕ್ಕೆ ವಿರೋಧಿಗಳಾದ ಪಾಪಗಳನ್ನು ನಾಶ ಪಡಿಸುವ ಮಾರ್ಗ–ಪರಮಾತ್ಮನು ಮಾನವರ ಸೃಷ್ಟಿಗೆ ಮಾತ್ರ ಕಾರಣನೆಂದೂ, ಸೃಷ್ಟಿ ವೈಚಿತ್ರ್ಯಕ್ಕೆ ಜೀವಾತ್ಮರೇ ಪ್ರಧಾನ ಕಾರಣರೆಂದೂ ತಿಳಿದು ಚೇತನನು ಕರ್ಮ ಮಾಡಿದರೆ ಕರ್ಮಯೋಗ ವಿರೋಧಿಗಳಾದ ಪಾಪಗಳಿಂದ ಮುಕ್ತನಾಗುತ್ತಾನೆ

(111) **ಕರ್ಮ ಯೋಗದ ದುರವಗಾಹತ್ವ** — ಕರ್ಮ ಯೋಗವನ್ನು ತಿಳಿಯುವುದು ಬಹಳ ಕಷ್ಟ ಅನುಷ್ಠಿಸಬೇಕಾದ ಕರ್ಮ ಮತ್ತು ಅದರಲ್ಲಿ ಅಂತರ್ಗತವಾಗಿರುವ ಜ್ಞಾನ (ಅಕರ್ಮ),

ಈ ಎರಡು ವಿಷಯಗಳ ಸ್ವರೂಪವನ್ನು ತಿಳಿಯುವುದು ವಿದ್ವಾಂಸರಿಗೂ ಬಹಳ ಕಷ್ಟ. ಕರ್ಮಯೋಗಿಯು ಕರ್ಮ, ಅಕರ್ಮ ಮತ್ತು ವಿಕರ್ಮ ಎಂಬ ಮೂರು ಪದಗಳ ಅರ್ಥವನ್ನು ಚೆನ್ನಾಗಿ ತಿಳಿಯಬೇಕು. ಕರ್ಮ ಎಂದರೆ ಮೋಕ್ಷ ಸಾಧನ ಭೂತವಾದ ಕರ್ಮಾನುಷ್ಠಾನ. ಅಕರ್ಮ ಎಂದರೆ ಕರ್ಮದಲ್ಲಿ ಅಂತರ್ಗತವಾಗಿರುವ ಜ್ಞಾನಾಂಶ; ವಿಕರ್ಮ ಎಂದರೆ ಕರ್ಮಕ್ಕೆ ಸಾಧನವಾದ ದ್ರವ್ಯಾರ್ಜನೆ ಮೊದಲಾದ ಇತರ ವಿಧವಿಧವಾದ ಕರ್ಮಗಳು.

(IV) **ಕರ್ಮಯೋಗದ ಜ್ಞಾನಾಕಾರತೆ** – ಜಗತ್ತಿನಲ್ಲಿರುವ ಸರ್ವಮಾನವರೂ ಸರ್ವದಾ ಕರ್ಮ ಮಾಡುತ್ತಿರುವರು. ಜನಸಾಮಾನ್ಯರು ಕರ್ಮ ಮಾಡುವಾಗ ಕರ್ಮ ಮಾಡುವವರು ತಾನೇ ಎಂದೂ, ತಾವು ಮಾಡುತ್ತಿರುವ ಕರ್ಮ ತಮ್ಮದೇ ಎಂದೂ ಮತ್ತು ಆ ಕರ್ಮದಿಂದ ಲಭಿಸುವ ಫಲ ತಮಗೇ ಸೇರಿದ್ದೆಂದೂ ತಿಳಿದು ಕರ್ಮದ ಕರ್ತೃ ತಾನು ಎಂಬ ಅಹಂಕಾರವನ್ನೂ, ಕರ್ಮದಲ್ಲಿ ಮಮತೆಯನ್ನೂ ಮತ್ತು ಕರ್ಮ ಫಲದಲ್ಲಿ ಆಸಕ್ತಿಯನ್ನೂ ಪಡೆದು ಅಹಂಕಾರ ಮಮಕಾರಯುತರಾಗಿ ಕರ್ಮ ಮಾಡುತ್ತಾರೆ. ಇದರಿಂದ ಅವರು ಕರ್ಮ ಬಂಧನಕ್ಕೆ ಒಳಗಾಗುತ್ತಾರೆ. ಆದ್ದರಿಂದ ಕರ್ಮಗಳನ್ನು ಕರ್ಮಯೋಗವಾಗಿ ಮಾಡು, ಆಗ ನೀನು ಕರ್ಮ ಬಂಧನದಿಂದ ಪಾರಾಗುವೆ ಎಂದು ಶ್ರೀ ಕೃಷ್ಣ ಪರಮಾತ್ಮ 2 ಮತ್ತು 3 ನೇ ಅಧ್ಯಾಯಗಳಲ್ಲಿಯೇ ಉಪದೇಶಿಸಿದ್ದಾನೆ. ಅಂದರೇನು ನೀನು ಕರ್ಮ ಮಾಡುವಾಗ ನಿನ್ನ ಮನಸ್ಸಿನಲ್ಲಿರುವ ದೃಷ್ಟಿಯನ್ನು ಬದಲಾಯಿಸಿಕೊಳ್ಳಬೇಕು. ನೀನು ನಿತ್ಯನಾದ ಶಾಶ್ವತನಾದ ಜ್ಞಾನ ಸ್ವರೂಪನಾದ ಜೀವಾತ್ಮನೇ ಹೊರತು, ಈ ನಶ್ವರನಾದ ಪ್ರಾಕೃತಿಕ ಶರೀರವಲ್ಲ—ಎಂದು ಶ್ರೀ ಕೃಷ್ಣ ಮೊಟ್ಟ ಮೊದಲು ಎರಡನೇ ಅಧ್ಯಾಯದಲ್ಲಿ ವಿವರಿಸಿದ್ದಾನೆ. ಜೀವಾತ್ಮನಾದ ನೀನು ಕರ್ಮಕ್ಕೆ ಕರ್ತೃವಲ್ಲ, ಪ್ರಕೃತಿ ಸಂಬಂಧದಿಂದ ನಿನ್ನಲ್ಲಿರುವ ಸತ್ತ್ವ ರಜಸ್ತಮೋಗುಣಗಳು ನಿನ್ನಿಂದ ಕರ್ಮ ಮಾಡಿಸುತ್ತವೆ ಮತ್ತು ನಿನ್ನಲ್ಲಿ ಅಂತರಾತ್ಮನಾಗಿರುವ ಪರಮಾತ್ಮನೂ ನಿನ್ನಿಂದ ನಿನ್ನ ವಾಸನೆಗಳಿಗೆ ಅನುಗುಣವಾಗಿ ಕರ್ಮಮಾಡಿಸುತ್ತಾನೆ, ನೀನು ತ್ರಿಗುಣಗಳ ವಶವರ್ತಿಯಾಗಿದ್ದರೆ ಅವು ನಿನ್ನನ್ನು ಕಾಮ್ಯ ಕರ್ಮಗಳಲ್ಲಿ ಪ್ರವರ್ತಿಸುವಂತೆ ಮಾಡಿ ನಿನ್ನಲ್ಲಿ ಅಹಂಕಾರ ಮಮಕಾರಾದಿಗಳನ್ನು ಹೆಚ್ಚು ಹೆಚ್ಚಾಗಿ ಬೆಳೆಸಿ ನಿನ್ನನ್ನು ಕರ್ಮ ಬಂಧಕ್ಕೆ ಒಳಪಡಿಸುತ್ತವೆ. ಆದ್ದರಿಂದ ನೀನು ನಿನಗೆ ಅಂತರಾತ್ಮನಾಗಿ ನಿನ್ನನ್ನು ನಿಯಮಿಸುತ್ತಿರುವ ಪರಮಾತ್ಮನ ಕಡೆಗೆ ನಿನ್ನ ಮನಸ್ಸನ್ನು ತಿರುಗಿಸಿ ಯಜ್ಞಾರ್ಥವಾಗಿ ಅಂದರೆ ನೀನು ಮಾಡುವ ಕರ್ಮಗಳನ್ನು ಪರಮಾತ್ಮನ ಆರಾಧನೆಯೆಂದು ಭಾವಿಸಿ ಕರ್ಮಮಾಡು, ಈ ರೀತಿ ಪರಮಾತ್ಮನ ದಾಸನಂತೆ ಕರ್ಮ ಮಾಡುವುದರಿಂದ ಕರ್ಮವೂ, ಕರ್ಮದ ಫಲವೂ ಪರಮಾತ್ಮನಿಗೆ ಸೇರಿದ್ದೇ ಹೊರತು ನಿನಗೆ ಸೇರಿದ್ದಲ್ಲ ಎಂಬ ಜ್ಞಾನ ಹುಟ್ಟಿ ನೀನು ಎಂದೂ ಯಾವುದೇ ಕರ್ಮವನ್ನೂ ಮಾಡಲಾರೆ ಮತ್ತು ನೀನು ಮಾಡುವ ಕರ್ಮವೆಲ್ಲವೂ ಪವಿತ್ರವಾಗುವುದು. ಹೀಗೆ ಅಕರ್ತೃತ್ವಾನುಸಂಧಾನದೊಂದಿಗೆ, ಫಲಾಸಕ್ತಿರಹಿತನಾಗಿ, ಭಗವದಾರಾಧನ ರೂಪವಾಗಿ ಕರ್ಮ ಮಾಡುವುದೇ ಕರ್ಮಯೋಗವು ಎಂದು 3 ನೇ ಅಧ್ಯಾಯದಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ.

ಈಗ 4 ನೇ ಅಧ್ಯಾಯದಲ್ಲಿ ಅದೇ ವಿಷಯವನ್ನು ಮುಂದುವರೆಸಿ ವಿವರಿಸಿದ್ದಾನೆ. ಕರ್ಮದಲ್ಲಿ ಕರ್ಮಾಂಶ ಮತ್ತು ಜ್ಞಾನಾಂಶ ಎಂದು ಎರಡು ಅಂಶಗಳಿವೆ. ಅದನ್ನೇ ಕರ್ಮ, ಅಕರ್ಮ ಎಂದು ಕರೆದಿದ್ದಾರೆ. ಕರ್ಮ ಮಾಡುವಾಗ ಈ ಎರಡು ಅಂಶಗಳನ್ನೂ ತಿಳಿದು ಕರ್ಮ ಮಾಡಬೇಕು. ಕರ್ತೃವಾದ ಪುರುಷನು ಕರ್ಮಕ್ಕೆ ಬೇಕಾದ ಸಲಕರಣೆಗಳೊಂದಿಗೆ ಮಾಡುವ ಕ್ರಿಯಾರೂಪವಾದ ಕರ್ಮಾನುಷ್ಠಾನವೇ ಕರ್ಮದಲ್ಲಿರುವ ಕರ್ಮಾಂಶ. ಇದನ್ನೇ **ಕರ್ಮ** ಎಂದೂ ಕರೆದಿದ್ದಾರೆ. ಈ ಕರ್ಮವು ದ್ರವ್ಯಾರ್ಜನೆ ಮುಂತಾಗಿ ವಿಧ ವಿಧವಾದ ಇತರ ಕರ್ಮಗಳಿಂದ ಕೂಡಿರುವುದರಿಂದ ಆ ವಿಧ ವಿಧವಾದ ಇತರ ಕರ್ಮಗಳನ್ನು **ವಿಕರ್ಮ** ಎಂದು ಕರೆದಿದ್ದಾರೆ. ಕಾಮ್ಯ ಕರ್ಮಗಳಲ್ಲಿ ತೊಡಗಿರುವವನ ಕರ್ಮ ವಿಕರ್ಮಗಳೆಲ್ಲವೂ ಅನಂತ ಶಾಖೆಗಳುಳ್ಳದ್ದಾಗಿ ಅನಂತ ಫಲಗಳುಳ್ಳದ್ದಾಗಿ ಅನಂತವಾಗಿರುವುವು. ಆದರೆ ಮುಮುಕ್ಷುವಾದ ಕರ್ಮಯೋಗಿಯು ಮಾಡುವ ಕರ್ಮ ವಿಕರ್ಮಗಳೆಲ್ಲವೂ ಒಂದೇ ಆದ ಮೋಕ್ಷ ಸಾಧನ ಭೂತವಾದ ಕರ್ಮಾನುಷ್ಠಾನವಾಗಿರಬೇಕು ಎಂದು ಹಿಂದೆಯೇ ತಿಳಿಸಿದೆ. ಕರ್ಮದಲ್ಲಿ ಅಂತರ್ಗತವಾಗಿರುವ ಜ್ಞಾನಾಂಶವೇ ಎರಡನೆಯದಾದ **ಅಕರ್ಮ** (ಜ್ಞಾನ) ಎಂಬುದು. ಕರ್ತೃವಾದ ಪುರುಷನು ಕರ್ಮ ಮಾಡುವಾಗ ಯಾವ ದೃಷ್ಟಿಯಿಂದ ಕರ್ಮ ಮಾಡುತ್ತಾನೆ, ಅವನ ಮನೋಭಾವನೆ ಏನಿರುತ್ತದೆ. ಎಂಬುದೇ ಕರ್ಮದಲ್ಲಿರುವ ಜ್ಞಾನಾಂಶ. ಕರ್ಮಯೋಗಿಯ ಈ ಜ್ಞಾನಾಂಶವು ಕೇವಲ ಅಹಂಕಾರ ಮಮಕಾರಗಳಿಂದ ಕೂಡಿದುದಾಗಿರದೆ, ಅಕರ್ತೃತ್ವಾನುಸಂಧಾನಯುತವಾದುದಾಗಿಯೂ, ಫಲಾಭಿಸಂಧಿರಹಿತವಾದುದಾಗಿಯೂ ಇರಬೇಕು. ಅಂದರೇನು ಕರ್ಮಯೋಗಿಯು ಆತ್ಮನಾದ ತನ್ನ ಮತ್ತು ತನ್ನಲ್ಲಿ ಅಂತರಾತ್ಮನಾಗಿರುವ ಪರಮಾತ್ಮನ ನಿಜಸ್ವರೂಪ ಜ್ಞಾನಾನುಸಂಧಾನದೊಂದಿಗೆ ಕರ್ಮ ಮಾಡಬೇಕು. ಹೀಗೆ ಆತ್ಮ, ಪರಮಾತ್ಮ ಯಥಾರ್ಥ ಸ್ವರೂಪ ಜ್ಞಾನಾನುಸಂಧಾನದೊಂದಿಗೆ ಕರ್ಮ ಮಾಡುವುದರಿಂದ ಕರ್ಮಕ್ಕೆ

ಜ್ಞಾನಾಕಾರತೆ ಉಂಟಾಗುತ್ತದೆಯೆಂದು ಈ ನಾಲ್ಕನೇ ಅಧ್ಯಾಯ ದಲ್ಲಿ ಸ್ಪಷ್ಟವಾಗಿ ಹೇಳಿದೆ.

ಇಲ್ಲಿ ಎರಡು ವಿಧವಾದ ಜ್ಞಾನಾಕಾರತೆಯು ಹೇಳಲ್ಪಟ್ಟಿದೆ.

ಒಂದನೆಯದಾಗಿ ಕರ್ಮ ಮಾಡುವಾಗ ಆತ್ಮ ಯಥಾರ್ಥ ಸ್ವರೂಪ ಜ್ಞಾನಾನು ಸಂಧಾನದಿಂದ ಉಂಟಾಗುವ ಜ್ಞಾನಾಕಾರತೆ ಮತ್ತು ಎರಡನೇಯದು ಕರ್ಮ, ಕರ್ಮದ ಕರ್ತೃ, ಕರ್ಮಕ್ಕೆ ಬೇಕಾದ ಸಲಕರಣೆ, ಕರ್ಮದ ಫಲ ಮುಂತಾಗಿ ಸಮಸ್ತವೂ ಬ್ರಹ್ಮಾತ್ಮಕ ವಾದುದು ಎಂಬ ಜ್ಞಾನಾನುಸಂಧಾನದಿಂದ ಉಂಟಾಗುವ ಜ್ಞಾನಾಕಾರತೆ

## 4) ಕರ್ಮಯೋಗದ ಪ್ರಭೇದಗಳ ವರ್ಣನೆ— (ಶ್ಲೋಕಗಳು 25 ರಿಂದ 32)

ಯಾಗ ಯಜ್ಞಗಳು, ದೇವತಾರಾಧನೆ, ಭಗವದಾರಾಧನೆ, ಇಂದ್ರಿಯ ನಿಗ್ರಹ, ಮನೋ ನಿಗ್ರಹ, ಸತ್ಕಾರ್ಯಕ್ಕಾಗಿ ದ್ರವ್ಯಾರ್ಜನೆ, ವ್ರತನಿಯಮಾನುಷ್ಠಾನಗಳು, ಪುಣ್ಯತೀರ್ಥ ಪುಣ್ಯಕ್ಷೇತ್ರ ಯಾತ್ರೆ, ಸ್ವಾಧ್ಯಾಯ, ಜ್ಞಾನಾರ್ಜನೆ, ಪೂರಕ ಕುಂಭಕ ರೇಚಕ ಮುಂತಾದ ಪ್ರಾಣಾಯಾಮ ಅಭ್ಯಾಸಗಳು, ಇನ್ನೇ ಮುಂತಾದು ವುಗಳೆಲ್ಲವೂ ಕರ್ಮಯೋಗದ ಅನೇಕ ವಿಧವಾದ ಅಭ್ಯಾಸಗಳು ಇವುಗಳಲ್ಲಿ ಒಂದೊಂದನ್ನೂ ಜಿತೇಂದ್ರಿಯರಾಗಿ, ದೃಢಸಂಕಲ್ಪ ವುಳ್ಳವರಾಗಿ, ಶ್ರದ್ಧೆಯಿಂದಲೂ, ನಿಷ್ಠೆಯಿಂದಲೂ, ಯಜ್ಞಾರ್ಥ ವಾಗಿ, ಕರ್ಮಯೋಗದ ಎರಡು ವಿಧವಾದ ಜ್ಞಾನಾಕಾರತೆಯೊಂದಿಗೆ ಅಂದರೆ ಫಲಸಂಗ, ಕರ್ತೃತ್ವ ಜ್ಞಾನರಹಿತನಾಗಿ ಭಗವದಾರಾಧನ ರೂಪವಾಗಿ ಅನುಷ್ಠಿಸುವುದೇ ಕರ್ಮಯೋಗವು ಈ ಕರ್ಮ ಯೋಗವು ಪಾಪಗಳನ್ನು ನಾಶಮಾಡಿ ಆತ್ಮ ಸಾಕ್ಷಾತ್ಕಾರವನ್ನು ಸಾಧಿಸಿ ಕೊಡುತ್ತದೆ ಮತ್ತು ತನ್ಮೂಲಕ ಭಗವಂತನಲ್ಲಿ ಭಕ್ತಿಯು ಪ್ರಾಪ್ತವಾಗಿ ಭಗವಂತನನ್ನು ಹೊಂದಲು ಮಾರ್ಗವಾಗುತ್ತದೆ ಮುಖ್ಯವಾಗಿ ತಿಳಿಯಬೇಕಾದ ಅಂಶವೇನೆಂದರೆ ನೀನು ಪ್ರತಿ ನಿತ್ಯವೂ, ಪ್ರತಿಕ್ಷಣವೂ ಅನುಷ್ಠಿಸುತ್ತಿರುವ ನಿತ್ಯ ನೈಮಿತ್ತಿಕ ಕರ್ಮಗಳೆಲ್ಲವನ್ನೂ ಮೇಲೆ ಉಪದೇಶಿಸಿರುವಂತೆ ಕರ್ಮಯೋಗವಾಗಿ ಅನುಷ್ಠಿಸಿದರೆ ನೀನು ಮುಕ್ತನಾಗಿ ಪರಮಾತ್ಮನನ್ನು ಹೊಂದು ತ್ತೀಯೆ ಎಂಬುದೇ ಶ್ರೀ ಕೃಷ್ಣನ ಉಪದೇಶದ ಸಾರಾಂಶ

## 5) ಕರ್ಮಯೋಗದಲ್ಲಿರುವ ಜ್ಞಾನಾಕಾರದ ಪ್ರಧಾನತೆಯ ನಿರೂಪಣೆ.—(ಶ್ಲೋಕಗಳು 33 ರಿಂದ 42)

ಕರ್ಮಕ್ಕೆ ಎರಡು ವಿಧವಾದ ಆಕಾರಗಳುಂಟು ಒಂದು ಕ್ರಿಯಾರೂಪವಾದ ಆಕಾರ ಮತ್ತೊಂದು ಆ ಕ್ರಿಯೆಯನ್ನು ಮಾಡುವಾಗ ಅದರಲ್ಲಿ ಅಡಗಿರುವ ಜ್ಞಾನಾಕಾರತೆ ಇವೆರಡರಲ್ಲಿ ಕರ್ಮದ ಕ್ರಿಯಾ ಭಾಗಕ್ಕಿಂತ ಅದರಲ್ಲಿ ಅಂತರ್ಗತವಾಗಿರುವ ಆತ್ಮ ಸ್ವರೂಪಾನುಸಂಧಾನ ರೂಪವಾದ ಜ್ಞಾನ ಭಾಗಕ್ಕೆ ಹೆಚ್ಚು ಪ್ರಧಾನ್ಯತೆ ಕೊಡಬೇಕು. ಆದರೆ ಈ ಆತ್ಮ ಸ್ವರೂಪ ಜ್ಞಾನ ಲಭಿಸುವುದು ಬಹಳ ಕಷ್ಟ ಆತ್ಮ ಸಾಕ್ಷಾತ್ಕಾರ ಹೊಂದಿರುವ ಗುರುವಿನಿಂದ ಪ್ರಣಿಪಾತ ಪರಿಪ್ರಶ್ನ ಸೇವಾದಿಗಳ ಮೂಲಕ ಉಪದೇಶ ಪಡೆಯಬೇಕು. (ಅಂತಹ ಗುರುಗಳು ಲಭಿಸದಿದ್ದರೆ ಅವರು ಬರೆದಿರುವ ಪವಿತ್ರ ಗ್ರಂಥಗಳನ್ನು ಶ್ರದ್ಧಾಭಕ್ತಿ ವಿಶ್ವಾಸ ಗಳಿಂದ ಚೆನ್ನಾಗಿ ಓದಿ ವಿಮರ್ಶಿಸಿ ತಿಳಿಯಬೇಕು) ಆತ್ಮ ಸ್ವರೂಪ ಜ್ಞಾನ ಲಭಿಸಿದ ಮೇಲೆ ಚೇತನನಿಗೆ ಮತ್ತೆ ದೇಹವೇ ಆತ್ಮನೆಂಬ ಭ್ರಮೆಯಾಗಲಿ. ಮಮತಾದಿ ಮೋಹವಾಗಲಿ ಹುಟ್ಟುವುದಿಲ್ಲ ಮತ್ತು ಪ್ರಕೃತಿ ಸಂಬಂಧದಿಂದ ಬಿಡಲ್ಪಟ್ಟ ಸಮಸ್ತ ಚೇತನ ವರ್ಗವೂ ಜ್ಞಾನಾಕಾರತೆಯಿಂದ ತನ್ನ ಆತ್ಮನಿಗೆ ಸಮರೆಂದೂ ಮತ್ತು ಪರಿಶುದ್ಧ ಆತ್ಮಸ್ವರೂಪನಾದ ತಾನೂ ಮತ್ತು ಇತರ ಎಲ್ಲಾ ಚೇತನರೂ ಜ್ಞಾನೈಕಾಕಾರತೆಯಿಂದ ಪರಮಾತ್ಮನ ಸ್ವರೂಪಕ್ಕೆ ಸಮರು ಎಂಬ ಜ್ಞಾನ ಹುಟ್ಟುತ್ತದೆ ಇಂತಹ ಆತ್ಮ ಸ್ವರೂಪ ಜ್ಞಾನವು ಬಹಳ ಪವಿತ್ರವಾದುದು ಇದರಿಂದ ಸಮಸ್ತ ಪ್ರಾಚೀನ ಪಾಪಗಳೂ ಭಸ್ಮವಾಗಿ ನಾಶವಾಗುತ್ತವೆ ಆತ್ಮಜ್ಞಾನವೃದ್ಧಿಯಲ್ಲಿ ಶ್ರದ್ಧೆ ಹೊಂದಿ ಅದರಲ್ಲಿಯೇ ನಿಷ್ಠೆ ಮನಸ್ಸುಳ್ಳವನಾಗಿರುವವನು ಆ ಜ್ಞಾನ ಹೊಂದಿ ಪರಮ ಶಾಂತಿ ಪಡೆಯುವನು . ಅದರಲ್ಲಿ ಶ್ರದ್ಧೆಯಿಲ್ಲದವನಾಗಿ ಅದರಲ್ಲಿ ಸಂಶಯದಿಂದ ಕೂಡಿದ ಮನಸ್ಸುಳ್ಳ ವನು ನಾಶ ಹೊಂದುವನು ಅವನಿಗೆ ಇಹದಲ್ಲೂ ಪರದಲ್ಲೂ ಯಾವ ಪುರುಷಾರ್ಥವೂ ಲಭಿಸುವುದಿಲ್ಲ ; ಆದ್ದರಿಂದ ಅರ್ಜುನನೇ ನಾನು ಇಲ್ಲಿಯವರೆಗೆ ಉಪದೇಶಿಸಿರುವ ಆತ್ಮ ಸ್ವರೂಪಜ್ಞಾನದ ವಿಷಯದಲ್ಲಿ ಸಂಶಯ ಹೊಂದದೆ ಆತ್ಮಸ್ವರೂಪ ಜ್ಞಾನಾನು ಸಂಧಾನದೊಂದಿಗೆ ಕರ್ಮಯೋಗವನ್ನು ಆಚರಿಸುವುದೇ ನಿನಗೆ ಅತ್ಯುತ್ತಮವಾದ ಮಾರ್ಗ. ಆದ್ದರಿಂದ ಆತ್ಮಸ್ವರೂಪ ಜ್ಞಾನಾನು ಸಂಧಾನದೊಂದಿಗೆ ಕರ್ಮ ಮಾಡಲು ಎದ್ದೇಳು ಹೀಗೆ ಮಾಡಿದೆಯಾದರೆ ಕಾಲಕ್ರಮದಲ್ಲಿ ನಿನಗೆ ಆತ್ಮ ಸ್ವರೂಪ

ಸಾಕ್ಷಾತ್ಕಾರವಾಗಿ ನೀನು ಶಾಂತಿ ಹೊಂದುವೆ ಎಂದು ಶ್ರೀ ಕೃಷ್ಣ ಉಪದೇಶ ಮಾಡಿದ್ದಾನೆ-

ಒಟ್ಟಿನಲ್ಲಿ ಕರ್ಮದಲ್ಲಿ ಅಂತರ್ಗತವಾಗಿರುವ ಜ್ಞಾನಾಂಶದ ಪ್ರಧಾನತೆಯನ್ನು ತಿಳಿಸಿ, ಆತ್ಮ ಸ್ವರೂಪ ಯಥಾರ್ಥ ಜ್ಞಾನದ ಲಕ್ಷಣ ಮತ್ತು ಅದನ್ನು ಪಡೆಯುವ ಮಾರ್ಗವನ್ನು ತಿಳಿಸಿ, ಆತ್ಮ ಸ್ವರೂಪ ಜ್ಞಾನಾನು ಸಂಧಾನದಿಂದ ಸಮಸ್ತ ಪಾಪಗಳೂ ನಾಶವಾಗಿ ಕಾಲ ಕ್ರಮದಲ್ಲಿ ಆತ್ಮ ಸ್ವರೂಪ ಸಾಕ್ಷಾತ್ಕಾರವು ಪ್ರಾಪ್ತವಾಗಿ ಶಾಂತಿ ಲಭಿಸುವುದು ಎಂದು ಜ್ಞಾನದ ಮಹಾತ್ಮೆಯನ್ನು ವಿವರಿಸಿರುವುದರಿಂದ ಈ ಅಧ್ಯಾಯವನ್ನು ಜ್ಞಾನ ಯೋಗವೆಂದು ಕರೆದಿದ್ದಾರೆ.

## ಐದನೆಯ ಅಧ್ಯಾಯ

ಆತ್ಮ ಜ್ಞಾನವು ಕರ್ಮಯೋಗದಲ್ಲಿ ಅಂತರ್ಗತವಾಗಿರುವುದ ರಿಂದಲೂ, ಕರ್ಮಯೋಗವು ಪ್ರಮಾದ ರಹಿತವೂ, ಸುಖಕರವೂ ಆಗಿರುವುದರಿಂದಲೂ ಮತ್ತು ಅದಕ್ಕೆ ಇತರ ಸಾಧನಗಳ ಅಪೇಕ್ಷೆ ಇಲ್ಲದಿರುವುದರಿಂದಲೂ, ಜ್ಞಾನ ಯೋಗಾಧಿಕಾರಿಗೂ ಕೂಡ ಕರ್ಮಯೋಗಾನುಷ್ಠಾನವೇ ಶ್ರೇಷ್ಠವಾದುದು ಎಂದು ಮೂರನೆ ಅಧ್ಯಾಯದಲ್ಲಿ ಹೇಳಲ್ಪಟ್ಟಿತು! ನಾಲ್ಕನೇ ಅಧ್ಯಾಯ ದಲ್ಲಿ ಕರ್ಮಯೋಗದಲ್ಲಿರುವ ಜ್ಞಾನಾಕಾರತೆಯೂ, ಈ ಜ್ಞಾನಾ ಕಾರತೆಯಿಂದ ಕೂಡಿರುವ ಕರ್ಮಯೋಗದ ಸ್ವರೂಪ ಭೇದಗಳೂ, ಕರ್ಮಯೋಗದಲ್ಲಿರುವ ಜ್ಞಾನಾಂಶದ ಪ್ರಧಾನತೆಯೂ ಮತ್ತು ಆ ಜ್ಞಾನದ ಮಹಾತ್ಮೆಯೂ ಹೇಳಲ್ಪಟ್ಟಿತು ಈಗ ಈ ಐದನೇ ಅಧ್ಯಾಯದಲ್ಲಿ ಹಿಂದಿನ ಅಧ್ಯಾಯದಲ್ಲಿ ತಿಳಿಸಿರುವ ವಿಷಯಗಳೇ ಸ್ಪಷ್ಟವಾಗಿ ವಿವರಿಸಲ್ಪಟ್ಟಿವೆ ಆತ್ಮ ಪ್ರಾಪ್ತಿಯನ್ನು ಸಾಧಿಸಿ ಕೊಡುವುದರಲ್ಲಿ ಜ್ಞಾನ ಯೋಗಕ್ಕಿಂತ ಕರ್ಮಯೋಗವು ಸುಲಭ ವಾಗಿಯೂ ಸುಖಕರವಾಗಿಯೂ ಶೀಘ್ರಫಲಪ್ರದವಾಗಿಯೂ ಇದೆ ಎಂಬುದೂ. ಕರ್ಮಯೋಗದಲ್ಲಿ ಅಂತರ್ಗತವಾಗಿರುವ ತನಗೆ ಕರ್ತೃತ್ವವಿಲ್ಲನೆಂಬ ಅಕರ್ತೃತ್ವ ಅನುಸಂಧಾನ ಮೊದಲಾದ ಜ್ಞಾನಭಾಗದ ಅನುಸಂಧಾನ ಪ್ರಕಾರಗಳು ಮತ್ತು ಅದರಿಂದ ಉಂಟಾಗುವ ಜ್ಞಾನವೂ ಇಲ್ಲಿ ಚೆನ್ನಾಗಿ ವಿಮರ್ಶಿಸಲ್ಪಟ್ಟಿದೆ

**1) ಜ್ಞಾನಯೋಗಕ್ಕಿಂತ ಕರ್ಮಯೋಗವು ಸುಲಭ ವಾದುದು, ಸುಖಕರವಾದುದು ಮತ್ತು ಶೀಘ್ರ ಫಲಪ್ರದವಾದುದು** (ಶ್ಲೋಕಗಳು 1 ರಿಂದ 7)

**ಶ್ಲೋಕ 1**—"ಎಲೈ ಕೃಷ್ಣನೇ! ನೀನು ಕರ್ಮಗಳ ವ್ಯಾಪಾರ ರಹಿತವಾದ ಜ್ಞಾನ ಯೋಗವನ್ನೂ ಮತ್ತು ಕರ್ಮಗಳ ವ್ಯಾಪಾರವುಳ್ಳ ಕರ್ಮಯೋಗವನ್ನೂ ಪ್ರಶಂಸೆ ಮಾಡಿ ಉಪದೇಶಿ ಸಿರುತ್ತೀಯೆ ಇವೆರಡರಲ್ಲಿ ಯಾವುದೊಂದು ಶ್ರೇಯಸ್ಕರ ವಾದುದೋ ಅದನ್ನು ನನಗೆ ಹೇಳು" ಎಂದು ಅರ್ಜುನ ಪ್ರಶ್ನೆ ಮಾಡುತ್ತಾನೆ.

ಇಲ್ಲಿ "ಕರ್ಮಣಾಂ ಸನ್ಯಾಸಂ"—ಎಂಬುದಕ್ಕೆ ಜ್ಞಾನ ಯೋಗವೆಂದು ಅರ್ಥವೇ ವಿನಃ ಕರ್ಮಗಳ ತ್ಯಾಗವೆಂದು ಅರ್ಥವಲ್ಲ ಇಲ್ಲಿ ಅರ್ಜುನನ ಪ್ರಶ್ನೆ ಏನೆಂದರೆ—"ಮೊದಲು ಎರಡನೇ ಅಧ್ಯಾಯದಲ್ಲಿ ಮೋಕ್ಷಾರ್ಥಿಗಳು ಮೊದಲು ಕರ್ಮಯೋಗವನ್ನು ಮಾಡಬೇಕು, ಅದರಿಂದ ಅಂತಃಕರಣ ದೋಷಗಳು ನಷ್ಟವಾಗು ತ್ತವೆ, ಅನಂತರ ಜ್ಞಾನಯೋಗದಿಂದ ಆತ್ಮ ಸಾಕ್ಷಾತ್ಕಾರ ವುಂಟಾಗುತ್ತದೆ" ಎಂದು ಜ್ಞಾನಯೋಗವನ್ನು ಪ್ರಶಂಸಿಸಿ ಪ್ರತಿ ಪಾದಿಸಿದ್ದೀಯೆ ಆದರೆ ಮತ್ತೆ ಮೂರು, ನಾಲ್ಕನೇ ಅಧ್ಯಾಯಗಳಲ್ಲಿ "ಜ್ಞಾನಯೋಗಕ್ಕೆ ಅಧಿಕಾರಿಯಾಗಲು ಯೋಗ್ಯನಾದವನಿಗೂ ಕೂಡ ಕರ್ಮಯೋಗವೇ ಶ್ರೇಷ್ಠವಾದುದು, ಕರ್ಮಯೋಗವೇ ಆತ್ಮ ಪ್ರಾಪ್ತಿಗೆ ಬೇರೆ ಯಾವುದರ ಸಹಾಯವನ್ನು ಕೋರದೆ ನಿರಪೇಕ್ಷವಾ ದ ಸಾಧನವಾಗಿದೆ" ಎಂದು ಕರ್ಮಯೋಗವನ್ನು ಪ್ರಶಂಸೆ ಮಾಡಿದ್ದೀ ಯೆ ಆದ್ದರಿಂದ ಆತ್ಮಸಾಕ್ಷಾತ್ಕಾರಕ್ಕೆ ಜ್ಞಾನಯೋಗ ಕರ್ಮಯೋಗ ಇವೆರಡರಲ್ಲಿಯಾವುದೊಂದು ಸುಖಕರವಾದ, ಸುಲಭವಾದ,ಶೀಘ್ರ ಫಲಪ್ರದವಾದ ಶ್ರೇಷ್ಠ ಸಾಧನವೆಂದು ನಿಶ್ಚಯಿಸಲ್ಪಟ್ಟಿದೆ ಎಂಬು ದನ್ನು ನನಗೆ ಹೇಳು ಎಂದು ಕೇಳುತ್ತಾನೆ

**ಶ್ಲೋಕ 2**—"ಕರ್ಮಗಳನ್ನು ಬಿಡುವ ಜ್ಞಾನಯೋಗವೂ ಮತ್ತು ಕರ್ಮಗಳನ್ನು ಮಾಡುವ ಕರ್ಮಯೋಗವೂ ಎರಡೂ ಶ್ರೇಯಸ್ಸನ್ನು ಉಂಟುಮಾಡುವಂತಹವುಗಳಾಗಿವೆ ಅವೆರಡರಲ್ಲಿ ಕರ್ಮಗಳನ್ನು ಬಿಡುವ ಜ್ಞಾನಯೋಗಕ್ಕಿಂತ ಕರ್ಮಗಳನ್ನು ಆಚರಿಸುವ ಕರ್ಮಯೋಗವೇ ಶ್ರೇಷ್ಠವಾದುದು"

ಜ್ಞಾನಯೋಗಕ್ಕೆ ಯೋಗ್ಯನಾದ ಪುರುಷನಿಗೂ ಕೂಡ ಕರ್ಮಸನ್ಯಾಸವೆಂಬ ಜ್ಞಾನಯೋಗ ಮತ್ತು ಕರ್ಮಯೋಗ ಇವೆರಡೂ ಒಂದಕ್ಕೊಂದರ ಅಪೇಕ್ಷೆಇಲ್ಲದವುಗಳಾಗಿ ಶ್ರೇಯಸ್ಕರವಾದವುಗಳಾಗಿವೆ ಅಂದರೆ ಒಂದು ಇನ್ನೊಂದರ ಸಹಾಯವನ್ನಪೇಕ್ಷಿಸದೆಯೇ ಆತ್ಮಸಾಕ್ಷಾತ್ಕಾರವನ್ನು ಉಂಟುಮಾಡಬಲ್ಲವು. ಇವೆರಡರಲ್ಲಿ ಕರ್ಮಸನ್ಯಾಸರೂಪವಾದ ಜ್ಞಾನಯೋಗಕ್ಕಿಂತ ಕರ್ಮಯೋಗಾಭ್ಯಾಸವೇ ಶ್ರೇಷ್ಠವಾದುದು. ಇದಕ್ಕೆ ಕಾರಣವು ಮುಂದಿನ ಶ್ಲೋಕದಲ್ಲಿ ವಿವರಿಸಲ್ಪಟ್ಟಿದೆ

**ಶ್ಲೋಕ—3**

"ಅರ್ಜುನನೇ ! ಯಾವನು ಯಾವುದನ್ನೂ ದ್ವೇಷಿಸುವುದಿಲ್ಲವೋ, ಯಾವುದನ್ನೂ ಅಪೇಕ್ಷಿಸುವುದಿಲ್ಲವೋ ಅವನು ನಿತ್ಯವೂ (ಯಾವಾಗಲೂ) ಸನ್ಯಾಸಿ ಎಂದು ತಿಳಿಯತಕ್ಕವನು. ಏತಕ್ಕೆಂದರೆ ಸುಖದುಃಖಾದಿದ್ವಂದ್ವಗಳಿಂದ ರಹಿತನಾದ ಅವನು ಸುಖವಾಗಿ ಬಂಧನದಿಂದ ಚೆನ್ನಾಗಿ ಬಿಡುಗಡೆ ಹೊಂದುತ್ತಾನೆ"—

ಕರ್ಮಯೋಗಿಯು ಕರ್ಮಯೋಗದಲ್ಲಿ ಅಡಗಿರುವ ಆತ್ಮಸ್ವರೂಪ ಜ್ಞಾನಾನುಸಂಧಾನ ಅನುಭವದಲ್ಲಿ ತೃಪ್ತಿಯನ್ನು ಹೊಂದಿರುವವನಾಗಿಯೂ, ಅದಕ್ಕೆ ವ್ಯತಿರಿಕ್ತವಾದ (ಸಾಂಸಾರಿಕವಾದ) ಇತರ ಯಾವುದರಲ್ಲಿಯೂ ಆಸೆ ಇಲ್ಲದವನಾಗಿಯೂ ಇರುವನು ಮತ್ತು ಆ ಕಾರಣದಿಂದ ಯಾವುದರಲ್ಲಿಯೂ ದ್ವೇಷವಿಲ್ಲದವನಾಗಿಯೂ ಮತ್ತು ಆ ಕಾರಣದಿಂದಲೇ ಪ್ರಾಸಂಗಿಕ ಸುಖದುಃಖಾದಿ ದ್ವಂದ್ವಗಳನ್ನು ಸಹಿಸಿಕೊಳ್ಳಲು ಸಮರ್ಥನಾಗಿಯೂ ಇರುವನು. ಅಂತಹವನನ್ನು ನಿತ್ಯ ಸನ್ಯಾಸಿ ಅಂದರೆ ನಿತ್ಯಜ್ಞಾನನಿಷ್ಠನೆಂದು ತಿಳಿಯತಕ್ಕದ್ದು (ಅಂದರೆ ಅವನು ಶುದ್ಧವಾದ ಜ್ಞಾನನಿಷ್ಠೆಯಲ್ಲಿರುವವನಿಗಿಂತಲೂ ಯಾವ ವಿಧದಲ್ಲಿಯೂ ಕಡಿಮೆಯಾದವನಲ್ಲ). ಏತಕ್ಕೆಂದರೆ ಸುಖಕರವಾದ ತನ್ನ ಕರ್ಮಯೋಗ ನಿಷ್ಠೆಯ ಸಹಾಯದಿಂದ ಸುಲಭವಾಗಿ ಸಂಸಾರಬಂಧನದಿಂದ ಚೆನ್ನಾಗಿ ಬಿಡಲ್ಪಡುವನು.

**ಶ್ಲೋಕ—4**

ಆತ್ಮಸಾಕ್ಷಾತ್ಕಾರ ಸಾಧನವು ಜ್ಞಾನಯೋಗ ಮತ್ತು ಕರ್ಮಯೋಗಗಳು ಒಂದಕ್ಕೊಂದು ಪರಸ್ಪರವಾಗಿ ಅಪೇಕ್ಷೆಯಿಲ್ಲದೆಯೇ ಪ್ರತ್ಯೇಕವಾಗಿ ಸಾಧನವಾಗಿವೆ ಎಂದು ಇಲ್ಲಿ ಹೇಳಿದೆ

ಸಾಂಖ್ಯ (ಜ್ಞಾನಯೋಗ) ಮತ್ತು ಯೋಗ (ಕರ್ಮಯೋಗ) ಇವುಗಳನ್ನು ಬೇರೆ ಬೇರೆ ಎಂದು ಹೇಳುತ್ತಾರೆಯೋ ಅವರು ಬಾಲಕರು (ವಿವೇಕಜ್ಞಾನರಹಿತರು) ಪಂಡಿತರಲ್ಲ. ಇವೆರಡರಲ್ಲಿ ಯಾವುದಾದರೂ ಒಂದನ್ನು ಚೆನ್ನಾಗಿ ಅನುಷ್ಠಿಸಿದವನೂ ಕೂಡ ಇವೆರಡರ ಫಲವನ್ನು ಹೊಂದುತ್ತಾನೆ –

ಜ್ಞಾನಯೋಗ, ಕರ್ಮಯೋಗಗಳನ್ನು ಅವುಗಳ ಸಾಧನದಿಂದ ಬೇರೆ ಬೇರೆಯಾದವುಗಳೆಂದು ಹೇಳುವರು ಬಾಲಕರು ಅಂದರೆ ಜ್ಞಾನಶೂನ್ಯರು. ಸರಿಯಾದ ಜ್ಞಾನವುಳ್ಳವರಲ್ಲ ಮತ್ತು ಪಂಡಿತರಲ್ಲ ಅಂದರೆ ಸಮಸ್ತವನ್ನೂ ತಿಳಿದವರಲ್ಲ (ಸಂಪೂರ್ಣ ಜ್ಞಾನವನ್ನು ಪಡೆದವರಲ್ಲ) ಕರ್ಮಯೋಗವು ಜ್ಞಾನಯೋಗವನ್ನು ಸಾಧಿಸಿಕೊಡುತ್ತದೆ ಜ್ಞಾನಯೋಗ ಒಂದೇ ಆತ್ಮಸಾಕ್ಷಾತ್ಕಾರವನ್ನು ಸಾಧಿಸಿಕೊಡಲು ಸಮರ್ಥ ಎಂದು ಅವುಗಳಿಗೆ ಬೇರೆ ಬೇರೆ ಫಲಗಳನ್ನು ಹೇಳಿ, ಅವುಗಳ ಫಲಭೇದದಿಂದ ಅವು ಬೇರೆಬೇರೆಯಾದವುಗಳೆಂದು ಹೇಳುವವರೇ ಪಂಡಿತರಲ್ಲ ಎಂದು ಅಭಿಪ್ರಾಯ. ಇವೆರಡರಲ್ಲಿ ಯಾವುದಾದರೂ ಒಂದನ್ನು ಮಾತ್ರ ಅನುಷ್ಠಿಸಿದರೂ ತತ್ಫಲವಾಗಿ ಆತ್ಮಾವಲೋಕನವೆಂಬ ಒಂದೇ ಫಲವು ಲಭಿಸುತ್ತದೆ

**ಶ್ಲೋಕ—5**

ಮೇಲಿನ ಶ್ಲೋಕದ ಅಭಿಪ್ರಾಯವೇ ಮುಂದುವರೆಸಿ ವಿವರಿಸಲ್ಪಟ್ಟಿದೆ— ಸಾಂಖ್ಯಯೋಗಿ (ಜ್ಞಾನಯೋಗಿ)ಯಿಂದ ಯಾವ ಸ್ಥಾನವು (ಆತ್ಮಾವಲೋಕನವೆಂಬ ಫಲವು) ಹೊಂದಲ್ಪಡುತ್ತದೆಯೋ ಅದು ಕರ್ಮಯೋಗಿಯಿಂದಲೂ ಕೂಡ ಹೊಂದಲ್ಪಡುತ್ತದೆ

ಸಾಂಖ್ಯವನ್ನೂ, ಯೋಗವನ್ನೂ (ಜ್ಞಾನಯೋಗವನ್ನೂ, ಕರ್ಮ ಯೋಗವನ್ನೂ) ಯಾರು ಒಂದೇ ಎಂದು ನೋಡುತ್ತಾನೆಯೋ (ಒಂದೇ ಫಲ ಕೊಡುವಂತಹುದಾಗಿ ತಿಳಿಯುತ್ತಾನೆಯೋ) ಅವನು ಯಥಾರ್ಥವನ್ನು ನೋಡುತ್ತಾನೆ (ಸತ್ಯವನ್ನು ತಿಳಿಯುತ್ತಾನೆ)''

ಸಾಂಖ್ಯಯೋಗಿಗೆ (ಜ್ಞಾನಯೋಗ ನಿಷ್ಠನಿಗೆ) ಯಾವ ಆತ್ಮಾವಲೋಕನವೆಂಬ ಫಲವು ಲಭಿಸುವುದೋ ಅದೇ ಫಲವು ಕರ್ಮಯೋಗನಿಷ್ಠನಿಗೂ ಕೂಡ ಲಭಿಸುತ್ತದೆ ಹೀಗೆ ಎರಡೂ ಒಂದೇ ಫಲವನ್ನು ಹೊಂದಿರುವುದರಿಂದ, ಬೇರೆ ಬೇರೆಯಾಗಿದ್ದರೂ ಈ ಸಾಂಖ್ಯ ಮತ್ತು ಯೋಗಗಳು (ಜ್ಞಾನಯೋಗ ಕರ್ಮಯೋಗ ಗಳು) ಫಲವಿಷಯದಲ್ಲಿ ವ್ಯತ್ಯಾಸವಿಲ್ಲದ ಒಂದೇ ಆಗಿರುವುವು ಎಂದು ಯಾವನು ತಿಳಿಯುವನೋ ಅವನೇ ತಿಳಿದವನು, ಪಂಡಿತನು ಎಂದು ಅರ್ಥ

**ಶ್ಲೋಕ 6**—ಜ್ಞಾನ ಯೋಗ, ಕರ್ಮಯೋಗಗಳಿಗಿರುವ ವ್ಯತ್ಯಾಸವನ್ನು ಇಲ್ಲಿ ಹೇಳಿದೆ —"ಎಲೈ ಅರ್ಜುನನೇ! ಕರ್ಮ ಯೋಗವಿಲ್ಲದೆ ಕರ್ಮ ಸನ್ಯಾಸವನ್ನು (ಜ್ಞಾನ ಯೋಗವನ್ನು) ಹೊಂದುವುದಾದರೋ ಬಹಳ ಕಷ್ಟವಾದುದು ಕರ್ಮನಿಷ್ಠನಾದ ಮುನಿಯು (ಆತ್ಮ ಮನನ ಮಾಡುತ್ತಾ ಕರ್ಮಯೋಗದಲ್ಲಿ ನಿರತ ನಾದವನು) ಶೀಘ್ರದಲ್ಲಿಯೇ ಬ್ರಹ್ಮನನು (ಆತ್ಮ ಸ್ವರೂಪ ಸಾಕ್ಷಾತ್ಕಾರವನ್ನು) ಹೊಂದುವನು" —

ಸನ್ಯಾಸ(ಜ್ಞಾನ ಯೋಗ) ವಾದರೋ ಕರ್ಮಯೋಗದ ಸಹಾಯವಿಲ್ಲದೆ ಹೊಂದುವುದು ಅಸಾಧ್ಯವು ಕರ್ಮಯೋಗ ಯುಕ್ತನಾದ ಮುನಿಯು ಅಂದರೆ ಆತ್ಮ ಮನನ ಶೀಲನಾದ ಕರ್ಮಯೋಗ ನಿಷ್ಠನು ತಾನಾಗಿಯೇ ಜ್ಞಾನ ಯೋಗದ ಅವಶ್ಯ ಕತೆಯಿಲ್ಲದೆಯೇ, ಸುಖವಾಗಿ ಕರ್ಮಯೋಗವನ್ನು ಸಾಧಿಸುತ್ತಾ ಅಲ್ಪಕಾಲದಲ್ಲಿಯೇ ಶೀಘ್ರವಾಗಿ ಬ್ರಹ್ಮನನ್ನು ಅಂದರೆ ಆತ್ಮನನ್ನು ಸಾಕ್ಷಾತ್ಕರಿಸುತ್ತಾನೆ (ಇಲ್ಲಿ ಬ್ರಹ್ಮ ಎಂಬ ಪದಕ್ಕೆ ಆತ್ಮ ಎಂದು ಅರ್ಥ) ಆದರೆ ಜ್ಞಾನಯೋಗ ಯುಕ್ತನಾದರೋ ಬಹಳ ಕಷ್ಟದಿಂದ ಜ್ಞಾನ ಯೋಗವನ್ನು ಸಾಧಿಸುತ್ತಾನೆ ಹೀಗೆ ಬಹಳ ಕಷ್ಟ ಸಾಧ್ಯವಾಗಿರುವುದರಿಂದಲೂ, ಬಹಳ ಕಷ್ಟದಿಂದ ಪ್ರಾಪ್ತವಾಗುವುದರಿಂದಲೂ ಜ್ಞಾನ ಯೋಗನಿಷ್ಠನು ಆತ್ಮ ಸಾಕ್ಷಾತ್ಕಾರವನ್ನು ಬಹಳ ಕಾಲದನಂತರ ಹೊಂದುತ್ತಾನೆ ಎಂದು ಅಭಿಪ್ರಾಯ (ಇದರಿಂದ ಜ್ಞಾನಯೋಗಕ್ಕಿಂತ ಕರ್ಮಯೋಗದಲ್ಲೇ ಆತ್ಮ ಸಾಕ್ಷಾತ್ಕಾರವು ಶೀಘ್ರವಾಗಿ ಲಭಿಸುವುದು ಎಂದು ಹೇಳಿದ ಹಾಗಾಯಿತು)

**ಶ್ಲೋಕ 7**—"ಕರ್ಮಯೋಗ ನಿಷ್ಠನು ಪರಿಶುದ್ಧವಾದ ಮನಸ್ಸುಳ್ಳವನಾಗಿ, ಜಯಿಸಲ್ಪಟ್ಟ ಮನಸ್ಸುಳ್ಳವನಾಗಿ, ಜಯಿಸ ಲ್ಪಟ್ಟ ಇಂದ್ರಿಯವುಳ್ಳವನಾಗಿ, ತನ್ನ ಆತ್ಮವನ್ನು ಸಮಸ್ತ ಜೇತನರ ಆತ್ಮದಂತೆ ಭಾವಿಸುವವನಾಗಿ, ಕರ್ಮಗಳನ್ನು ಮಾಡು ತ್ತಿದ್ದರೂ ಕೂಡ ಅವುಗಳಿಂದ ಲೇಪಿಸಲ್ಪಡುವುದಿಲ್ಲ (ಕರ್ಮಗಳು ಅವನಿಗೆ ಅಂಟುವುದಿಲ್ಲ ಆನಂದ ಕರ್ಮದಿಂದ ಅವನು ಬಂಧಿತ ನಾಗುವುದಿಲ್ಲ)

ಕರ್ಮಯೋಗವನ್ನು ಅನುಷ್ಠಿಸುವವನಾದರೋ ಶಾಸ್ತ್ರ ವಿದಿತ ವಾದ, ಪರಮ ಪುರುಷನ ಆರಾಧನಾ ರೂಪವಾದ, ಪರಿಶುದ್ಧವಾದ ಕರ್ಮಗಳನ್ನು ಮಾಡುವುದರಲ್ಲಿ ಮಗ್ನನಾಗಿರುವನು ಇದರಿಂದ ಅವನ ಮನಸ್ಸು (ಕಾಮಕ್ರೋಧಾದಿಗಳಿಂದ ರಹಿತವಾಗಿ) ಪರಿಶುದ್ಧ ವಾಗಿರುವುದು ಮತ್ತು ಅವನು ಜಯಿಸಲ್ಪಟ್ಟ ಮನಸ್ಸುಳ್ಳವ ನಾಗಿರುವನು ಅಂದರೆ ಅವನು ತಾನು ಅಭ್ಯಾಸ ಮಾಡುತ್ತಿರುವ ಕರ್ಮದಲ್ಲೇ ಆಸಕ್ತವಾದ ಮನಸ್ಸುಳ್ಳವನಾಗಿರುವುದರಿಂದ ಬಹಳ ಸುಖವಾಗಿ ಸುಲಭವಾಗಿ ಮನಸ್ಸನ್ನು ಜಯಿಸುವನು, ಅದೇ ಕಾರಣದಿಂದ ತನ್ನ ಇಂದ್ರಿಯಗಳನ್ನೂ ಜಯಿಸುವನು ಮತ್ತು ಅವನು ಕರ್ಮ ಮಾಡುವಾಗ ಕರ್ತನಾದ ಆತ್ಮನ ಯಥಾರ್ಥ ಸ್ವರೂಪ ಜ್ಞಾನದ ಅನುಸಂಧಾನ ನಿಷ್ಠನಾಗಿರುವುದರಿಂದ ಸರ್ವ ಭೂತಾತ್ಮ ಭೂತಾತ್ಮನಾಗುವನು

ಸರ್ವಭೂತಾತ್ಮ ಭೂತಾತ್ಮನು ಯಾರೆಂದರೆ ಯಾರು ತನ್ನ ಆತ್ಮವನ್ನು ದೇವಾದಿ ಸಮಸ್ತ ಜೇತನರ ಆತ್ಮರೂಪವಾದುದೆಂದು ಭಾವಿಸುವನೋ ಅವನು ಆತ್ಮನ ಯಥಾರ್ಥ ಸ್ವರೂಪವನ್ನು ಅನುಸಂಧಾನ ಮಾಡುವ ಅವನಿಗಾದರೋ ದೇವ ಮನುಷ್ಯಾದಿ ಸಮಸ್ತ ಭೇದಗಳು ಪ್ರಕೃತಿಯ (ಶರೀರದ) ಪರಿಣಾಮ ವಿಶೇಷ ದಿಂದ ಉಂಟಾಗುತ್ತದೆಯೇ ವಿನಃ ಆತ್ಮನ ಸ್ವರೂಪ ಪ್ರಯುಕ್ತ ವಾದವುಗಳಲ್ಲ ಎಂಬ ಅರಿವು ಉಂಟಾಗಿರುವುದರಿಂದ ದೇವತಾದಿ ಇತರ ಸಮಸ್ತ ಜೇತನ ವಸ್ತುಗಳ ಆತ್ಮ ಮತ್ತು ತನ್ನ ಆತ್ಮ ಎಲ್ಲವೂ ಒಂದೇ ಆಕಾರವುಳ್ಳದ್ದಾಗಿ ತೋರುತ್ತವೆ ಪ್ರಕೃತಿ ವಿಯುಕ್ತನಾದ ಆತ್ಮನು ದೇವಾದಿ ಸಮಸ್ತ ಶರೀರಗಳಲ್ಲಿಯೂ ಜ್ಞಾನ ಒಂದನ್ನೇ ಆಕಾರವಾಗಿ ಹೊಂದಿರುವುದರಿಂದ ಸಮಾನ ವಾದ ಆಕಾರವುಳ್ಳವನಾಗಿದ್ದಾನೆ ಇದೇ ಅಭಿಪ್ರಾಯವು, "ನಿರ್ದೋಷಂಹಿಸಮಂ ಬ್ರಹ್ಮ" ಎಂದು ಮುಂದೆ ಇದೇ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ ಈ ವಿಧವಾದ ಆತ್ಮಜ್ಞಾನಾನು ಸಂಧಾನದೊಂದಿಗೆ ಕರ್ಮ ಮಾಡುವುದರಿಂದ ಅವನು ಕರ್ಮ ಮಾಡುತ್ತಿದ್ದರೂ, ಆತ್ಮನಲ್ಲದ ವಸ್ತುಗಳಲ್ಲಿ (ದೇಹಾದಿ ಪ್ರಾಕೃತಿಕ

ವಸ್ತುಗಳಲ್ಲಿ) ಆತ್ಮಾಭಿಮಾನ ಹೊಂದಿ ಅವುಗಳೊಂದಿಗೆ ಲಿಪ್ತನಾಗುವುದಿಲ್ಲ. ಅಂದರೆ ಎಂದೂ ಅವುಗಳೊಂದಿಗೆ ಬಂಧಿತನಾಗುವುದಿಲ್ಲ. ಈ ಕಾರಣಗಳಿಂದ ಆತನು ಶೀಘ್ರದಲ್ಲಿಯೇ ಆತ್ಮನನ್ನು ಹೊಂದುತ್ತಾನೆ ಎಂದು ಅಭಿಪ್ರಾಯ.

## 2) ಕರ್ಮಯೋಗಾಚರಣೆಗೆ ಅವಶ್ಯಕವಾದ ಅಕರ್ತೃತ್ವಾನುಸಂಧಾನ ಮೊದಲಾದ ಜ್ಞಾನ ಭಾಗದ ಅನುಸಂಧಾನ ಪ್ರಕಾರಗಳು—

(ಶ್ಲೋಕಗಳು 8 ರಿಂದ 16)

(1) ದೇಹದ ಆಕಾರವಾಗಿ ಪರಿಣಾಮ ಹೊಂದಿರುವ ಪ್ರಕೃತಿಯಲ್ಲಿ ಕರ್ತೃತ್ವವನ್ನು ನಿಕ್ಷೇಪಿಸಲ್ಪಡಬೇಕು—ಅಂದರೆ ಕರ್ತೃತ್ವವು ಆತ್ಮನಿಗೆ ಸೇರಿದ್ದಲ್ಲ ದೇಹಕ್ಕೆ ಸೇರಿದ್ದು ಎಂದು ಭಾವಿಸಿ ಆಸಕ್ತಿ ರಹಿತನಾಗಿರಬೇಕು—(ಶ್ಲೋಕಗಳು 8 ರಿಂದ 10)

### ಶ್ಲೋಕಗಳು 8 ಮತ್ತು 9—

' ತತ್ತ್ವವನ್ನು ತಿಳಿದ ಕರ್ಮಯೋಗ ನಿಷ್ಠನು ಕಣ್ಣುಗಳಿಂದ ನೋಡಿದರೂ, ಕಿವಿಗಳಿಂದ ಕೇಳಿದರೂ, ತ್ವಗಿಂದ್ರಿಯದಿಂದ ಮುಟ್ಟಿದರೂ ಮೂಗಿನಿಂದ ವಾಸನೆ ನೋಡಿದರೂ, ನಾಲಿಗೆಯಿಂದ ರುಚಿ ನೋಡಿದರೂ, ಕಾಲುಗಳಿಂದ ನಡೆದರೂ, ನಿದ್ರೆ ಮಾಡಿದರೂ, ಉಸಿರಾಡಿದರೂ, ಬಾಯಿಂದ ಕೂಗಿದರೂ, ಮಲ ವಿಸರ್ಜನಾದಿಗಳನ್ನು ಮಾಡಿದರೂ, ಕೈಯಿಂದ ಹಿಡಿದುಕೊಂಡರೂ ಕಣ್ಣು ತೆರೆದರೂ, ಕಣ್ಣು ಮುಚ್ಚಿದರೂ ಇಂದ್ರಿಯಗಳು ಅವುಗಳ ವಿಷಯಗಳಲ್ಲಿ ಪ್ರವರ್ತಿಸುತ್ತಿವೆ ಎಂದು ಅನುಸಂಧಾನ ಮಾಡುವವನಾಗಿ " ನಾನು ಸ್ವತಃ ಏನನ್ನೂ ಮಾಡುವುದಿಲ್ಲ ' ಎಂದು ತಿಳಿಯುತ್ತಾನೆ "—

ಮೇಲೆ ತಿಳಿಸಿರುವ ಪ್ರಕಾರವಾಗಿ ಆತ್ಮ ಸ್ವರೂಪವನ್ನು ತಿಳಿದಿರುವವನು ಕಿವಿ ಮೊದಲಾದ ಜ್ಞಾನೇಂದ್ರಿಯಗಳಿಂದಲೂ, ಬಾಯಿ ಮೊದಲಾದ ಕರ್ಮೇಂದ್ರಿಯಗಳಿಂದಲೂ ಮತ್ತು ಪ್ರಾಣದಿಂದಲೂ ನಡೆಯಲ್ಪಡುವ ಸಮಸ್ತ ವ್ಯಾಪಾರಗಳನ್ನೂ ಆಯಾಯಾ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಲ್ಲಿ ಪ್ರವರ್ತಿಸಿ ತಮ್ಮ ತಮ್ಮ ಸ್ವಭಾವ ಸಿದ್ಧವಾದ ಕಾರ್ಯಗಳನ್ನು ಮಾಡುತ್ತಿವೆ ಎಂದು ಅನುಸಂಧಾನ ಮಾಡಿಕೊಳ್ಳುತ್ತಾ, " ಆತ್ಮನಾದ ನನ್ನಿಂದ ಯಾವ ಕಾರ್ಯವೂ ಮಾಡಲ್ಪಡುವುದಿಲ್ಲ" ಎಂದು ತಿಳಿಯುತ್ತಾನೆ. ಏತಕ್ಕೆಂದರೆ ಜ್ಞಾನ ಒಂದನ್ನೇ ಸ್ವಭಾವವಾಗಿ ಉಳ್ಳ ತನಗೆ ತನ್ನ ಪೂರ್ವಾರ್ಜಿತ ಕರ್ಮಗಳ ಮೂಲಕ ಉಂಟಾದ ಶರೀರ, ಇಂದ್ರಿಯ ಮತ್ತು ಪ್ರಾಣ ಇವುಗಳ ಸಂಬಂಧದಿಂದ ಉಂಟಾದ ಈ (ಕರ್ಮಗಳನ್ನು ಮಾಡುವ) ಕರ್ತೃತ್ವವು ಸ್ವರೂಪ ಪ್ರಯುಕ್ತವಾಗಿ ಉಂಟಾದುದಲ್ಲವೆಂದು ತಿಳಿಯುತ್ತಾನೆ ಎಂದು ಅರ್ಥ. [ಇಲ್ಲಿ ಗಮನಿಸಬೇಕಾದ ಒಂದು ವಿಷಯವಿದೆ. ಕರ್ಮವು ಇಂದ್ರಿಯಗಳು, ಪ್ರಾಣ ಮನಸ್ಸು ಇವುಗಳಿಂದ ಮಾಡಲ್ಪಟ್ಟರೂ ಆತ್ಮನ ಅಧಿಷ್ಠಾನವಿದ್ದೇ ಇರಬೇಕು. ಅಚೇತನಗಳಾದ ದೇಹ ಇಂದ್ರಿಯಾದಿಗಳು ಆತ್ಮನಿಲ್ಲದಿದ್ದರೆ ತಾನೇ ಕೆಲಸ ಮಾಡಲಾರವು. ಹಾಗೆಯೇ ದೇಹವಿಯುಕ್ತನಾದ ಆತ್ಮನೂ ಕೆಲಸ ಮಾಡಲಾರನು. ಆದ್ದರಿಂದ ಜೀವಾತ್ಮನೂ ಇರಬೇಕು ಮತ್ತು ಅವನು ಪ್ರಕೃತಿ ಸಂಬಂಧವನ್ನು ಹೊಂದಿರಬೇಕು. ಆದ್ದರಿಂದ ಕರ್ಮವು ಜೀವಾತ್ಮನಿಗೆ ಅವನ ಪೂರ್ವಾರ್ಜಿತ ಕರ್ಮಾನುಗುಣವಾಗಿ ಪ್ರಾಪ್ತನಾದ ಶರೀರದ ಗುಣಗಳಿಂದಲೂ, ಪರಮಾತ್ಮನ ಸಂಕಲ್ಪದಿಂದಲೂ ಮಾಡಲ್ಪಡುತ್ತದೆ ಎಂಬ ತಿಳಿವಳಿಕೆ ಹೊಂದಿ, ಜೀವಾತ್ಮನು ಅಕರ್ತೃತ್ವಾನುಸಂಧಾನದೊಂದಿಗೆ ಕರ್ಮಗಳನ್ನು ಮಾಡುತ್ತಾ ಆಸಕ್ತಿ ರಹಿತನಾಗಿ ಶಾಂತ ಚಿತ್ತನಾಗಿ ಇರಬೇಕು ಎಂದು ಅಭಿಪ್ರಾಯ. ಇದು ಉದಾಹರಣೆಯೊಂದಿಗೆ ಮುಂದಿನ ಶ್ಲೋಕದಲ್ಲಿ ವಿವರಿಸಲ್ಪಟ್ಟಿದೆ.]

### ಶ್ಲೋಕ—10

ಯಾರು ಕರ್ಮಗಳನ್ನು (ತಾನು ಮಾಡುತ್ತಿರುವ, ನೋಡುತ್ತಿರುವುದು ಕೇಳುವುದು ಮುಂತಾದ ಕರ್ಮಗಳನ್ನು) ಬ್ರಹ್ಮದಲ್ಲಿ (ದೇಹ, ಇಂದ್ರಿಯ ಪ್ರಾಣರೂಪವಾದ ಪ್ರಕೃತಿಯಲ್ಲಿ) ಇಟ್ಟು ಆಸಕ್ತಿಯನ್ನು ತ್ಯಜಿಸಿ ಕರ್ಮಗಳನ್ನು ಮಾಡುತ್ತಾನೆಯೋ ಅವನು ನೀರಿನಲ್ಲಿರುವ ಕಮಲದ ಎಲೆಯಂತೆ ಪಾಪಗಳಿಂದ ಲೇಪಿಸಲ್ಪಡುವುದಿಲ್ಲ"—

ಇಲ್ಲಿ "ಬ್ರಹ್ಮ ' ಶಬ್ದದಿಂದ ಪ್ರಕೃತಿಯು ಹೇಳಲ್ಪಡುತ್ತದೆ 'ಮಮಯೋನಿರ್ಮಹದ್ಬ್ರಹ್ಮ "— ಎಂದು ಮುಂದೆ 14ನೇ ಅಧ್ಯಾಯದಲ್ಲಿ ಬ್ರಹ್ಮಶಬ್ದವು ಪ್ರಕೃತಿಯನ್ನೇ ಹೇಳುತ್ತದೆ. ಇಂದ್ರಿಯಗಳು ಪ್ರಕೃತಿಯ ಪರಿಣಾಮ ವಿಶೇಷಗಳಾಗಿರುವುದರಿಂದ ಇಂದ್ರಿಯ ರೂಪದಲ್ಲಿರುವ ಪ್ರಕೃತಿಯಲ್ಲಿ ನೋಡುವುದು, ಕೇಳುವುದು ಮುಂತಾಗಿ ಮೇಲೆ ಹೇಳಿದ ಕರ್ಮಗಳೆಲ್ಲವನ್ನೂ, ಆರೋಪಿಸಿ ಸಂಗವನ್ನು ತ್ಯಜಿಸಿ ಜೀವಾತ್ಮನಾದ ನಾನು ಯಾವ ಕಾರ್ಯ

ವನ್ನೂ ಮಾಡುವುದಿಲ್ಲ'' ಎಂಬ ಅನುಸಂಧಾನದೊಂದಿಗೆ ಯಾವನು ಕರ್ಮವನ್ನು ಮಾಡುತ್ತಾನೆಯೋ ಅವನು ಪ್ರಕೃತಿಯೊಂದಿಗೆ ಸಂಬಂಧಿಸಿದವನಾದಾಗ್ಯೂ (ಶರೀರೇಂದ್ರಿಯಗಳ ಸಂಬಂಧದಿಂದ ಕರ್ಮ ಮಾಡಿಕೊಂಡು ಇರುವವನಾದಾಗ್ಯೂ) ಪ್ರಕೃತಿಯಲ್ಲಿ ಆತ್ಮಾಭಿಮಾನರೂಪವಾದ (ಶರೀರವೇ ಆತ್ಮವೆಂಬ ಅಭಿಮಾನರೂಪವಾದ) ಬಂಧಕ್ಕೆ ಕಾರಣವಾದ ಪಾಪದಿಂದ ನೀರಿನಲ್ಲಿರುವ ಪದ್ಮಪತ್ರದಂತೆ ಲೇಪಿಸಲ್ಪಡುವುದಿಲ್ಲ (ಅಂದರೆ–ಕಮಲದ ಎಲೆಯು ನೀರಿನಲ್ಲಿಯೇ ಹುಟ್ಟಿ, ನೀರಿನಲ್ಲೇ ಬೆಳೆದು, ಅದರ ಆಧಾರದಿಂದಲೇ ಜೀವಿಸಿಕೊಂಡು ನೀರಿನ ಸಂಬಂಧವನ್ನು ಹೊಂದಿದ್ದರೂ ನೀರಿನಿಂದ ಅಂಟಿಕೊಂಡಿಲ್ಲ ಹಾಗೆಯೇ ಪ್ರಕೃತಿಯ ಸಂಬಂಧ ಹೊಂದಿ ಅದರ ಕಾರ್ಯಗಳನ್ನು ಮಾಡುತ್ತಿದ್ದರೂ ಆತ್ಮನು ಪ್ರಕೃತಿಗಿಂತ ವಿಲಕ್ಷಣವಾಗಿರುವ ತನ್ನ ನಿಜ ಸ್ವರೂಪವನ್ನು ತಿಳಿದು ಕರ್ಮಫಲಸಂಗತ್ಯಾಗದಿಂದ ಕರ್ಮಮಾಡುತ್ತಿದ್ದರೆ ಕರ್ಮವು ಅವನಿಗೆ ಅಂಟುವುದಿಲ್ಲ ಎಂದು ಅರ್ಥ )

**(111) ಕರ್ಮಯೋಗಿಯು ಆತ್ಮಶುದ್ಧಿಗಾಗಿ ಕರ್ಮ ಮಾಡುತ್ತಾ ಕರ್ಮಫಲದಲ್ಲಿ ಆಸಕ್ತಿ ರಹಿತನಾಗಿರಬೇಕು**— (ಶ್ಲೋಕಗಳು 11–12)

**ಶ್ಲೋಕ**—11

''ಯೋಗಿಗಳು ಆಸಕ್ತಿರಹಿತರಾಗಿ, ಆತ್ಮಶುದ್ಧಿಗಾಗಿ, ಶರೀರದಿಂದಲೂ, ಮನಸ್ಸಿನಿಂದಲೂ, ಬುದ್ಧಿಯಿಂದಲೂ ಕೇವಲ ಇಂದ್ರಿಯಗಳಿಂದಲೂ ಕೂಡ ಕರ್ಮಗಳನ್ನು ಮಾಡುತ್ತಾರೆ''

ಯೋಗಿಗಳು ಶರೀರ, ಮನಸ್ಸು, ಬುದ್ಧಿ ಮತ್ತು ಇಂದ್ರಿಯ ಇವುಗಳಿಂದ ಮಾಡಲ್ಪಡಬೇಕಾದ (ನಿಯತವಾದ) ಕರ್ಮಗಳನ್ನು ಸ್ವರ್ಗಾದಿಫಲಗಳಲ್ಲಿ ಆಸಕ್ತಿಯನ್ನು ಬಿಟ್ಟು ಆತ್ಮಶುದ್ಧಿಗಾಗಿ ಅಂದರೆ ತನಗೆ ಪ್ರಾಪ್ತವಾಗಿರುವ ಪ್ರಾಚೀನ ಕರ್ಮಬಂಧ ನಾಶಕ್ಕಾಗಿ ಮಾಡುತ್ತಾನೆ. (ಕೇವಲ ಎಂಬ ಪದದಿಂದ ಮನಸ್ಸಿನಲ್ಲಿ ಕರ್ತೃತ್ವಾಭಿಮಾನವಿಲ್ಲದೆ ಬರೀ ಇಂದ್ರಿಯಗಳಿಂದ ಕರ್ಮಮಾಡುತ್ತಾರೆ ಎಂದು ಅರ್ಥವಾಗುತ್ತದೆ)

**ಶ್ಲೋಕ**—12

''ಆತ್ಮನಲ್ಲಿ ಆಸಕ್ತಿಯುಳ್ಳ ಕರ್ಮಯೋಗಿಯು ಕರ್ಮಫಲದಲ್ಲಿ ಆಸಕ್ತಿಯನ್ನು ತ್ಯಜಿಸಿ ಸ್ಥಿರವಾದ ಆತ್ಮಾನುರೂಪವಾದ ಶಾಂತಿಯನ್ನು ಹೊಂದುತ್ತಾನೆ ಆತ್ಮನಲ್ಲಿ ಆಸಕ್ತಿರಹಿತನಾದ ಕರ್ಮಯೋಗಯುಕ್ತನಲ್ಲದವನು ಕಾಮದಿಂದ (ಆಸೆಯಿಂದ) ಪ್ರೇರಿತನಾಗಿ ಫಲದಲ್ಲಿ ಆಸಕ್ತಿಹೊಂದಿ ಬಂಧಿತನಾಗುತ್ತಾನೆ (ಸಂಸಾರದಲ್ಲಿ ಬಂಧಿಸಲ್ಪಡುತ್ತಾನೆ)''

ಯುಕ್ತನು ಅಂದರೆ ಆತ್ಮನಲ್ಲದ ಬೇರೆ ಇತರ ಯಾವ ಫಲದಲ್ಲಿಯೂ ಆಸೆಯಿಲ್ಲದೆ ಕೇವಲ ಆತ್ಮಜ್ಞಾನ ಒಂದರಲ್ಲೇ ನಿರತನಾದವನು ಕರ್ಮಫಲದಲ್ಲಿ ಆಸಕ್ತಿಯಿಲ್ಲದವನಾಗಿ, ಕೇವಲ ಆತ್ಮಶುದ್ಧಿಗಾಗಿ (ಅಂದರೆ ಆತ್ಮಾವಲೋಕನಕ್ಕೆ ಪ್ರತಿಬಂಧಕಗಳಾದ ಪ್ರಾಚೀನಕರ್ಮಗಳ ನಾಶಕ್ಕಾಗಿ) ಕರ್ಮಗಳನ್ನು ಮಾಡಿ ಸ್ಥಿರವಾದ ಆತ್ಮಾನುಭವರೂಪವಾದ ಶಾಂತಿಯನ್ನು ಹೊಂದುವನು. ಆದರೆ ಅಯುಕ್ತನಾದವನು ಅಂದರೆ ಆತ್ಮನಲ್ಲದ ಬೇರೆ ಇತರ ಫಲಗಳಲ್ಲಿ ಆಸೆಯುಳ್ಳವನು, ಆತ್ಮಾವಲೋಕನದಲ್ಲಿ ಆಸೆ ಇಲ್ಲದವನಾಗಿ ಕಾಮದಿಂದ ಪ್ರೇರಿತನಾಗಿ, ಫಲದಲ್ಲಿ ಆಸಕ್ತಿಹೊಂದಿ ಕರ್ಮಗಳನ್ನು ಮಾಡುತ್ತಾ ಯಾವಾಗಲೂ ಕರ್ಮಗಳಿಂದ ಬಂಧಿಸಲ್ಪಡುತ್ತಾನೆ ಅಂದರೆ ಯಾವಾಗಲೂ ಸಂಸಾರಬಂಧದಲ್ಲಿರುತ್ತಾನೆ ಆದ್ದರಿಂದ ಫಲಸಂಗರಹಿತನಾಗಿ ಇಂದ್ರಿಯಗಳ ರೂಪದಲ್ಲಿ ಪರಿಣಾಮ ಹೊಂದಿರುವ ಪ್ರಕೃತಿಯಲ್ಲಿ ಕರ್ಮಗಳನ್ನು ಇಟ್ಟು (ಅಂದರೆ ಪ್ರಾರಬ್ಧಕರ್ಮಾನುಗುಣವಾಗಿ ಪ್ರಾಪ್ತವಾದ ಪ್ರಾಕೃತಿಕ ಶರೀರದ ಗುಣಗಳಿಂದ ಪ್ರೇರಿತವಾಗಿ ಇಂದ್ರಿಯಗಳು ಕರ್ಮಗಳನ್ನು ಮಾಡುತ್ತವೆ ಎಂಬ ಅನುಸಂಧಾನವುಳ್ಳವನಾಗಿ) ಆತ್ಮನ ಬಂಧ ವಿಮೋಚನೆಗಾಗಿಯೇ ಕರ್ಮಗಳನ್ನು ಮಾಡತಕ್ಕದ್ದು ಎಂಬ ಉಪದೇಶವು ಇಲ್ಲಿ ಹೇಳಲ್ಪಟ್ಟಿದೆ

**(111) ದೇಹದ ಆಕಾರವಾಗಿ ಪರಿಣಾಮವನ್ನು ಹೊಂದಿರುವ ಪ್ರಕೃತಿಯಲ್ಲಿ ಕರ್ತೃತ್ವವನ್ನಿಡುವಿಕೆಯ ವರ್ಣನೆ.**—(ಶ್ಲೋಕಗಳು 13–14–15)

**ಶ್ಲೋಕ** 13

'' ದೇಹಿಯಾದ (ಶರೀರವನ್ನೇ ಆಧಾರವಾಗಿ ಹೊಂದಿರುವ) ಆತ್ಮನು ಒಂಬತ್ತು ಬಾಗಿಲುಳ್ಳ ಪಟ್ಟಣ ರೂಪವಾದ ದೇಹದಲ್ಲಿ ಸಮಸ್ತ ಕರ್ಮಗಳನ್ನೂ ಮನಸ್ಸಿನಿಂದ ಇಟ್ಟು (ಸಮಸ್ತ ಕರ್ಮಗಳೂ ತನ್ನ ದೇಹಕ್ಕೆ ಸೇರಿದ್ದು ಎಂಬ ಮನೋಭಾವನೆ ಹೊಂದಿದವನಾಗಿ), ಇಂದ್ರಿಯಗಳನ್ನು ಜಯಿಸಿದವನಾಗಿ, (ತಾನಾಗಿ ಆಸೆಪಟ್ಟು) ಏನನ್ನೂ ಮಾಡದೆ ಮತ್ತು ಏನನ್ನೂ ಮಾಡಿಸದೆ ಸುಖವಾಗಿ ಇರುತ್ತಾನೆ ''

ಜೀವಾತ್ಮನು ತನಗೆ ಪ್ರಾಚೀನ ಕರ್ಮ ಮೂಲಕವಾಗಿ ಪ್ರಾಪ್ತವಾದ ದೇಹಸಂಬಂಧದಿಂದ ಉಂಟಾದ ಕರ್ಮಗಳ ಕರ್ತೃತ್ವವು ನನಗೆ ಸ್ವರೂಪ ಪ್ರಯುಕ್ತನಾಗಿ ಬಂದುದಲ್ಲ ಎಂಬ ವಿವೇಕವೊಂದಿದವನಾಗಿ, ಮನಸ್ಸಿನಿಂದ ಸಮಸ್ತ ಕರ್ಮಗಳನ್ನೂ ಒಂಬತ್ತು ಬಾಗಿಲುಳ್ಳ (ಅಂದರೆ ಕಣ್ಣು, ಕಿವಿ ಮುಂತಾಗಿ 9 ದ್ವಾರಗಳುಳ್ಳ) ಪಟ್ಟಣರೂಪವಾದ ಶರೀರದಲ್ಲಿ ಇಟ್ಟು (ಅಂದರೆ ಸಮಸ್ತ ಕರ್ಮಗಳೂ ತನ್ನ ದೇಹಕ್ಕೆ ಸೇರಿದ್ದೆಂಬ ಮನೋಭಾವನೆ ಹೊಂದಿ), ಇಂದ್ರಿಯಗಳನ್ನು ಜಯಿಸಿ ತನ್ನ ವಶದಲ್ಲಿ ಇಟ್ಟುಕೊಂಡು, ತನಗೆ ಆಶ್ರಯವಾದ ದೇಹದ ಮೂಲಕ ತಾನು ಆಗಿ ಹೋಗಿ. ಪ್ರಯತ್ನ ಮಾಡಿ ಕರ್ಮ ಮಾಡಬೇಕೆಂಬ ಅಭಿಮಾನವಿಲ್ಲದವನಾಗಿ ಮತ್ತು ತನಗೆ ಅಧೀನವಾದ ದೇಹವನ್ನು ಕರ್ಮಮಾಡಲು ಪ್ರೇರೇಪಿಸಬೇಕೆಂಬ ಅಭಿಮಾನವಿಲ್ಲದವನಾಗಿ ನಿರ್ಮಲ ಬುದ್ಧಿಯುಕ್ತನಾಗಿ ಸುಖವಾಗಿ ಇರುತ್ತಾನೆ (ಯಾವಾಗ ಜೀವಾತ್ಮನು 'ವಶೀ' ಎಂದರೆ ಇಂದ್ರಿಯಗಳನ್ನು ಜಯಿಸಿ ವಶಪಡಿಸಿಕೊಂಡವನಾಗುತ್ತಾನೆಯೋ ಆಗ ಅವನಿಗೆ ತನ್ನ ದೇಹದಲ್ಲಿರುವ ಇಂದ್ರಿಯಗಳ ಮೂಲಕ ತಾನು ಆಸೆಪಟ್ಟು ಅನುಭವಿಸಬೇಕಾದ ಫಲಭೋಗಗಳು ಯಾವುವೂ ಇರುವುದಿಲ್ಲ. ಆ ಕಾರಣದಿಂದ ವಶಿಯಾದ ಜೀವಾತ್ಮನು ತಾನಾಗಿ ಆಸೆ ಪಟ್ಟು ತನ್ನ ದೇಹದಮೂಲಕ ಯಾವ ಕೆಲಸವನ್ನೂ ತಾನಾಗಿ ಮಾಡುವುದಿಲ್ಲ ಮತ್ತು ತಾನಾಗಿ ತನಗೆ ಅಧೀನವಾದ ದೇಹದಿಂದ ಮಾಡಿಸುವುದಿಲ್ಲ. ಅವನು ತಾನೇ ತನ್ನ ದೇಹದ ಮೂಲಕ ಕರ್ಮ ಮಾಡುತ್ತೇನೆಂದಾಗಲಿ, ತನ್ನ ಸಹಾಯದಿಂದ ದೇಹ ಕೆಲಸಗಳನ್ನು ನಡೆಸುತ್ತಿದೆಯೆಂದಾಗಲಿ, ಭಾವಿಸುವುದೂ ಇಲ್ಲ. ಅಂದರೇನು ತಾನು ದೇಹದ ಅಧಿಪತಿ ಎಂಬ ಮತ್ತು ದೇಹದಿಂದಾಗುವ ಕೆಲಸಗಳೆಲ್ಲಾ ತನ್ನಿಂದ ಆದವುಗಳು ಎಂಬ ಅಹಂಕಾರ ಮಮಕಾರಗಳನ್ನು ಹೊಂದಿದವನಾಗುವುದಿಲ್ಲ. ಅವನು ಆತ್ಮಯಥಾತ್ಮ್ಯಜ್ಞಾನದ ಮೂಲಕ ಸಮಸ್ತ ಕರ್ತೃತ್ವಾದಿಗಳೂ ದೇಹಕ್ಕೆ ಸೇರಿದ್ದೆಂಬ ಮನೋಭಾವನೆ ಹೊಂದಿ, ಐಹಿಕಾದಿ ಭೋಗಗಳಲ್ಲಿ ಆಸಕ್ತನಾಗದೆ, ಕರ್ಮಾಭಿಮಾನಿಯಾಗದೆ ಅಂದರೆ ಕರ್ಮಗಳನ್ನು ತಾನು ಮಾಡಲಿಲ್ಲ ಮತ್ತು ಮಾಡಿಸಲಿಲ್ಲ, ಅವು ತನಗೆ ಪ್ರಾಪ್ತನಾಗಿರುವ ದೇಹದ ಮೂಲಕ ಪರಮಾತ್ಮನ ಸಂಕಲ್ಪದಿಂದ ನಡೆಯುತ್ತಿವೆ ಎಂಬ ಮನೋಭಾವನೆ ಹೊಂದಿ ಕರ್ಮಗಳ ಫಲ ಕರ್ತೃತ್ವಾದಿಗಳಲ್ಲಿ ಅಹಂಕಾರ, ಮಮಕಾರ ರಹಿತನಾಗಿ ಶಾಂತ ಚಿತ್ತನಾಗಿ ಸುಖವಾಗಿ ಇರುತ್ತಾನೆ—ಎಂದು ಅಭಿಪ್ರಾಯ.

**ಶ್ಲೋಕ 14**—ಆತ್ಮನ ಸಾಕ್ಷಾತ್ತಾದ ಸ್ವಾಭಾವಿಕ ರೂಪವು ಇಲ್ಲಿ ವರ್ಣಿಸಲ್ಪಟ್ಟಿದೆ— ಪ್ರಭುವಾದ ಜೀವಾತ್ಮನು ಜಗತ್ತಿನಲ್ಲಿರುವ ಕರ್ತೃತ್ವವನ್ನು ಉಂಟು ಮಾಡುವವನಲ್ಲ, ಕರ್ಮಗಳನ್ನೂ ಉಂಟುಮಾಡುವವನಲ್ಲ ಕರ್ಮಫಲಗಳ ಅನುಭವವನ್ನೂ ಉಂಟುಮಾಡುವವನಲ್ಲ. ಆದರೆ ಸ್ವಭಾವವು ಪ್ರವರ್ತಿಸುತ್ತದೆ (ಕರ್ಮವಾಸನೆಗಳ ಮೂಲಕ ಪ್ರಾಪ್ತವಾದ ದೇಹ ಸಂಬಂಧದಿಂದ ಉಂಟಾಗಿರುವ ಸ್ವಭಾವವು ಕರ್ತೃತ್ವದಲ್ಲೂ, ಕರ್ಮದಲ್ಲೂ, ಆ ಕರ್ಮಗಳ ಫಲಾನುಭವದಲ್ಲೂ ಪ್ರವರ್ತಿಸುತ್ತದೆ)"—

ದೇವತೆಗಳು, ಮನುಷ್ಯರು, ಪ್ರಾಣಿಗಳು ಮತ್ತು ಸ್ಥಾವರಗಳು ಎಂಬ ನಾಲ್ಕು ವಿಧ ಚೇತನ ವಸ್ತುಗಳಿಂದ ಕೂಡಿದ ಪ್ರಕೃತಿ

ಸಂಬಧವನ್ನು ಹೊಂದಿರುವ ಈ ಲೋಕದಲ್ಲಿ ಈ ದೇವಾದಿ ಶರೀರಗಳಿಂದ ಉಂಟಾಗುತ್ತಿರುವ ಅಸಾಧಾರಣವಾದ ಕರ್ತೃತ್ವಗಳೇನು, ಅಸಾಧಾರಣವಾದ ಕರ್ಮಗಳೇನು, ಮತ್ತು ದೇವಾದಿ ಶರೀರಗಳಿಗೆ ಆಯಾ ಕರ್ಮಗಳಿಂದ ಉಂಟಾಗುವ ಫಲಾನುಭವಗಳೇನು ಇವೆಲ್ಲವನ್ನೂ ಆಯಾ ಶರೀರಗಳಲ್ಲಿರುವ ಪ್ರಭುವಾದ ಕರ್ಮವಶ್ಯನಲ್ಲದ ತನ್ನ ಸ್ವಭಾವಿಕವಾದ ಜ್ಞಾನಾದಿ ಸ್ವರೂಪದಿಂದ ಇರುವ ಆತ್ಮನು ಉಂಟು ಮಾಡುವುದಿಲ್ಲವು (ಅಂದರೆ ಮನುಷ್ಯಾದಿ ವಿಧ ವಿಧವಾದ ಶರೀರಗಳಿಂದ ವಿಧವಿಧವಾದ ಕರ್ಮಗಳೂ, ಕರ್ತೃತ್ವವೂ ಕರ್ಮ ಫಲಾನುಭವಗಳೂ ಉಂಟಾಗುತ್ತವೆ ಲೋಕದಲ್ಲಿ ಬೇರೆ ಬೇರೆ ಜೀವಿಗಳಿಂದ ಬಿನ್ನ ಬಿನ್ನವಾದ ಕರ್ತೃತ್ವಾದಿಗಳು ಉಂಟಾಗುತ್ತಿವೆ ಆದರೆ ಪ್ರತಿದೇಹದಲ್ಲಿರುವ ಕರ್ಮವಶ್ಯನಲ್ಲದ ಪ್ರಭುವಾದ ಜೀವಾತ್ಮನು ಮಾತ್ರ ಜ್ಞಾನೈಕಾಕಾರತೆಯಿಂದ ಸರ್ವ ಶರೀರಗಳಲ್ಲೂ ಏಕಾಕಾರರನಾಗಿರುವನು ಕರ್ತೃತ್ವಾದಿಗಳು ಆತ್ಮಸ್ವರೂಪಕ್ಕೆ ಸಂಬಂಧಿಸಿದವುಗಳಾಗಿದ್ದರೆ ಅವುಗಳೆಲ್ಲಾ ಏಕಾಕಾರವಾಗಿರಬೇಕಾಗುತ್ತದ ಹಾಗಿಲ್ಲದೆ ಅವು ಭಿನ್ನ ಭಿನ್ನವಾದವುಗಳಾಗಿರುವುದರಿಂದ ಆತ್ಮನ ನಿಜಸ್ವರೂಪಕ್ಕೆ ಸಂಬಂಧವಟ್ಟವುಗಳಾಗಲ ರವು ಆದೂ ಅಲ್ಲದೆ ಪ್ರಭುವಾದ ಜೀವಾತ್ಮನು ಕರ್ಮವಶ್ಯನಲ್ಲ ಆದ್ದರಿಂದ ಕರ್ಮವಶವಾಗಿ ಪ್ರಾಪ್ತವಾದ ದೇಹಾದಿಗಳಿಗೆ ಸಂಬಂಧವಟ್ಟ ಕರ್ತೃತ್ವಾದಿಗಳು ಕರ್ಮವಶನಲ್ಲದ ಜೀವಾತ್ಮನ ನಿಜ ಸ್ವರೂಪಕ್ಕ ಸಂಬಂಧಪಡಲಾರವು ಆದ್ದರಿಂದ ಪ್ರಭುವಾದ ಆತ್ಮನಿಗೆ ಕರ್ತೃತ್ವವಾಗಲಿ, ಕರ್ಮವಾಗಲಿ, ಕರ್ಮಫಲಾನುಭವವಾಗಲಿ ಸ್ವರೂಪ ಪ್ರಯುಕ್ತವಾಗಿ ಬಂದವುಗಳಲ್ಲವೆಂದು ಅಭಿಪ್ರಾಯ )

ಹಾಗಾದರೆ ಈ ಕರ್ತೃತ್ವಾದಿಗಳು ಹೇಗೆ ಉಂಟಾಗುತ್ತವೆ ಎಂಬುದಕ್ಕೆ ಕರ್ತೃತ್ವಾದಿಗಳು ಸ್ವಭಾವದಿಂದ ಉಂಟಾಗುತ್ತವೆ ಎಂದು ಇಲ್ಲಿ ಉತ್ತರಹೇಳಲ್ಪಟ್ಟಿದೆ ಸ್ವಭಾವ ಎಂದರೆ ಪ್ರಕೃತಿ ವಾಸನೆ ಅಂದರೆ ದೇಹಸಂಬಂಧ ದಿಂದ ಉಂಟಾದ ವಾಸನೆ ಎಂದು ಅರ್ಥ. ದೇವ ಮನುಷ್ಯಾದಿ ವಿಧ ವಿಧವಾದ ಶರೀರಗಳ ರೂಪದಲ್ಲಿ ಪ್ರಕೃತಿಸಂಬಂಧವು ಉಂಟಾಗುತ್ತದ ಮತ್ತು ಆಯಾ ಕರ್ಮಗಳಿಗೆ ಅನುಗುಣವಾದ ಶರೀರಗಳು ಆಯಾಚೇತನನಿಗೆ ಪ್ರಾಪ್ತವಾಗುತ್ತವೆ ಹೀಗೆ ಪ್ರಕೃತಿಸಂಬಂಧದಿಂದ ಉಂಟಾದ ಆಯಾಯ ಶರೀರಗಳಲ್ಲಿ ಅಭಿಮಾನಹುಟ್ಟಿ, ಶರೀರಾಭಿಮಾನದಿಂದ ಕೂಡಿ ಕರ್ಮ ಮಾಡುವುದರ ಫಲವಾಗಿ ಚೇತನನಿಗೆ ಈಗ ಪ್ರಾಪ್ತವಾಗಿರುವ ಶರೀರ ಉಂಟಾಗಿದೆ ಈ ಶರೀರದಲ್ಲಿರುವ ಕರ್ಮವಾಸನಾಪ್ರಯುಕ್ತವಾಗಿ ಆವನಿಗೆ ಕರ್ತೃತ್ವ ಮೊದಲಾದವುಗಳೆಲ್ಲವೂ ಉಂಟಾಗುತ್ತವೆಯೇ ವಿನಃ ಈ ಶರೀರದಲ್ಲಿರುವ ಆತ್ಮನ ನಿಜಸ್ವರೂಪದ ಮೂಲಕ ಅವು ಉಂಟಾದುವಲ್ಲ ಆದ್ದರಿಂದ ಆತ್ಮನಿಗೆ ಕರ್ತೃತ್ವಾದಿಗಳು ಅವನ ಸ್ವರೂಪವಪ್ರಯುಕ್ತವಾಗಿ ಬಂದವುಗಳಲ್ಲ, ಅವನಿಗೆ ಪ್ರಾರಬ್ಧಕರ್ಮಾನುಗುಣವಾಗಿ ಪ್ರಾಪ್ತವಾದ ದೇಹಕೃತವಾದುವುಗಳಾಗಿವೆ ಎಂದು ಅಭಿಪ್ರಾಯ

**ಶ್ಲೋಕ 15**—"(ಅನೇಕ ಜನ್ಮಗಳನ್ನೆತ್ತಿ ಅನೇಕ ಪ್ರದೇಶಗಳಲ್ಲಿರುವುದರ ಮೂಲಕ ಅಥವ ತನ್ನ ವಿಭುವಾದ ಧರ್ಮಭೂತ ಜ್ಞಾನದ ಮೂಲಕ) ವಿಭುವಾದ ಈ ಜೀವಾತ್ಮನು ಯಾವನೊಬ್ಬನ ಪಾಪವನ್ನಾಗಲಿ (ಅಂದರೆ ಪಾಪದ ಫಲವಾದ ದುಃಖವನ್ನಾಗಲಿ), ಯಾವನೊಬ್ಬನ ಸುಕೃತವನ್ನಾಗಲಿ (ಅಂದರೆ ಸುಕೃತದ ಫಲವಾದ ಸುಖವನ್ನಾಗಲಿ) ತೆಗೆದುಕೊಳ್ಳಲಾರನು. ಅವನ ಜ್ಞಾನವು (ಆತ್ಮನ ಸ್ವಯಂಪ್ರಕಾಶವಾದ ಧರ್ಮಭೂತ ಜ್ಞಾನವು) ಅಜ್ಞಾನದಿಂದ (ಕರ್ಮವಾಸನೆಗಳ ಮೂಲಕ ಉಂಟಾದ ಅಜ್ಞಾನದಿಂದ) ಆವರಿಸಲ್ಪಟ್ಟಿದೆ ಆ ಅಜ್ಞಾನದಿಂದ ಜೀವಿಗಳೆಲ್ಲರೂ ಭ್ರಾಂತಿ ಹೊಂದಿದವರಾಗುತ್ತಾರೆ"

ಇಲ್ಲಿ ಜೀವಾತ್ಮನನ್ನು ವಿಭು ಎಂದು ಹೇಳಿದೆ ಅಣುಸ್ವರೂಪನಾದ ಜೀವಾತ್ಮನು ವಿಭು ಸ್ವರೂಪನು ಹೇಗೆ ಆಗಬಲ್ಲನು ಎಂಬ ಶಂಕೆ ಹುಟ್ಟುತ್ತದೆ ಅದಕ್ಕೆ ಈ ಜೀವಾತ್ಮನು ಅನೇಕ ಜನ್ಮಗಳನ್ನೆತ್ತಿ ಅನೇಕ ಪ್ರದೇಶಗಳಲ್ಲಿ ಇರುವುದರಿಂದ ವಿಭು ಎಂದು ಹೇಳಬಹುದು ಎಂದೂ ಮತ್ತು ಇವನಿಗೆ ವಿಭುವಾದ ಧರ್ಮಭೂತ ಜ್ಞಾನವಿರುವುದರಿಂದ ಅದರ ಮೂಲಕ ಇವನು ವಿಭು ಎಂದು ಹೇಳಬಹುದು ಎಂದೂ ವ್ಯಾಖ್ಯಾನಮಾಡಿ ತಿಳಿಸಿದ್ದಾರೆ ಹೀಗೆ ಅನೇಕ ಜನ್ಮಗಳನ್ನೆತ್ತಿ ಅನೇಕ ಪ್ರದೇಶಗಳಲ್ಲಿರುವುದರ ಮೂಲಕ ವಿಭುವಾದ ಈ ಜೀವಾತ್ಮನು ದೇವಾದಿ ದೇಹವೊಂದನ್ನೇ ತನಗೆ ನಿಯತವಾದ ದೇಶವನ್ನಾಗಿ ಹೊಂದದೆ ಅಂದರೆ ಒಂದೇ ಪ್ರದೇಶದಲ್ಲಿ ಯಾವಾಗಲೂ ಇಲ್ಲದೆ ಬೇರೆ ಬೇರೆ ದೇಹಗಳನ್ನು ಹೊಂದುತ್ತಾ ಇರುವನು ಆ ಕಾರಣದಿಂದ ಇವನಿಗೆ ಯಾವ ಸಂಬಂಧಿಗಳೂ ಇಲ್ಲವು, ಯಾವ ಪ್ರತಿಕೂಲರೂ ಇಲ್ಲವು ಮತ್ತು ಇವನು ತನಗೆ ಸಂಬಂಧಿಗಳಾದ ಪ್ರಿಯರಾದ ತನ್ನ ಪತ್ನೀ ಪುತ್ರ ಮುಂತಾದವರ ಪಾಪವನ್ನಾಗಲಿ ಅಂದರೆ ಅವರ ಪಾಪಕರ್ಮಗಳ ಫಲವಾದ ದುಃಖವನ್ನಾಗಲಿ ಮತ್ತು ಹಾಗೆಯೇ ತನಗೆ ಪ್ರಿಯರಲ್ಲದವರ ಸುಕೃತವನ್ನಾಗಲಿ ಅಂದರೆ ಅವರ ಸುಕೃತಗಳ ಫಲವಾದ ಸುಖವನ್ನಾಗಲಿ ಹೋಗಲಾಡಿಸಲಾರನು (ಆದರೆ ಹಾಗೆ ಒಂದು ವೇಳೆ ಇವನು ತನ್ನ ದೇಹ ಸಂಬಂಧಿಗಳಿಗೆ ಸಹಾಯಮಾಡಿ ಅವರ ದುಃಖವನ್ನು ಹೋಗಲಾಡಿಸಿದರೂ ಮತ್ತು ತನ್ನ ಶತ್ರುಗಳಿಗೆ ಹಿಂಸೆಕೊಟ್ಟು ಅವರ ಸುಖವನ್ನು ಕಡಿಮೆಮಾಡಿದರೂ ಅದು ಇವನ ಕರ್ಮ ಮೂಲಕ

ಉಂಟಾದ ದೇಹದ ವ್ಯಾಪಾರವೇ ವಿನಃ ಆತ್ಮಪ್ರಯುಕ್ತವಾದುದಾಗ ಲಾರದು ಎಂಬ ಅನುಸಂಧಾನಹೊಂದಬೇಕೆಂದು ಅಭಿಪ್ರಾಯ ) ಆದರೆ ದೇಹಿಗೆ ಇವನು ತನಗೆ ಪ್ರತಿಕೂಲನು ಇವನಿಗೆ ಹಿಂಸೆ ಮಾಡ ಬೇಕು, ಇವನು ತನ್ನ ಸಂಬಂಧಿ, ತನ್ನಬಂಧು, ತನಗೆ ಸೇರಿದವನು ಇವನಿಗೆ ಸಹಾಯಮಾಡಬೇಕು ಎಂಬ ಅನೇಕಭಾವನೆಗಳು ಉಂಟಾಗಿ ಅದರಂತೆ ಅವನಲ್ಲಿ ಕರ್ಮ ಮಾಡಬೇಕೆಂಬ ಪ್ರವೃತ್ತಿ ಇರುತ್ತದೆಯಲ್ಲಾ, ಇದಕ್ಕೆ ಕಾರಣವೇನು ಎಂದರೆ ಅದೆಲ್ಲಾ ಅವನ ಕರ್ಮವಾಸನೆಯಿಂದ ಉಂಟಾದುದೇ ಹೊರತು ಅವನ ಸ್ವರೂಪ ಪ್ರಯುಕ್ತ ವಾದುದಲ್ಲ. ಆದರೆ ಪರಿಶುದ್ಧವಾದ ಜ್ಞಾನಸ್ವರೂಪ ನಾದ ಆತ್ಮನಿಗೆ ಅವನ ಸ್ವಭಾವಕ್ಕೆ ವಿರುದ್ಧವಾದ ಈ ವಿಪರೀತ ವಾದ ಪ್ರಕೃತಿವಾಸನೆ ಉಂಟಾಗಲು ಕಾರಣವೇನು ಎಂದರೆ— ಜೀವಾತ್ಮನು ತನ್ನ ಪೂರ್ವಜನ್ಮಗಳಲ್ಲಿ ಮಾಡಿದ ಕರ್ಮಗಳ ಫಲದಿಂದ ಆಯಾ ಕರ್ಮಫಲಗಳನ್ನು ಅನುಭವಿಸಲು ಯೋಗ್ಯತೆ ಉಂಟಾಗುವು ದಕ್ಕಾಗಿ ಅವನ ಜ್ಞಾನವು ಜ್ಞಾನ ವಿರೋಧಿಯಾದ ಅಜ್ಞಾನದಿಂದ ಸಂಕೋಚವನ್ನು ಹೊಂದುತ್ತದೆ. ಜ್ಞಾನಕ್ಕೆ ಅಜ್ಞಾನದ ಮುಸು ಕನ್ನು ಹಾಕುವ ಕರ್ಮದಿಂದ ದೇವ ಮನುಷ್ಯಾದಿ ದೇಹಪ್ರಾಪ್ತಿಯೂ, ಆಯಾದೇಹಗಳಲ್ಲಿ ಅಭಿಮಾನದಿಂದ ಮೋಹವು ಕೂಡ ಉಂಟಾಗುತ್ತದೆ. ಅದರಿಂದ ಭ್ರಮರೂಪವಾದ ದೇಹಾತ್ಮಾಭಿಮಾನ ವಾಸನೆಯೂ, ದೇಹಸಂಬಂಧಿಗಳಾದ ಪತ್ನಿಪುತ್ರರಲ್ಲಿ ತನ್ನವರೆಂಬ ಮೋಹವೂ, ಅದಕ್ಕೆ ಅನುರೂಪವಾದ ಅಹಂಕಾರ ಮಮಕಾರ ಗಳಿಂದ ಕೂಡಿದ ಕರ್ಮಗಳವಾಸನೆಯೂ ಉಂಟಾಗುತ್ತದೆ. ಈ ವಾಸ ನೆಯಿಂದ ತಾನು ತನ್ನವರು ಎಂಬ ವಿಪರೀತವಾದ ಅಭಿಮಾನವೂ, ಅದರ ಫಲವಾಗಿ ಕರ್ಮಗಳ ಆರಂಭವೂ ಉಂಟಾಗುತ್ತಿರುತ್ತವೆ.

13, 14, 15. ಈ ಮೂರು ಶ್ಲೋಕಗಳಲ್ಲಿ ಕರ್ಮಯೋಗಿ ಯಾದ ಜೀವಾತ್ಮನನ್ನು **ವಶೀ** ಎಂದೂ, **ಪ್ರಭು** ಎಂದೂ, **ವಿಭು** ಎಂದೂ ಕ್ರಮವಾಗಿ ವಿವರಿಸಿ ಹೇಳಿದೆ. ಇದರ ಅರ್ಥ ವನ್ನು ಸ್ವಲ್ಪ ಗಮನಿಸಿ ತಿಳಿದುಕೊಳ್ಳಬೇಕು. ಕರ್ಮಯೋಗ ನಿಷ್ಠನಾದ ದೇಹಿಯಾದ ಜೀವಾತ್ಮನು ತನ್ನ ಇಂದ್ರಿಯಗಳನ್ನು ತನ್ನ ವಶದಲ್ಲಿ ಇಟ್ಟುಕೊಂಡು ಅವುಗಳಿಗೆ ತಾನು ವಶನಾಗದೇ ಇರುವುದರಿಂದ **ವಶೀ** ಎನ್ನಿಸಿಕೊಂಡಿದ್ದಾನೆ ಮತ್ತು ಆ ಇಂದ್ರಿಯ ಗಳನ್ನು ಪರಮಾತ್ಮನ ಪರವಾಗಿ ಆಳುತ್ತಾ ಅವುಗಳ ಯಜಮಾನ ನಂತೆ ಇರುವುದರಿಂದ ಅವನು **ಪ್ರಭು** ಎನ್ನಿಸಿಕೊಂಡಿದ್ದಾನೆ. ಅಂದರೇನು ಕರ್ಮಯೋಗಿಯು ನವದ್ವಾರವುಳ್ಳ ಈ ಶರೀರವನ್ನೇ ಒಂದು ಪಟ್ಟಣವಾಗಿ ಭಾವಿಸಿ, ಅದಕ್ಕ ಪರಮಾತ್ಮನೇ ಸಾರ್ವ ಭೌಮನೆಂದೂ, ತಾನು ಆ ಪರಮಾತ್ಮನ ಭೃತ್ಯನೆಂದೂ ಮತ್ತು ಆ ಪರಮಾತ್ಮನ ಕಾರ್ಯವನ್ನು ನಡೆಸುವ ಪೌರರಾದ ಇಂದ್ರಿಯಗಳನ್ನು ಪರಮಾತ್ಮನ ಪರವಾಗಿ ಆಳುವ ಅಧಿಕಾರಿಯೆಂದೂ ಭಾವಿಸಿ ಕೊಂಡು, ಇಂದ್ರಿಯಗಳನ್ನು ತನ್ನ ವಶದಲ್ಲಿ ಇಟ್ಟುಕೊಂಡು, ಕರ್ಮಗಳಾಗಲಿ ಕರ್ಮಗಳ ಫಲಗಳಾಗಲಿ ತನಗೆ ಸೇರಿದ್ದಲ್ಲ. ತಾನು ಕರ್ಮಗಳ ಕರ್ತೃವೂ ಅಲ್ಲ. ಪರಮಾತ್ಮನು ತನ್ನ ಶರೀರದ ಮೂಲಕ ಅದರ ಗುಣಗಳಿಗೆ ಅನುಸಾರವಾಗಿ ಕರ್ಮಗಳನ್ನು ಮಾಡಿಸುತ್ತಿದ್ದಾನೆ ಎಂಬ ಅನುಸಂಧಾನದೊಂದಿಗೆ ಕರ್ತವ್ಯ ಕರ್ಮಗಳನ್ನು ಮಾಡು ತ್ತಾನೆ. ಇದರಿಂದ ಅವನಿಗೆ ಚಿತ್ತಸ್ವಾಸ್ಥ್ಯವುಂಟಾಗಿ ಪರಮ ಶಾಂತಿ ಲಭಿಸುತ್ತದೆ. ಹಾಗಿಲ್ಲದೆ ಈ ಶರೀರಕ್ಕೆ ತಾನೇ ರಾಜ ನೆಂದೂ ಈ ಶರೀರದಲ್ಲಿರುವ ಇಂದ್ರಿಯ ಪ್ರಾಣಾದಿಗಳೆಲ್ಲಾ ತನ್ನ ಭೋಗಕ್ಕಾಗಿ ಇವೆ ಎಂದು ಭಾವಿಸಿ ಇಂದ್ರಿಯಗಳಿಗೆ ವಿಶೇಷ ಯೋಗ ಭೋಗಗಳಲ್ಲಿ ಮಗ್ನನಾಗಿ ಇರುವ ಭ್ರಷ್ಟ ಜೀವಾತ್ಮನಿಗೆ ಶಾಂತಿ ಇರುವುದಿಲ್ಲ ಎಂದು ಅಭಿಪ್ರಾಯ.

ಪ್ರಕೃತಿ ಸಂಬಂಧ ಹೊಂದಿರುವ ದೇಹಿಯಾದ ಜೀವಾತ್ಮನು ಒಂದು ಕ್ಷಣಕಾಲವೂ ಕರ್ಮಮಾಡದೆ ಇರಲಾರನೆಂದು ಹಿಂದೆ 3ನೇ ಅಧ್ಯಾಯದಲ್ಲಿ ಸ್ಪಷ್ಟವಾಗಿ ಹೇಳಿ, ಈಗ 13ನೇ ಶ್ಲೋಕದಲ್ಲಿ ನವ ದ್ವಾರವುಳ್ಳ ಈ ಶರೀರದಲ್ಲಿರುವ ಇಂದ್ರಿಯಗಳನ್ನು ವಶಪಡಿಸಿಕೊಂಡಿ ರುವ ಕರ್ಮಯೋಗಿಯಾದ ಜೀವಾತ್ಮನು ತಾನು ಯಾವ ಕೆಲಸವನ್ನು ಮಾಡದ ಮಾಡಿಸದ ಶಾಂತನಾಗಿದ್ದಾನೆ ಎಂದು ಹೇಳುವುದರ ಅರ್ಥವೇನು ಎಂದರೆ—ಜೀವಾತ್ಮನು ಬದ್ಧ ದೆಸೆಯಲ್ಲಿ ಸ್ವಸನಾತನ ಶರೀರದ ಮೂಲಕ ಕರ್ಮ ಮಾಡುತ್ತಿರುತ್ತಾನೆ. ಆದರೆ ಕರ್ಮ ಯೋಗಿಯಾದ ಜೀವಾತ್ಮನು ತನ್ನ ಇಂದ್ರಿಯಗಳನ್ನು ತನ್ನ ವಶ ಪಡಿಸಿಕೊಂಡು, ಅವುಗಳಿಗೆ ತಾನು ವಶನಾಗದೆ, ನಮ್ಮ ಕರ್ಮಗಳು ಪರಮಾತ್ಮನಿಗೆ ಸೇರಿದವು, ಅವುಗಳ ಫಲವೂ ಅವನಿಗೆ ಸೇರಿದ್ದು ಮತ್ತು ಆ ಕರ್ಮಗಳನ್ನು ತನ್ನ ಶರೀರದ ಮೂಲಕ ಶರೀರದ ಗುಣಗಳಿಗೆ ಅನುಸಾರವಾಗಿ ಮಾಡಿಸುತ್ತಿರುವವನೂ ಪರಮಾತ್ಮನೇ ಎಂಬ ಜ್ಞಾನವನ್ನು ಹೊಂದಿದವನಾಗಿ, ತಾನು ಯಾವ ಕಾರ್ಯವನ್ನೂ ಮಾಡುತ್ತಿಲ್ಲ, ಕಾರ್ಯವಾಗಲಿ, ಅದರ ಫಲವಾಗಲಿ ತನಗೆ ಸೇರಿದ್ದಲ್ಲ ಎಂಬ ಅನುಸಂಧಾನದೊಂದಿಗೆ ಕರ್ಮಗಳನ್ನು ಮಾಡು ತ್ತಾನೆ. ಅದ್ದರಿಂದ ಅವನು ಶಾರೀರಿಕವಾಗಿ ಕರ್ಮಗಳನ್ನು ಮಾಡುತ್ತಿ ದ್ದರೂ ಮಾನಸಿಕವಾಗಿ ಕರ್ಮತ್ಯಾಗ ಮಾಡಿ ಏನೂ ಕರ್ಮ ಮಾಡದವ ನಂತೆ ಶಾಂತ ಚಿತ್ತನಾಗಿರುತ್ತಾನೆ ಎಂದು ಅಭಿಪ್ರಾಯ. ಹೀಗೆ ಮಾನಸಿಕವಾಗಿ ಕರ್ಮದ ಕರ್ತೃತ್ವ ಮತ್ತು ಫಲಂಗ ತ್ಯಾಗ ಮಾಡುವುದೇ ಅಕರ್ತೃತ್ವಾನುಸಂಧಾನವು.

ಈ ರೀತಿ ಅಕರ್ತೃತ್ವಾನುಸಂಧಾನದೊಂದಿಗೆ ಕರ್ಮ ಮಾಡುತ್ತಿರುವ ಇಂದ್ರಿಯಗಳನ್ನು ವಶಪಡಿಸಿಕೊಂಡಿರುವ ವಶಿಯಾದ ಕರ್ಮಯೋಗಿ ಜೀವಾತ್ಮನು ಪ್ರಭುವೆನ್ನಿಸಿಕೊಳ್ಳುವನು ಅವನು ತನ್ನ ವಶದಲ್ಲಿರುವ ಇಂದ್ರಿಯಗಳಿಗೆ ಯಜಮಾನನಾಗಿರುವನು ಇಂದ್ರಿಯಗಳು ಅವನ ಮೇಲೆ ತಮ್ಮ ಪ್ರಭಾವವನ್ನು ಬೀರಲಾರವು ಇಂದ್ರಿಯಗಳು ತಮ್ಮ ಸ್ವಭಾವದಂತೆ ಕರ್ಮ ಮಾಡುತ್ತಿದ್ದರೂ, ಪ್ರಭುವಾದ ಜೀವಾತ್ಮನು ಅದನ್ನು ಸಾಕ್ಷಿಯಾಗಿ ನೋಡುತ್ತಾ ಇಂದ್ರಿಯಗಳು ಸರಿಯಾದ ಮಾರ್ಗದಲ್ಲಿ ಪ್ರವರ್ತಿಸುವಂತೆ ಪ್ರೇರೇಪಿಸಿ ನಿಯಮಿಸುವನೇ ಹೊರತು, ತಾನು ಸ್ವತಃ ಕರ್ತೃವಾಗಿ ಯಾವ ಕೆಲಸವನ್ನೂ ಮಾಡುವುದಿಲ್ಲ ಮತ್ತು ಆ ಕರ್ಮ ಫಲದಲ್ಲಿ ಆಸಕ್ತಿ ಹೊಂದಿದವನೂ ಆಗುವುದಿಲ್ಲ ಅಷ್ಟು ಮಾತ್ರವಲ್ಲದೆ ದೇಹಿಯಾದ ಈ ಕರ್ಮಯೋಗಿಯು ತನ್ನ ಧರ್ಮಭೂತ ಜ್ಞಾನಪ್ರಸಾರಣೆಯ ಮೂಲಕ ಮತ್ತು ಅನೇಕ ಜನ್ಮಗಳನ್ನು ಹೊಂದಿರುವುದರ ಮೂಲಕ ತಾನು **ವಿಭು** ಸ್ವರೂಪನೆಂದು ತಿಳಿಯುತ್ತಾನೆ ಅನೇಕ ಜನ್ಮಗಳಲ್ಲಿ ಅನೇಕ ದೇಹಗಳನ್ನು ಹೊಂದಿ ಆ ಕಾರಣದಿಂದ ವಿಭು ಸ್ವರೂಪನಾದ ದೇಹಿಯಾದ ತನಗೆ ಆಯಾ ಶರೀರಕ್ಕೆ ಸಂಬಂಧಪಟ್ಟ ಬಂಧುಗಳು ಆತ್ಮನಾದ ತನಗೆ ಸಂಬಂಧಪಟ್ಟವರಲ್ಲವೆಂದೂ ತಿಳಿಯುತ್ತಾನೆ ಮತ್ತು ಅವರ ಪುಣ್ಯಪಾಪಗಳಿಗೆ ತಾನು ಕಾರಣನಲ್ಲ ಮತ್ತು ಅದರ ಫಲವಾದ ಸುಖ ದುಃಖಗಳನ್ನು ಹೋಗಲಾಡಿಸಲು ತಾನು ಶಕ್ತನಲ್ಲ ಎಂದು ತಿಳಿದು ಶಾಂತಚಿತ್ತನಾಗಿರುತ್ತಾನೆ ಆದರೆ ಬಹುಮಂದಿ ಜನರು ತಮ್ಮ ಪೂರ್ವಾರ್ಜಿತ ಕರ್ಮಗಳ ವಾಸನೆಯಿಂದ ದೇಹದ ಮೇಲೂ ದೇಹದ ಬಂಧುಗಳ ಮೇಲೂ ಅಹಂಕಾರ ಮಮಕಾರಗಳಿಂದ ಮೋಹಗೊಂಡವರಾಗಿ, ತಮ್ಮ ಜ್ಞಾನವನ್ನು ಅಜ್ಞಾನದ ಮುಸುಕಿನಿಂದ ಮರೆಮಾಡಿ ತಮಗೆ ಪ್ರಿಯರಾದವರಿಗೆ ಸುಖವನ್ನೂ ಅಪ್ರಿಯರಾದವರಿಗೆ ದುಃಖವನ್ನೂ ಉಂಟುಮಾಡಬೇಕೆಂದು ಕರ್ಮಗಳಲ್ಲಿ ತೊಡಗುತ್ತಾರೆ ಇದರಿಂದ ಅವರಿಗೆ ಶಾಂತಿ ದೊರಕುವುದಿಲ್ಲ ಆದ್ದರಿಂದ ಕರ್ಮಯೋಗಿಯು ಈ ಅಜ್ಞಾನವನ್ನು ಹೋಗಲಾಡಿಸಿಕೊಂಡು, ಶರೀರವು ಕರ್ಮಯೋಗಾದಿಗಳನ್ನು ಅನುಷ್ಠಿಸಲು ಸಾಧನವಾದ ಧರ್ಮಕ್ಷೇತ್ರವೆಂದೂ, ಅದು ಪರಮಾತ್ಮನ ದೇವಾಲಯವೆಂದೂ, ತಾನೂ ಪರಮಾತ್ಮನ ಸೇವಕನೆಂದೂ ಭಾವಿಸಿ, ಪರಮಾತ್ಮನು ತನಗೆ ಪ್ರೇರಕನಾಗಿ ತನ್ನಿಂದ ಈ ದೇಹದ ಮೂಲಕ ತನ್ನ ಕೆಲಸಗಳನ್ನು ನಡೆಸಿಕೊಳ್ಳುತ್ತಾನೆಯೇ ವಿನಃ ತಾನು ಸ್ವತಃ ಕರ್ತನಲ್ಲವೆಂಬ ಅನುಸಂಧಾನ ಹೊಂದಿದವನಾಗಿರಬೇಕು ಪರಮಾತ್ಮನನ್ನು ಹೊಂದಲು ತನಗೆ ಈ ದೇಹವು ಪರಮಾತ್ಮನಿಂದ ಕೊಡಲ್ಪಟ್ಟಿದೆ, ಇದರ ಮೂಲಕ ಕರ್ಮಗಳನ್ನು ಅದರ ಫಲ ಕರ್ತೃತ್ವಾದಿಗಳಲ್ಲಿ ಮಮತಾರಹಿತನಾಗಿ ಆಚರಿಸುತ್ತಾ ಅವುಗಳಿಗೆ ತಾನು ಕರ್ತನಲ್ಲ, ತನಗೆ ಪ್ರಾಪ್ತವಾಗಿರುವ ದೇಹದ ಮೂಲಕ ಪರಮಾತ್ಮನು ಮಾಡಿಸುತ್ತಿದ್ದಾನೆ ಎಂಬ ಅನುಸಂಧಾನ ಮಾಡುತ್ತಾ ಇದ್ದರೆ ಅವನು ಶಾಂತಿ ಹೊಂದಿ ಪರಮ ಶ್ರೇಯಸ್ಸನ್ನು ಹೊಂದುತ್ತಾನೆ ಎಂದು ಅಭಿಪ್ರಾಯ ಹೀಗೆ ಕರ್ಮಯೋಗ ನಿಷ್ಠನಾದ ದೇಹಿಯಾದ ಜೀವಾತ್ಮನು ವಶಿಯಾಗಿಯೂ, ಪ್ರಭುವಾಗಿಯೂ, ವಿಭುವಾಗಿಯೂ ವರ್ತಿಸುತ್ತಾ, ದೇಹದ ಆಕಾರವಾಗಿ ಪರಿಣಾಮ ಹೊಂದಿರುವ ಪ್ರಕೃತಿಯಲ್ಲಿ ಕರ್ತೃತ್ವವನ್ನಿಟ್ಟು, ದೇಹದ ಮೂಲಕ ಸರ್ವದಾ ಕರ್ಮಗಳನ್ನು ಮಾಡುತ್ತಿದ್ದರೂ ಮಾನಸಿಕವಾಗಿ ಏನೂ ಮಾಡದೆ ನಿಲಿಪ್ತನಾಗಿ ಶಾಂತ ಚಿತ್ತನಾಗಿ ಇರುತ್ತಾನೆ ಎಂದು ಈ ಮೂರು ಶ್ಲೋಕಗಳಿಂದ ಶ್ರೀ ಕೃಷ್ಣನು ಉಪದೇಶ ಮಾಡಿದ್ದಾನೆ

### 3) ಕರ್ಮಯೋಗ ಅಭ್ಯಾಸದಿಂದ ಉಂಟಾಗುವ ಜ್ಞಾನದವಿವರಣೆ. (ಶ್ಲೋಕಗಳು 16ರಿಂದ 29)

ಹಿಂದೆ 4ನೇ ಅಧ್ಯಾಯದಲ್ಲಿ "ಸಮಸ್ತ ಕರ್ಮ ರೂಪವಾದ ಸಂಸಾರವನ್ನು ಜ್ಞಾನವೆಂಬ ತೆಪ್ಪದಿಂದ ದಾಟುತ್ತೀಯೆ"— "ಜ್ಞಾನವೆಂಬ ಅಗ್ನಿಯು ಸಮಸ್ತ ಪಾಪಗಳನ್ನೂ ದಹಿಸಿಬಿಡುತ್ತದೆ" —ಜ್ಞಾನಕ್ಕಿಂತ ಪವಿತ್ರವಾದುದಿಲ್ಲ" ಎಂದು ಹೇಳಿದ ವಿಷಯವನ್ನೇ ಇಲ್ಲಿ ಮತ್ತೆ ವಿವರಿಸಿ ತಿಳಿಸಿದ 15ನೇ ಶ್ಲೋಕದಲ್ಲಿ ಅಜ್ಞಾನದಿಂದ ಜ್ಞಾನವು ಮುಚ್ಚಲ್ಪಟ್ಟು ಜೀವಿಗಳು ಮೋಹವನ್ನು ಹೊಂದುತ್ತಾರೆ, ಆದ್ದರಿಂದ ಅಜ್ಞಾನವನ್ನು ಜ್ಞಾನದಿಂದ ಹೋಗಲಾಡಿಸಿಕೊಳ್ಳಬೇಕು ಎಂದು ಹೇಳಿ ಈಗ ಮುಂದ ಜ್ಞಾನದ ವಿಷಯವು ವಿವರಿಸಲ್ಪಟ್ಟಿದೆ

(1) ಅಜ್ಞಾನವು ನಾಶವಾದರೆ ಜ್ಞಾನವು ಎಲ್ಲವನ್ನೂ ಚೆನ್ನಾಗಿ ಪ್ರಕಾಶಗೊಳಿಸುತ್ತದೆ —(ಶ್ಲೋಕ 16)

**ಶ್ಲೋಕ 16**—"ಯಾವಜೀವಾತ್ಮರುಗಳ ಅಜ್ಞಾನವು (ಪ್ರಕೃತಿಸಂಬಂಧದಿಂದ ಉಂಟಾದ ಅಜ್ಞಾನವು) ಆತ್ಮವಿಷಯವಾದ ಜ್ಞಾನದಿಂದ ನಾಶಮಾಡಲ್ಪಟ್ಟಿದೆಯೋ ಅವರ ಶ್ರೇಷ್ಠವಾದ ಜ್ಞಾನವು ಸೂರ್ಯನ ಹಾಗೆ (ಎಲ್ಲವನ್ನೂ) ಪ್ರಕಾಶಗೊಳಿಸುತ್ತದೆ.

ಮೇಲೆ ಹೇಳಿದಂತೆ ಪ್ರಕೃತಿ ಸಂಬಂಧದಿಂದ ಉಂಟಾದ ಅಜ್ಞಾನದಿಂದ ಆವೃತರಾಗಿ ಮೋಹಗೊಂಡಿರುವ ಸಮಸ್ತ ಜೀವಾತ್ಮರುಗಳಲ್ಲಿ ಯಾರು ಯಾರು ಆತ್ಮ ಯಾಥಾತ್ಮ್ಯಸ್ವರೂಪವನ್ನು ಗುರೂಪದೇಶದಿಂದ ತಿಳಿದು, ಅದನ್ನು ಪ್ರತಿನಿತ್ಯವೂ ಅನುಸಂಧಾನ ಮಾಡುತ್ತಾ ಕರ್ಮನುಮಾಡುವ ಅಭ್ಯಾಸಮಾಡುತ್ತಾರೆಯೋ ಅವರಿಗೆ ಪರಿಶುದ್ಧವಾದ ಆತ್ಮವಿಷಯ ಜ್ಞಾನವು ಉತ್ಪನ್ನವಾಗುತ್ತದೆ ಅವರು ತಮಗೆ ಪ್ರಾಪ್ತವಾದ ಆ ಆತ್ಮವಿಷಯಜ್ಞಾನದಿಂದ ಅನಾದಿ ಕಾಲದಿಂದಲೂ ಅನುಸರಿಸಿಕೊಂಡು ಬಂದಿರುವ ಅನಂತಾನಂತವಾದ ಕರ್ಮವಾಸನೆಗಳ ಮಲರೂಪವಾದ ಮತ್ತು ತಮ್ಮ ಜ್ಞಾನವನ್ನು ಆವರಿಸಿಕೊಂಡಿರುವ ಅಜ್ಞಾನವನ್ನು ನಾಶಪಡಿಸಿಕೊಳ್ಳುತ್ತಾರೆ ಅಂತಹವರಿಗೆ ಅವರ ಸ್ವಾಭಾವಿಕವಾದ ಅಪರಿಮಿತವೂ ಅಸಂಕುಚಿತವೂ ಆದ ಧರ್ಮಭೂತಜ್ಞಾನವು ತೇಜೋರೂಪವಾದ ಸೂರ್ಯನಂತೆ ಸಮಸ್ತ ವಸ್ತುಗಳನ್ನೂ ಯಥಾವಸ್ಥಿತವಾಗಿ (ಅದು ಹೇಗಿದೆಯೋ ಹಾಗೆ) ಪ್ರಕಾಶಪಡಿಸುತ್ತದೆ

ಇಲ್ಲಿ ಮುಖ್ಯವಾಗಿ ಎರಡು ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ (1) "ತೇಷಾಂ" ಎಂದು ಅಜ್ಞಾನರಹಿತರಾದ ಆತ್ಮರುಗಳ ಬಹುತ್ವವನ್ನು ಹೇಳಿ ಜೀವಾತ್ಮರುಗಳ ಬಹುತ್ವವು ಪ್ರತಿಪಾದಿಸಲ್ಪಟ್ಟಿದೆ. ಹಿಂದೆ "ನತ್ವೇವಾಹಂ" ಎಂಬ ಶ್ಲೋಕದಲ್ಲಿ ತಿಳಿಸಿದ ಈ ವಿಷಯವು ಇಲ್ಲಿ ಸ್ಪಷ್ಟವಾಗಿ ಮತ್ತೆ ವಿವರಿಸಲ್ಪಟ್ಟಿದೆ "ತೇಷಾಂ" ಎಂಬುದು ಅಜ್ಞಾನ ರಹಿತರಾದ ಆತ್ಮರುಗಳನ್ನು ಹೇಳುವುದರಿಂದ ಇಲ್ಲಿ ಆತ್ಮರುಗಳ ಬಹುತ್ವವು ಉಪಾಧಿಕೃತವಾದುದೆಂದು ಹೇಳಲಾಗುವುದಿಲ್ಲ

(2) "ತೇಷಾಂ ಆದಿತ್ಯವತ್ ಜ್ಞಾನಂ ಪ್ರಕಾಶಯತೀ" ಅಂದರೆ ಆ ಆತ್ಮರುಗಳ ಜ್ಞಾನವು ಸೂರ್ಯನಂತೆ (ಎಲ್ಲವನ್ನೂ) ಪ್ರಕಾಶಗೊಳಿಸುತ್ತದ-ಎಂದು ಹೇಳಿರುವುದರಿಂದ ಜ್ಞಾನವು ಆತ್ಮನ ಸ್ವರೂಪವನ್ನು ಬಿಡದೆ ಸಂಬಂಧಿಸಿಕೊಂಡೆ ಇರುವ ಒಂದು ಧರ್ಮವೆಂದು ಅರ್ಥವಾಗುತ್ತದೆ ಧರ್ಮಿಯಾದ ಆತ್ಮನ ಸ್ವರೂಪವೂ ಜ್ಞಾನವೇ ಆಗಿದೆ ಮತ್ತು ಅವನ ಧರ್ಮವೂ ಜ್ಞಾನವೇ ಆಗಿದೆ ಎಂದು ಭಾವ ಅಂದರೆ ಆತ್ಮನು ಜ್ಞಾನಸ್ವರೂಪನು ಮತ್ತು ಜ್ಞಾನಗುಣಕನೂ ಆಗಿದ್ದಾನೆ ಎಂಬ ವಿಷಯವು ಸ್ಪಷ್ಟವಾಗುತ್ತದ. ಆತ್ಮನು ಸ್ವತಃ ಜ್ಞಾನಸ್ವರೂಪನಾಗಿ ಸೂರ್ಯನಂತೆ ತನ್ನಷ್ಟಕ್ಕೆ ತಾನೇ ಪ್ರಕಾಶಿಸುತ್ತಾನೆ ಮತ್ತು ಜ್ಞಾನವನ್ನು ಧರ್ಮವಾಗಿ ಹೊಂದಿರುವುದರಿಂದ, ಆ ಧರ್ಮಭೂತಜ್ಞಾನವು ಸೂರ್ಯನಂತೆ ಸಮಸ್ತವಸ್ತುಗಳನ್ನೂ ಅವನಿಗೆ (ಆತ್ಮನಿಗೆ) ಪ್ರಕಾಶಗೊಳಿಸುತ್ತದೆ ಆದ್ದರಿಂದ ಇಲ್ಲಿ ಸೂರ್ಯನ ದೃಷ್ಟಾಂತದಿಂದ ಜ್ಞಾತಾವಾದ ಆತ್ಮನಿಗೂ ಅವನ ಧರ್ಮವಾದ ಜ್ಞಾನಕ್ಕೂ ಸೂರ್ಯ ಮತ್ತು ಅವನಲ್ಲಿರುವ ಪ್ರಭೆ ಇವುಗಳ ಹಾಗೆ ಇರುವಿಕೆಯು ಹೇಳಲ್ಪಟ್ಟಿದೆ (ಅಂದರೆ ಒಂದನ್ನು ಬಿಟ್ಟು ಒಂದು ಇರಲಾರದ ಅಪೃಥಕ್ಸಿದ್ಧ ಸಂಬಂಧವು ಹೇಳಲ್ಪಟ್ಟಿದೆ ಎನ್ನುವುದು) ಈ ಧರ್ಮಭೂತಜ್ಞಾನವು ಶುದ್ಧಾತ್ಮನಿಗ ಸ್ವಭಾವವಾದ ಜ್ಞಾನವಾಗಿದ್ದರೂ ಪ್ರಕೃತಿ ಸಂಬಂಧದಿಂದ ಉಂಟಾದ ಕರ್ಮದಿಂದ ಅದು ಮರೆಸಿಹೋಗಿ ಸಂಕುಚಿತವಾಗಿರುತ್ತದ ಆತ್ಮಸ್ವರೂಪಜ್ಞಾನವುಂಟಾಗಿ ಕರ್ಮ ಮತ್ತು ಜ್ಞಾನಾದಿಗಳು ನಾಶವಾದ ಒಡನೆಯೇ ಧರ್ಮಭೂತಜ್ಞಾನವು ಸೂರ್ಯನಂತೆ ಪ್ರಜ್ವಲಿಸುತ್ತದೆ ಸೂರ್ಯನ ಪ್ರಕಾಶವು ಯಾವುದಾದರೂ ಅದಕೆ ಅಡ್ಡಬಂದಾಗ ಸಂಕೋಚಹೊಂದುತ್ತದೆ ಮತ್ತು ಅದು ನಿವೃತ್ತಿಯಾದ ಒಡನೆಯೇ ಚನ್ನಾಗಿ ಪ್ರಕಾಶಿಸುತ್ತದೆ ಅದೇ ರೀತಿ ಸಂಸಾರ ದಶೆಯಲ್ಲಿ ಕರ್ಮಗಳ ಮೂಲಕ ಧರ್ಮಭೂತಜ್ಞಾನಕ್ಕೆ ಸಂಕೋಚವುಂಟಾಗುತ್ತದ ಮತ್ತು ಮೋಕ್ಷದಶೆಯಲ್ಲಿ ಅದು ನಿವೃತ್ತಿಯಾಗಿ ಈ ಧರ್ಮಭೂತಜ್ಞಾನಕ್ಕೆ ವಿಕಾಸವುಂಟಾಗುತ್ತದ ಎಂದು ಅಭಿಪ್ರಾಯ

**ಶ್ಲೋಕ 17**—"ಆತ್ಮನಲ್ಲಿ ಬುದ್ಧಿಯುಳ್ಳವರು, ಆತ್ಮನಲ್ಲಿಯೇ ಮನಸ್ಸುಳ್ಳವರು, ಆತ್ಮನನ್ನು ಹೊಂದುವ ಅಭ್ಯಾಸದಲ್ಲೇ

ನಿರತರಾದವರು, ಆದನ್ನೇ ಪರಮ ಪ್ರಯೋಜನವೆಂದು ತಿಳಿದವರು ಜ್ಞಾನದಿಂದ ಹೋಗಲಾಡಿಸಲ್ಪಟ್ಟ ಕಲ್ಮಷವುಳ್ಳವರಾಗಿ ಪುನರ್ಜನ್ಮವಿಲ್ಲದ ಆನನ್ದಮಯವಾದ ಶುದ್ಧಾತ್ಮಸ್ವರೂಪವನ್ನು ಹೊಂದುವರು."

ಮೇಲೆ ವಿವರಿಸಿದ ಆತ್ಮದರ್ಶನದಲ್ಲಿ ನಿಶ್ಚಯಬುದ್ಧಿಯುಳ್ಳವರೂ, ಆತ್ಮದರ್ಶನ ವಿಷಯದಲ್ಲೇ ಆಸಕ್ತವಾದ ಮನಸ್ಸುಳ್ಳವರೂ, ಇತರ ವಿಷಯಗಳಲ್ಲಿ ವಿಮುಖರಾಗಿ ಆತ್ಮದರ್ಶನ ಅಭ್ಯಾಸದಲ್ಲೇ ನಿರತರಾದವರೂ, ಆತ್ಮದರ್ಶನವೇ ಪರಮ ಪ್ರಯೋಜನವೆಂದು ದೃಢಬುದ್ಧಿಯುಳ್ಳವರೂ ಆಗಿರುವವರಿಗೆ, ಪ್ರತಿದಿನವೂ ಇದೇರೀತಿ ಕಾಯೇನ ಬುದ್ಧ್ಯಾ ಮನಸಾ ಅಭ್ಯಾಸ ಮಾಡುವುದರಿಂದ ಪ್ರಾಪ್ತವಾಗುವ ಜ್ಞಾನದಿಂದ ಸಮಸ್ತ ಪ್ರಾಚೀನ ಕರ್ಮಗಳೂ ನಾಶವಾಗುತ್ತವೆ. ಅಂತಹವರು ಮೇಲೆ ಹೇಳಿದ ಸ್ವರೂಪದಿಂದ ಕೂಡಿದ ಪುನರಾವೃತ್ತಿರಹಿತವಾದ ಆತ್ಮಸಾಕ್ಷಾತ್ಕಾರವನ್ನು ಹೊಂದುತ್ತಾರೆ ಅಂದರೆ ಯಾವ ಅವಸ್ಥೆಯನ್ನು ಹೊಂದಿದರೆ ಮತ್ತೆ ಸಂಸಾರಕ್ಕೆ ಹಿಂತಿರುಗಿ ಬರುವ ಪುನರಾವೃತ್ತಿ ಇಲ್ಲವೋ ಅಂತಹ ತನ್ನ ಶುದ್ಧಾತ್ಮಸ್ವರೂಪವನ್ನು ಹೊಂದುತ್ತಾರೆ ಎಂದು ಅರ್ಥ (ಇಲ್ಲಿ ಬರೀ ಶಾಸ್ತ್ರಜನ್ಯವಾಕ್ಯಾರ್ಥಜ್ಞಾನ ಮಾತ್ರ ಇದ್ದರೆ ಸಾಲದು ಕಾಯೇನ ಬುದ್ಧ್ಯಾ ಮನಸಾ ಅಭ್ಯಾಸ ಮಾಡಬೇಕೆಂದು ಹೇಳಿದ ಹಾಗಾಯಿತು )

**ಶ್ಲೋಕ 18**—" ಪಂಡಿತರು (ಆತ್ಮಜ್ಞಾನಿಗಳು) ವಿದ್ಯಾವಿನಯ ಸಂಪನ್ನರಾದವರಲ್ಲಿಯೂ, ಬ್ರಾಹ್ಮಣರಲ್ಲಿಯೂ, ಹಸುವಿನಲ್ಲೂ, ಆನೆಯಲ್ಲೂ, ನಾಯಿಯಲ್ಲೂ, ನಾಯಿ ಮಾಂಸ ತಿನ್ನುವ ಚಂಡಾಲರಲ್ಲೂ, (ಅವರೆಲ್ಲರಲ್ಲಿರುವ ಶುದ್ಧಾತ್ಮನಲ್ಲಿ) ಸಮದರ್ಶಿಗಳಾಗಿರುವರು "

ವಿದ್ಯಾವಿನಯ ಸಂಪನ್ನಯುಕ್ತರು, ಕೇವಲ ಬ್ರಾಹ್ಮಣರು, ಗೋವು, ಆನೆ, ನಾಯಿ, ಚಂಡಾಲರು ಮುಂತಾಗಿ ಅತ್ಯಂತ ತಾರತಮ್ಯವಿರುವ ಈ ಸಮಸ್ತ ಜಂತುಗಳ ಆತ್ಮಗಳಲ್ಲಿ ಆತ್ಮನ ಯಥಾರ್ಥ ಸ್ವರೂಪವನ್ನು ತಿಳಿದ ಪಂಡಿತರುಗಳು ಜ್ಞಾನೈಕ ಆಕಾರತೆಯಿಂದ ಸಮತ್ವವನ್ನು ಕಾಣುವರು. ಅಂದರೆ ಸಾತ್ವಿಕನಾದ ಮಹಾಪುರುಷನಿಂದ ಹಿಡಿದು ತುಂಬ ನಿಕೃಷ್ಟನಾದ ಚಂಡಾಲನವರೆಗಿನ, ಸಮಸ್ತ ಮಾನವರ ಮತ್ತು ಆನೆ ನಾಯಿ ಮುಂತಾದ ಸಮಸ್ತ ಪ್ರಾಣಿಗಳಲ್ಲಿ ಪ್ರತ್ಯಕ್ಷವಾಗಿ ಕಂಡು ಬರುವ ವಿಷಮಾಕಾರವೆಲ್ಲವೂ ಪ್ರಕೃತಿಗೆ ಸಂಬಂಧಪಟ್ಟ ಶರೀರಕ್ಕೆ ಸೇರಿದ್ದೇ ಹೊರತು ಆತ್ಮನಿಗೆ ಸೇರಿದ್ದಲ್ಲ, ಅವುಗಳೆಲ್ಲದರ ಒಳಗೆ ಇರುವ ಆತ್ಮವು ಜ್ಞಾನ ಒಂದನ್ನೇ ತನ್ನ ಆಕಾರವಾಗಿ ಹೊಂದಿರುವುದರಿಂದ ಒಂದೇ ಸ್ವರೂಪವುಳ್ಳದ್ದಾಗಿದೆ. ಆದ್ದರಿಂದ ಎಲ್ಲಾ ಶರೀರಗಳಲ್ಲಿರುವ ಆತ್ಮರುಗಳೂ ಜ್ಞಾನ ಒಂದನ್ನೇ ಸ್ವರೂಪವಾಗಿ ಹೊಂದಿ ಸಮವಾಗಿವೆ ಎಂದು ತಿಳಿಯುತ್ತಾರೆ ಎಂದು ಅರ್ಥ.

ಇಲ್ಲಿ ಒಂದು ಮುಖ್ಯವಾದ ವಿಷಯವನ್ನು ಗಮನಿಸಬೇಕು. ಪ್ರಕೃತಿಯಿಂದ ಬಿಡಲ್ಪಟ್ಟ ಶುದ್ಧ ಆತ್ಮರುಗಳೆಲ್ಲಾ ಜ್ಞಾನ ಒಂದನ್ನೇ ಸ್ವರೂಪವಾಗಿ ಹೊಂದಿ ಸಮರಾಗಿರುವರು ಎಂದು ಇಲ್ಲಿ ಹೇಳಿದಯೇ ವಿನಃ ದೇಹದೊಂದಿಗೆ ಸೇರಿರುವಾಗ ಅವುಗಳಲ್ಲಿ ಪರಸ್ಪರ ವ್ಯತ್ಯಾಸವು ತಪ್ಪಿದ್ದಲ್ಲ. ಆಯಾ ದೇಹಗಳಿಗೆ ಸಂಬಂಧಪಟ್ಟ ಸಾತ್ವಿಕಾದಿಗುಣ ವೈಷಮ್ಯವು ಅವುಗಳಲ್ಲಿ ಇದ್ದೇ ಇರುತ್ತದೆ. ಆದರೆ ಆತ್ಮ ಸ್ವರೂಪದ ಯಥಾರ್ಥಜ್ಞಾನವುಳ್ಳ ಪಂಡಿತರು ಸಮಸ್ತ ಜೀವಜಂತುಗಳ ಆತ್ಮವೂ ಜ್ಞಾನೈಕಾಕಾರತೆಯಿಂದ ಸಮವಾಗಿರುವುದರಿಂದ ಯಾರನ್ನೂ ದ್ವೇಷಿಸದ, ತಿರಸ್ಕರಿಸದ, ಸಮಭಾವನೆಯಿಂದ ನೋಡುತ್ತಾರೆ ಎಂದು ಅಭಿಪ್ರಾಯ. ಇಲ್ಲಿ ಆತ್ಮರುಗಳೆಲ್ಲ ಸಮರು ಎಂದು ಹೇಳಿರುವುದರಿಂದ ಆತ್ಮರುಗಳ ಬಹುತ್ವವು ಪ್ರತಿಪಾದಿಸಲ್ಪಟ್ಟಿದೆ. ಒಂದೇ ಆತ್ಮವಿರುವುದಾದರೆ ಆತ್ಮರುಗಳಿಗೆ ಏಕತ್ವವು ಹೇಳಬೇಕೇ ವಿನಃ ಸಮತ್ವವನ್ನು ಹೇಳಲಾಗುವುದಿಲ್ಲ )

**ಶ್ಲೋಕ 19**—ಮೇಲಿನ ಶ್ಲೋಕದಲ್ಲಿ ಹೇಳಿರುವ ಸಮದರ್ಶಿತ್ವವನ್ನು ಹೊಂದಿರುವವರು ಈ ಸಂಸಾರದಲ್ಲಿದ್ದುಕೊಂಡೇ ಜಯಹೊಂದುತ್ತಾರೆ ಎಂದು ಈ ಶ್ಲೋಕವು ತಿಳಿಸುತ್ತದೆ.

'ಯಾರ ಮನಸ್ಸು ಆತ್ಮರುಗಳು ಜ್ಞಾನೈಕಾಕಾರದಿಂದ ಸಮರು ಎಂಬ ಸಮತ್ವ ದರ್ಶನದಲ್ಲಿ ಇರುತ್ತದೆಯೋ ಅವರುಗಳಿಂದ ಈ ಜನ್ಮದಲ್ಲಿಯೇ ಸಂಸಾರವು ಜಯಿಸಲ್ಪಟ್ಟಿದೆ (ಅವರಿಗೆ ಸಾಂಸಾರಿಕ ಕ್ಲೇಶಾದಿಗಳ ಬಾಧೆಯಿರುವುದಿಲ್ಲ) ಏಕೆಂದರೆ ಪ್ರಕೃತಿ ಸಂಬಂಧವಿಲ್ಲದ ಆತ್ಮವಸ್ತುವು ದೋಷರಹಿತವಾಗಿಯೂ ಇರುತ್ತದೆ. ಆದ್ದರಿಂದ ಸಮದರ್ಶಿಗಳಾದ ಅವರು ಬ್ರಹ್ಮದಲ್ಲಿಯೇ (ಅಂದರೆ ಆತ್ಮಸಾಕ್ಷಾತ್ಕಾರದಲ್ಲಿಯೇ) ಇರುತ್ತಾರೆ.

ಯಾವ ಕರ್ಮಯೋಗಿಗೆ ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಆತ್ಮರುಗಳೆಲ್ಲಾ ಜ್ಞಾನೈಕಾಕಾರತೆಯಿಂದ ಸಮರು ಎಂಬ ಭಾವನೆಯು ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲುತ್ತದೆಯೋ, ಅವನು ಇಲ್ಲಿಯೇ ಅಂದರೆ ಅವನ ಸಾಧನಾನುಷ್ಠಾನ ಕಾಲದಲ್ಲೇ ಸಂಸಾರವನ್ನು ಜಯಿಸುತ್ತಾನೆ. ಪ್ರಕೃತಿ ಸಂಬಂಧದೋಷದಿಂದ ಬಿಡಿಸಲ್ಪಟ್ಟ ಸಮತ್ವವನ್ನು ಹೊಂದಿರುವ ಆತ್ಮವಸ್ತುವೇ ಇಲ್ಲಿ ಬ್ರಹ್ಮವೆಂದು ಕರೆಯಲ್ಪಟ್ಟಿದೆ. ಆದ್ದರಿಂದ ಈ ಶುದ್ಧ ಆತ್ಮಸ್ವರೂಪದ ಸಾಮ್ಯತೆ

ಯನ್ನು ಮನಸ್ಸಿನಲ್ಲಿ ಸ್ಥಿರಪಡಿಸಿಕೊಂಡವನು ಬ್ರಹ್ಮದಲ್ಲೇ ಅಂದರೆ ಜೀವಾತ್ಮತತ್ತ್ವ ಅನುಸಂಧಾನದಲ್ಲೇ ಇರುವವನಾಗುವನು. ಹೀಗೆ ಆತ್ಮತತ್ತ್ವ ಅನುಸಂಧಾನದಲ್ಲೇ ಇರುವ ಸ್ಥಿತಿಯೇ ಸಂಸಾರ ಜಯವು. ಆದ್ದರಿಂದ ಜೀವಾತ್ಮರುಗಳೆಲ್ಲಾ ಜ್ಞಾನೈಕಾಕಾರತೆ ಯಿಂದ ಸಮರು ಎಂಬ ಅನುಸಂಧಾನದಲ್ಲಿರುವವರು ಮುಕ್ತರಿಗೆ ಸಮಾನರು ಎಂದು ಅರ್ಥ

**ಶ್ಲೋಕ 20**—ಸಮದರ್ಶನರೂಪವಾದ ಜ್ಞಾನಪರಿಪಕ್ವತೆ ಉಂಟಾಗಬೇಕಾದರೆ ಕರ್ಮಯೋಗಿಯು ಯಾವರೀತಿ ಇರಬೇಕು ಎಂಬುದು ಇನ್ನುಮುಂದೆ ನಿರ್ದಿಷ್ಟಪಟ್ಟಿದೆ—'ಸ್ಥಿರವಾದ ಆತ್ಮನಲ್ಲಿ ಬುದ್ಧಿ ಉಳ್ಳವನಾಗಿ, ದೇಹಾತ್ಮ ಭ್ರಮೆಯಿಂದ ಮೂಢನಾಗಿಲ್ಲದೆ, ಆತ್ಮಸ್ವರೂಪವನ್ನು ತಿಳಿದವನಾಗಿ, ಆತ್ಮಸ್ವರೂಪಾನುಸಂಧಾನ ದಲ್ಲಿಯೇ ಇರುವ ಪುರುಷನು ತನಗೆ ಪ್ರಿಯವಾದುದು ಪ್ರಾಪ್ತ ವಾದಾಗ ಉದ್ವೇಗ ಹೊಂದಕೂಡದು."

ಆತ್ಮಸ್ವರೂಪದ ಯಥಾರ್ಥಜ್ಞಾನವನ್ನು ಉಪದೇಶದ ಮೂಲಕ ತಿಳಿದು ಅದನ್ನೇ ಅನುಸಂಧಾನ ಮಾಡುತ್ತಾ ಆತ್ಮ ಜ್ಞಾನದಲ್ಲೇ ಮನಸ್ಸನ್ನು ನಿಲ್ಲಿಸುವ ಅಭ್ಯಾಸಮಾಡುತ್ತಾ ಬಂದರೆ ದೇಹಾತ್ಮಭ್ರಮೆಯು ನಾಶವಾಗುವುದು ಇದರಿಂದ ಆತ್ಮನು ಸ್ಥಿರನೆಂದೂ ಶರೀರವು ಅಸ್ಥಿರವೆಂದೂ ತಿಳಿದು ಸ್ಥಿರವಾದ ಆತ್ಮನ ಬುದ್ಧಿಯು ನೆಲಸಿ ಅವನು ಸ್ಥಿರಬುದ್ಧಿಯುಳ್ಳವನಾಗುವನು ಮತ್ತು ಅಸ್ಥಿರವಾದ ಶರೀರದೊಂದಿಗೆ ಸ್ಥಿರನಾದ ಆತ್ಮನನ್ನು ಒಂದಾಗಿ ಭಾವಿಸುವ ಮೋಹವನ್ನು ಹೊಂದದೆ ಅವನು ಅಸಂಮೂಢನಾಗು ವನು ಯಾವಾಗ ಸ್ಥಿರಬುದ್ಧಿಯುಳ್ಳವನೂ ಅಸಂಮೂಢನೂ (ದೇಹಾತ್ಮಭ್ರಮಾರಹಿತನೂ) ಆಗುವನೋ ಆಗ ಅವನು ಯಾವ ವಿಧವಾದ ದೇಹವನ್ನೊಂದಿರಲಿ, ಯಾವ ಅವಸ್ಥೆಯಲ್ಲಿರಲಿ, ತನ್ನ ಪ್ರಾಚೀನ ಕರ್ಮಾನುಗುಣವಾಗಿ ತನಗೆ ಸುಖವು ಪ್ರಾಪ್ತವಾದಾಗ ಹರ್ಷರಹಿತನಾಗಿಯೂ, ದುಃಖವು ಪ್ರಾಪ್ತವಾದಾಗ ಉದ್ವೇಗ ರಹಿತನಾಗಿಯೂ ಇರುವನು ಅಂದರೇನು—ತತ್ತ್ವವಿತ್ತುಗಳ ಉಪದೇಶದಿಂದ ಆತ್ಮಯಥಾರ್ಥರೂಪಜ್ಞಾನ ಹೊಂದಿದವನು ಆತ್ಮ ದರ್ಶನಪ್ರಾಪ್ತಿಗಾಗಿಯೇ ಪ್ರಯತ್ನಮಾಡುತ್ತಾ, ದೇಹವೇ ಆತ್ಮ ವೆಂಬ ಅಭಿಮಾನವನ್ನು ಬಿಟ್ಟು, ಸ್ಥಿರವಾದ ಆತ್ಮದರ್ಶನ ರೂಪ ಪ್ರಿಯ ಅನುಭವದಲ್ಲಿ ಚೆನ್ನಾಗಿ ನಿಂತವನಾಗಿರಬೇಕು ಮತ್ತು ಪ್ರಕೃತಿ ಸಂಬಂಧದಿಂದ ಉಂಟಾಗುವ ಅಸ್ಥಿರವಾದ ಪ್ರಿಯ ಮತ್ತು ಅಪ್ರಿಯವಾದ ಅನುಭವಗಳನ್ನು ಹೊಂದಿದಾಗ ಹರ್ಷ ಮತ್ತು ಉದ್ವೇಗಗಳನ್ನು ಹೊಂದಕೂಡದು ಎಂದು ಅರ್ಥ

**ಶ್ಲೋಕ 21**—'ಯಾವಾಗ ವಿಷಯಾನುಭವದಲ್ಲಿ ಆಸಕ್ತಿ ಇಲ್ಲದವನಾಗಿ ಆತ್ಮನಲ್ಲಿಯೇ ಸುಖವನ್ನು ಹೊಂದು ತ್ತಾನೆಯೋ ಆಗ ಅವನು ಬ್ರಹ್ಮಯೋಗಯುಕ್ತ (ಆತ್ಮಾನು ಸಂಧಾನಯುತ) ಮನಸ್ಸುಳ್ಳವನಾಗಿ ನಾಶರಹಿತವಾದ (ಆತ್ಮಾ ನುಭವರೂಪವಾದ) ಸುಖವನ್ನು ಹೊಂದುತ್ತಾನೆ"—

ಮೇಲೆಹೇಳಿದ ಪ್ರಕಾರ ಆತ್ಮವ್ಯತಿರಿಕ್ತವಾದ ಪ್ರಾಪಂಚಿಕ ವಿಷಯಾನುಭವಗಳಲ್ಲಿ ಆಸೆಯನ್ನು ತ್ಯಜಿಸಿ ಯಾರೂ ಒಳಗಿರುವ ಆತ್ಮನ ವಿಷಯವಾಗಿಯೇ ಯಾವಾಗಲೂ ಆಸಕ್ತಿ ಉಳ್ಳವರಾಗಿರು ತ್ತಾರೆಯೋ ಅವರು ಪ್ರಾಕೃತಿಕ ವಿಷಯ ಚಿಂತನೆಯ ಅಭ್ಯಾಸ ವನ್ನು ಬಿಟ್ಟು ಕೇವಲ, ಆತ್ಮಸಾಕ್ಷಾತ್ಕಾರದಲ್ಲಿಯೇ ಮನಸ್ಸುಳ್ಳವ ರಾಗಿ ಆತ್ಮಾನುಭವರೂಪವಾದ ನಿರತಿಶಯ ಆನಂದವನ್ನು ಹೊಂದು ತ್ತಾರೆ (ಸಾಂಸಾರಿಕ ಸುಖಗಳು ದುಃಖ ಮಿಶ್ರವಾದವುಗಳಾಗಿವೆ. ಆದರೆ "ಅಕ್ಷಯಂ ಸುಖಂ' ಎಂಬ ದುಃಖ ಮಿಶ್ರವಿಲ್ಲದ ಸುಖವು ಪ್ರಕೃತಿವಿಯುಕ್ತ ಜೀವಾತ್ಮಸಾಕ್ಷಾತ್ಕಾರದಿಂದ ಪ್ರಾಪ್ತವಾಗುತ್ತದೆ ಎಂದು ಈ ಶ್ಲೋಕದಲ್ಲಿ ತಿಳಿದಿದೆ.

**ಶ್ಲೋಕ 22**—ಪ್ರಕೃತಿ ಸಂಬಂಧದಿಂದ ಉಂಟಾಗುವ ವಿಷಯಭೋಗಗಳನ್ನು ಸಂಪೂರ್ಣವಾಗಿ ಬಿಟ್ಟುಬಿಡಬೇಕು ಎಂದು ಈ ಶ್ಲೋಕವು ತಿಳಿಸುತ್ತದೆ—'ವಿಷಯೇಂದ್ರಿಯಗಳ ಸಂಬಂಧದಿಂದ ಉಂಟಾಗುವ ಭೋಗಗಳೆಲ್ಲವೂ ದುಃಖ ಹೇತು ವಾದವುಗಳು ಮತ್ತು ಆದಿ ಅಂತ್ಯಗಳಿಂದ ಕೂಡಿದವುಗಳು ಆಗಿವೆ ಆದ್ದರಿಂದ ಎಲೈ ಅರ್ಜುನನೇ ಬುದ್ಧಿವಂತರಾದ ಪುರುಷರು ಅವುಗಳಲ್ಲಿ ಆಸಕ್ತರಾಗಿ ರಮಿಸುವುದಿಲ್ಲ '—

ವಿಷಯಗಳು ಇಂದ್ರಿಯಗಳನ್ನು ಸ್ಪರ್ಶಿಸುವುದರಿಂದ ಉಂಟಾಗುವ ಈ ಭೋಗಗಳು ದುಃಖಕ್ಕೆ ಕಾರಣವಾದುವುಗಳಾ ಗಿವೆ ಅಂದರೆ ಅವು ಮುಂದೆ ದುಃಖವನ್ನು ಉಂಟುಮಾಡು ವಂತಹವುಗಳಾಗಿವೆ ಮತ್ತು ಆದಿಅಂತ್ಯವುಳ್ಳವುಗಳಾಗಿವೆ ಅಂದರೆ ಅವು ಅಲ್ಪಕಾಲ ವರ್ತಿಗಳಾಗಿವೆ ಆದ್ದರಿಂದ ಆ ಭೋಗಗಳ ಈ ಯಥಾರ್ಥ ಸ್ವರೂಪವನ್ನು ತಿಳಿದ ಪುರುಷರು ಅವುಗಳಲ್ಲಿ ಆಸಕ್ತಿ ಹೊಂದಿ ರಮಿಸುವುದಿಲ್ಲ

**ಶ್ಲೋಕ 23**—"ಯಾರು ಶರೀರವನ್ನು ಬಿಡುವುದಕ್ಕೆ ಮೊದಲು ಇಲ್ಲಿಯೇ ಕಾಮಕ್ರೋಧದಿಂದ ಉಂಟಾಗುವ ವೇಗವನ್ನು ಸಹಿಸಲು ಸಮರ್ಥನಾಗುತ್ತಾನೆಯೋ ಆ ಮನುಷ್ಯನು ಆತ್ಮಾನು ಭವಕ್ಕೆ ಯೋಗ್ಯನು , ಅವನೇ ಸುಖಿಯು

ಪ್ರಿಯನೂ ಆದವರಿಗೂ, ಸೇವೆ ಮಾಡುವುದು ತುಂಬಾ ಹಿತಕರನಾಗಿಯೂ ಸುಖಕರವಾಗಿಯೂ ಇರುವುದು ಪ್ರತ್ಯಕ್ಷ ಸಿದ್ಧವಾಗಿದೆ ಎಲ್ಲವೆ ಅಂದಮೇಲೆ ನಾವುಮಾಡುವ ಯಜ್ಞತಪಸ್ಸು ಮುಂತಾದ ಕರ್ಮಗಳಭೋಕ್ತೃವುಸಮಗೆಲ್ಲಾ ಪರಮಸುಹೃತ್ತಾಗಿರುವ ಸರ್ವಲೋಕಮಹೇಶ್ವರನಾಗಿರುವ ಪರಮಾತ್ಮನೇ ಎಂಬ ಜ್ಞಾನವನ್ನು ಹೊಂದಿ (ಇದು ಜ್ಞಾತ್ವಾ ಎಂಬ ಪದದಿಂದ ಈ ಶ್ಲೋಕದಲ್ಲಿ ಸ್ಪಷ್ಟವಾಗಿ ತಿಳಿಸಿದೆ) ಕರ್ಮಮಾಡುವ ಕರ್ಮಯೋಗಿಗೆ ಆಯಾಸವಾಗಲಿ ಕ್ಲೇಶವಾಗಲಿ ಆಗುವುದಿಲ್ಲ ಅವನಿಗೆ ತನಗೆ ಅತ್ಯಂತ ಹಿತನೂ ಸ್ವಾಮಿಯೂ ಆದ ಪರಮಾತ್ಮನ ಸೇವೆ ಮಾಡುವುದು ಅತ್ಯಂತ ತೃಪ್ತಿಕರವೂ ಸುಖಶಾಂತಿಯುತವೂ ಆಗಿರುವುದರಲ್ಲಿ ಸಂದೇಹವೇ ಇಲ್ಲ

**ಈ ಅಧ್ಯಾಯದ ಸಾರಾಂಶ—**

ಈ ಅಧ್ಯಾಯದಲ್ಲಿ ಮುಖ್ಯವಾಗಿ ಮೂರು ವಿಷಯಗಳ ವಿವರಣೆಯಿದೆ

1) **ಜ್ಞಾನಯೋಗ ಕರ್ಮಯೋಗ ಇವೆರಡರಲ್ಲಿ ಕರ್ಮಯೋಗವೇ ಶ್ರೇಷ್ಠವಾದುದು**—ನಿತ್ಯಾಂದರ ಜ್ಞಾನಯೋಗಕ್ಕಿಂತ ಕರ್ಮಯೋಗವು ಸುಲಭವಾದುದೂ ಸುಖಕರವಾದುದೂ ಶೀಘ್ರಫಲಪ್ರದವಾದುದೂ ಪ್ರಮಾದರಹಿತವಾದುದೂ ಮತ್ತು ಅಂತರ್ಗತ ಆತ್ಮಯಾಥಾತ್ಮ್ಯ ಜ್ಞಾನಉಳ್ಳದ್ದೂ ಆಗಿದೆ

(ಶ್ಲೋಕಗಳು 1 ರಿಂದ 7)

2) **ಕರ್ಮಯೋಗಾಚರಣೆಗೆ ಅವಶ್ಯಕವಾದ ಅಕರ್ತೃತ್ವಾನುಸಂಧಾನ ಮೊದಲಾದ ಜ್ಞಾನಾಂಶದ ಅನುಸಂಧಾನ ಪ್ರಕಾರಗಳು—**

(ಶ್ಲೋಕಗಳು 8 ರಿಂದ 16)

1) ಕರ್ಮಯೋಗಿಯು ಕರ್ಮದಕರ್ತೃತ್ವವು ಆತ್ಮನಿಗೆ ಸೇರಿದ್ದಲ್ಲ, ದೇಹಕ್ಕೆ ಸೇರಿದ್ದು ಎಂದು ಭಾವಿಸಿ ಕರ್ಮದಲ್ಲೂ ಕರ್ಮಫಲದಲ್ಲೂ ಆಸಕ್ತಿರಹಿತನಾಗಿರಬೇಕು

2) ಕರ್ಮಯೋಗಿಯು ಆತ್ಮಶುದ್ಧಿಗಾಗಿ ಕರ್ಮವನ್ನು ಚೆನ್ನಾಗಿ ಮಾಡಬೇಕು ಆದರೆ ಫಲದಲ್ಲಿ ಆಸಕ್ತರಹಿತನಾಗಿರಬೇಕು

3) ದೇಹದ ಆಕಾರವಾಗಿ ಪರಿಣಾಮಹೊಂದಿರುವ ಪ್ರಕೃತಿಯಲ್ಲಿ ಕರ್ತೃತ್ವವನ್ನಿಟ್ಟು ಆತ್ಮನಾದ ತಾನು ವಶೀ, ಪ್ರಭು ಮತ್ತು ವಿಭುವಾಗಿ ಇರಬೇಕು ಇಂದ್ರಿಯಗಳನ್ನು ತನ್ನವಶದಲ್ಲಿ ಇಟ್ಟುಕೊಂಡು ತಾನು ಅವುಗಳಿಗೆ ವಶನಾಗದೆ ವಶಿಯಾಗಿ ಅವುಗಳನ್ನು ನಿಯಮಿಸುವ ಸಾಮರ್ಥ್ಯ ಹೊಂದಿದವನಾಗಿರಬೇಕು ಆದರೆ ತಾನೇ ಅವುಗಳಿಗೆ ಯಜಮಾನನೆಂದೂ ಅವುಗಳು ತನಗೆ ಸೇರಿದವುಗಳೆಂದು ಭಾವಿಸದೆ ಸಮಸ್ತ ಕರ್ಮಗಳಿಗೂ ಪರಮಾತ್ಮನೇ ಸಾರ್ವಭೌಮನಾದ ಒಡೆಯನೆಂದೂ ತಾನು ಪರಮಾತ್ಮನ ಭೃತ್ಯನೆಂದೂ ಶರೀರವೆಂಬ ಪಟ್ಟಣಕ್ಕೆ ಸಾರ್ವಭೌಮನಾದ ಪರಮಾತ್ಮನ ಪರವಾಗಿ ತಾನು ಇಂದ್ರಿಯಗಳನ್ನು ನಿಯಮಿಸಿ ಆಳುತ್ತಿರುವ ಪ್ರಭು ಎಂದೂ ಭಾವಿಸುವವನಾಗಬೇಕು ಕರ್ಮಗಳೂ ಕರ್ಮಗಳ ಕರ್ತೃತ್ವವೂ ಕರ್ಮಗಳ ಫಲಗಳೂ ಪರಮಾತ್ಮನಿಗೆ ಸೇರಿದವುಗಳು ಎಂದು ಧೃಢವಾಗಿ ನಂಬಿ ಸಾರ್ವಭೌಮನಾದ ಪರಮಾತ್ಮನ ಪರವಾಗಿ ತಾನು ಪ್ರಭುವಾಗಿ ಇಂದ್ರಿಯಗಳ ಮೂಲಕ ಕರ್ಮಗಳನ್ನು ಮಾಡುತ್ತಾ ಅವುಗಳ ಫಲದಲ್ಲಿ ಆಸಕ್ತಿ ಇಲ್ಲದವನಾಗಿ ಇರಬೇಕು ಅನೇಕ ಜನ್ಮಗಳಲ್ಲಿ ಅನೇಕ ದೇಹಗಳನ್ನು ಹೊಂದುವುದರ ಮೂಲಕ ಆತ್ಮನಾದ ತಾನು ವಿಭು ಸ್ವರೂಪನು ಆದ್ದರಿಂದ ಆಯಾಜನ್ಮಗಳಲ್ಲಿ ಆಯಾ ಶರೀರಕ್ಕೆ ಸಂಬಂಧಪಟ್ಟ ಬಂಧುಗಳು ಆತ್ಮನಾದ ತನಗೆ ಸಂಬಂಧಪಟ್ಟವರಲ್ಲ, ಅವರ ಸುಖದುಃಖಗಳಿಗೆ ತಾನು ಕಾರಣನಲ್ಲ ಮತ್ತು ಅವರನಿವಾರಣೆಗೆ ತಾನು ಶಕ್ತನಲ್ಲ ಎಂದು ತಿಳಿದು ಶಾಂತಚಿತ್ತನಾಗಿರಬೇಕು ಆತ್ಮನಾದ ತಾನು ಅಣು ಸ್ವರೂಪನಾಗಿದ್ದರೂ ತನ್ನ ಧರ್ಮ ಭೂತಜ್ಞಾನವು ಎಲ್ಲೆಲ್ಲೂ ಪ್ರಸರಿಸುವುದರಿಂದ ಜ್ಞಾನಪ್ರಸಾರಣೆಯ ಮೂಲಕವೂ ತಾನು ವಿಭುಸ್ವರೂಪನು ಎಂದು ತಿಳಿದುಕೊಳ್ಳಬೇಕು ಹೀಗೆ ಕರ್ಮಯೋಗನಿಷ್ಠನಾದ ದೀಹಿಯಾದ ಜೀವಾತ್ಮನು, ತನ್ನ ದೇಹದಲ್ಲಿ ಕರ್ತೃತ್ವವನ್ನಿಟ್ಟು ಸಾರ್ವಭೌಮನಾದ ಪರಮಾತ್ಮನ ದಾಸನಾದ ತಾನು ವಶಿಯಾಗಿ, ಪ್ರಭುವಾಗಿ ಮತ್ತು ವಿಭುವಾಗಿ ವರ್ತಿಸುತ್ತಾ ದೇಹದ ಮೂಲಕ ಸರ್ವದಾ ಕರ್ಮಮಾಡುತ್ತಿದ್ದರೂ ಮಾನಸಿಕವಾಗಿ ತಾನು ಏನೂಮಾಡದೆ ನಿರ್ಲಿಪ್ತನಾಗಿ ಶಾಂತಚಿತ್ತನಾಗಿ ಇರುತ್ತಾನೆ ಈ ರೀತಿಯಾಗಿ ಅಕರ್ತೃತ್ವಾನುಸಂಧಾನದೊಡನೆ ಕರ್ಮಯೋಗವನ್ನು ಆಚರಿಸುವ ಕಲವು ರೀತಿಗಳನ್ನು ಇಲ್ಲಿ ವರ್ಣಿಸಿದೆ

3) **ಕರ್ಮಯೋಗದ ಅಭ್ಯಾಸದಿಂದ ಲಭಿಸುವ ಆತ್ಮಜ್ಞಾನದ ವಿವರಣೆ—**

(ಶ್ಲೋಕಗಳು 17 ರಿಂದ 29)

1) ಕರ್ಮಯೋಗಿಯು ಆತ್ಮಸ್ವರೂಪ ಜ್ಞಾನಾನುಸಂಧಾನದೊಂದಿಗೆ ಕರ್ಮಮಾಡುವುದರಿಂದ ಅವನಿಗೆ ಕ್ರಮೇಣ ಪ್ರಕೃತಿ

ಸಂಬಂಧದಿಂದ ಉಂಟಾಗಿರುವ ಅಜ್ಞಾನವು ನಾಶವಾಗಿ ಕೊನೆಗೆ ಪರಿಶುದ್ಧವಾದ ಆತ್ಮವಿಶಯಜ್ಞಾನವು ಪ್ರಾಪ್ತವಾಗುತ್ತದೆ. ಶ್ರೇಷ್ಠವಾದ ಈ ಆತ್ಮವಿಷಯಜ್ಞಾನವು ಸೂರ್ಯನಹಾಗೆ. ಅವನಿಗೆ ಎಲ್ಲವನ್ನೂ ಪ್ರಕಾಶಗೊಳಿಸುತ್ತದೆ ಮತ್ತು ಸಂಕುಚಿತವಾಗಿರುವ ಅವನ ಧರ್ಮಭೂತಜ್ಞಾನವನ್ನು ವಿಕಾಸಗೊಳಿಸುತ್ತದೆ.

ii) ಕರ್ಮಯೋಗದಲ್ಲಿ ಅಂತರ್ಗತವಾಗಿರುವ ಆತ್ಮಸ್ವರೂಪ ಜ್ಞಾನಾನುಸಂಧಾನದಿಂದ ಆತ್ಮವಿಷಯಜ್ಞಾನವು ಪ್ರಾಪ್ತವಾಗಿ ಅದರಿಂದ ಸಮದರ್ಶಿತ್ವವು ಉಂಟಾಗುತ್ತದೆ ಅಂದರೆ ಜೀವಾತ್ಮರೆಲ್ಲಾ ಶರೀರ ಸಂಬಂಧದಿಂದ ಬಿಡಲ್ಪಟ್ಟಾಗ "ಜ್ಞಾನ" ಎಂಬ ಆಕಾರದಿಂದ ಸಮಾನರು ಎಂಬ ತಿಳಿವಳಿಕೆಯನ್ನು ಹೊಂದುತ್ತಾನೆ ಮತ್ತು ಸಮಸ್ತ ಜೀವಿಗಳನ್ನೂ ಜ್ಞಾನೈಕಾಕಾರತೆಯಿಂದ ಸಮಾನಾಗಿ ನೋಡುತ್ತಾನೆ. ಹಸು, ಆನೆ, ನಾಯಿ ಮುಂತಾದ ಪ್ರಾಣಿಗಳಲ್ಲೂ ಚಂಡಾಲ ಪಂಡಿತ ಮುಂತಾದ ಸಕಲ ಮಾನವರಲ್ಲೂ ಕಂಡುಬರುವ ವಿಷಮಾಕಾರತೆಯೆಲ್ಲಾ ಅವರವರ ಶರೀರಕ್ಕೆ ಸೇರಿದ್ದೇಹೊರತು ಆತ್ಮನಿಗೆ ಸೇರಿದ್ದಲ್ಲ. ಅವುಗಳೆಲ್ಲದರ ಒಳಗೆ ಇರುವ ಆತ್ಮಗಳೆಲ್ಲಾ ಜ್ಞಾನ ಒಂದನ್ನೇ ಆಕಾರವಾಗಿ ಹೊಂದಿರುವುದರಿಂದ ಸಮವಾಗಿವೆ ಎಂದು ತಿಳಿದ ಜ್ಞಾನಿಯಾದ ಕರ್ಮಯೋಗಿಯು ಯಾರನ್ನೂ ದ್ವೇಷಿಸದ ತಿರಸ್ಕರಿಸದ ಸಮನಾಗಿ ನೋಡುತ್ತಾನೆ. ಇಂತಹ ಸಮದರ್ಶಿತ್ವವನ್ನು ಹೊಂದಿರುವವರು ಆತ್ಮಸಾಕ್ಷಾತ್ಕಾರ ಹೊಂದುತ್ತಾರೆ. ಅವರು ಜಿತೇಂದ್ರಿಯರಾಗಿ ವಿಷಯಾನುಭವದಲ್ಲಿ ಆಸಕ್ತಿ ಇಲ್ಲದವರಾಗಿ ಕಾಮಕ್ರೋಧರಹಿತರಾಗಿ ಆತ್ಮಸ್ವರೂಪಾನುಸಂಧಾನದಲ್ಲಿ ನಿರತರಾಗಿ ಶಾಂತಚಿತ್ತರಾಗಿ ಇರುತ್ತಾರೆ ಅವರಿಗೆ ಆತ್ಮಾನುಭವರೂಪವಾದ ಆನಂದವು ತಾನಾಗಿಯೇ ಲಭಿಸುತ್ತದೆ ಆತ್ಮಚಿಂತನಕ್ರಮವೂ ಕೂಡ ಇಲ್ಲಿ ಸಂಗ್ರಹವಾಗಿ ತಿಳಿಸಿದ

(iii) ಕೊನೆಗೆ ಶ್ರೀ ಕೃಷ್ಣನು ಒಂದು ಅತಿ ಮುಖ್ಯವಾದ ಉಪದೇಶವನ್ನು ಮಾಡಿ ಈ ಅಧ್ಯಾಯವನ್ನು ಮುಗಿಸಿದ್ದಾನೆ ಅದೇನೆಂದರೆ ಕರ್ಮಯೋಗಿಯು ಮಾಡುವ ಯಜ್ಞ, ದಾನ ತಪಸ್ಸು ಮುಂತಾದ ಸಮಸ್ತ ಕರ್ಮಗಳ ಭೋಕ್ತೃವೂ, ಸರ್ವಲೋಕ ಮಹೇಶ್ವರನೂ, ಸಮಸ್ತ ಭೂತಗಳ ಹಿತೈಷಿಯೂ ಪರಮಾತ್ಮನೇ ಆಗಿದ್ದಾನೆ ಎಂಬ ಜ್ಞಾನವನ್ನು ಪಡೆದ ಕರ್ಮಯೋಗಿಯು ಸಮಸ್ತ ಕರ್ಮಗಳೂ ಪರಮಾತ್ಮನ ಆರಾಧನೆಯೆಂದು ಭಾವಿಸಿ ಅವನ ಪ್ರೀತಿಗಾಗಿ ಸಂತೋಷದಿಂದ ಕರ್ಮಗಳನ್ನು ಮಾಡುತ್ತಾನೆ ಮತ್ತು ಇವನ ಕರ್ಮಗಳಿಂದ ಪ್ರೀತನಾದ ಪರಮಾತ್ಮನ ಅನುಗ್ರಹದಿಂದ ನಿರತಿಶಯ ಸುಖರೂಪವಾದ ಮನಶ್ಶಾಂತಿಯನ್ನು ಪಡೆಯುತ್ತಾನೆ. ಹೀಗೆ ಕರ್ಮಯೋಗಿಯು ಪರಮಾತ್ಮನ ಸೇವೆ ಆರಾಧನೆ ಎಂಬ ಭಾವನೆಯಿಂದ ಕರ್ಮಗಳನ್ನು ಮಾಡುವುದರಿಂದ ಕರ್ಮ ಮಾಡುವ ಕಾಲದಲ್ಲೇ ಸುಖವನ್ನೂ, ಸಂತೋಷವನ್ನೂ, ಶಾಂತಿಯನ್ನೂ ಹೊಂದುತ್ತಾನೆ

ಈ ಅಧ್ಯಾಯವನ್ನು **ಕರ್ಮ ಸನ್ಯಾಸ ಯೋಗ**ವೆಂದು ಕರೆದಿದ್ದಾರೆ. ಆದರೆ ಇಲ್ಲಿ ಕರ್ಮ ಸನ್ಯಾಸವೆಂಬುದಕ್ಕೆ ಕರ್ಮತ್ಯಾಗ ವೆಂದು ಅರ್ಥಮಾಡದೆ ಕರ್ತೃತ್ವ ಫಲ ಮಮತಾತ್ಯಾಗ ಪೂರ್ವಕವಾಗಿ ಕರ್ತವ್ಯ ಕರ್ಮಗಳನ್ನು ಚೆನ್ನಾಗಿ ನಡೆಸುವಿಕೆಯೇ ಕರ್ಮಸನ್ಯಾಸವೆಂದು ಅರ್ಥಮಾಡಿ ತಿಳಿಸಿದ್ದಾರೆ ಕರ್ಮಯೋಗಿಯು ಕೇವಲ ತನ್ನ ದೇಹವು ಕರ್ಮ ಮಾಡುತ್ತದೆಯೇ ವಿನಃ ಆತ್ಮನಾದ ತಾನು ಯಾವ ಕರ್ಮವನ್ನೂ ಮಾಡುತ್ತಿಲ್ಲ 'ನೈವ ಕಿಂಚಿತ್ ಕರೋಮಿ" ಎಂಬ ಅನುಸಂಧಾನವುಳ್ಳವನಾಗಿ, "ಯೋಗಿನಃ ಕರ್ಮ ಕುರ್ವಂತಿ ಸಂಗಂತ್ಯಕ್ತ್ವಾ"–"ಯುಕ್ತಃ ಕರ್ಮ ಫಲಂ ತ್ಯಕ್ತ್ವಾ"–"ಸರ್ವಕರ್ಮಾಣಿ ಮನಸಾಸನ್ಯಸ್ಯ ಆಸ್ತೇ ಸುಖಂವಶೀ" ಎಂದು ಕರ್ತೃತ್ವ ಫಲ ಮಮತಾರಹಿತನಾಗಿ ಕರ್ಮ ಮಾಡಬೇಕೆಂದು ಈ ಅಧ್ಯಾಯದಲ್ಲಿ ವಿವರವಾಗಿ ತಿಳಿಸಿರುವುದರಿಂದ ಇದಕ್ಕೆ ಕರ್ಮಸನ್ಯಾಸಯೋಗವೆಂದು ಹೆಸರು ಬಂದಿದೆ

## ಆರನೆಯ ಅಧ್ಯಾಯ

ಹಿಂದಿನ ಐದು ಅಧ್ಯಾಯಗಳಿಂದ ಅಂಗಗಳೊಂದಿಗೆ ಕರ್ಮಯೋಗವು ಹೇಳಲ್ಪಟ್ಟಿತು. ಕರ್ಮಯೋಗದಲ್ಲಿರಬೇಕಾದ ಕರ್ಮಾಂಶಗಳೂ, ಜ್ಞಾನಾಂಶಗಳೂ, ಇದನ್ನು ಅನುಷ್ಠಿಸುವ ಪ್ರಕಾರಗಳೂ ಇಲ್ಲಿಯವರೆಗೆ ವಿವರಿಸಲ್ಪಟ್ಟವು ಈಗ ಈ ಆರನೆಯ ಅಧ್ಯಾಯ ದಲ್ಲಿ ಜ್ಞಾನ ಮತ್ತು ಕರ್ಮಯೋಗಗಳಿಂದ ಸಾಧ್ಯವಾದ ಆತ್ಮಾವಲೋಕನ ರೂಪವಾದ ಆತ್ಮ ಚಿಂತನದ ಅಭ್ಯಾಸ ವಿಧಿಯು ಹೇಳಲ್ಪಡುತ್ತದೆ ಆತ್ಮಚಿಂತನ ಪ್ರಕಾರವನ್ನು ಹೇಳುವ ಸಂದರ್ಭದಲ್ಲಿ ಕರ್ಮಯೋಗವನ್ನು ಇತರ ಯೋಗಗಳ ಅಪೇಕ್ಷೆ ಇಲ್ಲದೆಯೇ ಸಾಧಿಸಬಹುದು ಎಂಬುದು ಸಮರ್ಥನೆ ಮಾಡಲ್ಪಟ್ಟಿದೆ ಮತ್ತು ಜ್ಞಾನಯೋಗವನ್ನೊಳಗೊಂಡ ಕರ್ಮಯೋಗದ ವಿವರಣೆಯೂ ಮಾಡಲ್ಪಟ್ಟಿದೆ

ಆರನೆಯ ಅಧ್ಯಾಯದ ಮುಖ್ಯವಾದ ವಿಷಯವು ಯೋಗಾಭ್ಯಾಸ ವಿಧಿಯು ಇದಕ್ಕೆ ಅಂಗವಾಗಿ 4 ವಿಷಯಗಳು

ಹೇಳಲ್ಪಟ್ಟಿದೆ ಆದ್ದರಿಂದ ಈ ಅಧ್ಯಾಯದಲ್ಲಿ ಒಟ್ಟು ಐದು ವಿಷಯಗಳು ಉಪಪಾದಿಸಲ್ಪಟ್ಟಿವೆ—1) ಆತ್ಮಚಿಂತನ ರೂಪವಾದ ಧ್ಯಾನ ಯೋಗಾಭ್ಯಾಸ ವಿಧಿಯು, 2) ಆತ್ಮಚಿಂತನೆ ಮಾಡುವ ಧ್ಯಾನ ಯೋಗಿಗಳ ನಾಲ್ಕು ವಿಭಾಗಗಳು (ಅವಸ್ಥೆಗಳು), 3) ಆತ್ಮಚಿಂತನರೂಪವಾದ ಧ್ಯಾನಯೋಗಕ್ಕೆ ಬೇಕಾದ ಅಭ್ಯಾಸ ವೈರಾಗ್ಯಾದಿ ಸಾಧನೆಗಳು, 4) ಆತ್ಮಚಿಂತನ ರೂಪವಾದ ಧ್ಯಾನಯೋಗಸಿದ್ಧಿ (ಯೋಗವು ಫಲಿಸುವ ಪ್ರಕಾರ ಮತ್ತು ಯೋಗ ಭ್ರಷ್ಟನಾದವನ ಗತಿ) ಮತ್ತು 5) ಪರಮಾತ್ಮ ಚಿಂತನವೆಂಬ ಭಕ್ತಿಯ ಶ್ರೇಷ್ಠತೆ ಅಂದರ ಆತ್ಮ ಸ್ವರೂಪವನ್ನು ಮಾತ್ರ ಅನುಸಂಧಾನಮಾಡಿ ಆತ್ಮಾನುಭವವನ್ನು ಪಡೆಯುವ ಜ್ಞಾನ ಯೋಗಿಗಿಂತ ಆತ್ಮನಿಗೂ ಅಂತರಾತ್ಮನಾದ ಪರಮಾತ್ಮನನ್ನು ಧ್ಯಾನಮಾಡಿ ಉಪಾಸನೆ ಮಾಡುವ ಭಕ್ತನು ಶ್ರೇಷ್ಠನು ಎಂದು ಈ ಅಧ್ಯಾಯದ ಕೊನೆಯಲ್ಲಿ ಶ್ರೀ ಕೃಷ್ಣನೇ ಹೇಳ್ದಾನೆ

## I ಆತ್ಮಚಿಂತನರೂಪವಾದ ಧ್ಯಾನಯೋಗಾಭ್ಯಾಸ ಕ್ರಮವು

**(ಶ್ಲೋಕಗಳು 1 ರಿಂದ 28)**

### (1) ಆತ್ಮಚಿಂತನ ರೂಪವಾದ ಧ್ಯಾನ ಯೋಗಾಭ್ಯಾಸ ಮಾಡಲು ಅಪೇಕ್ಷೆ ಉಳ್ಳವನು ಕರ್ಮಯೋಗದ ಮೂಲಕ ಧ್ಯಾನಯೋಗಕ್ಕೆ ಅರ್ಹತೆ ಪಡೆಯಬೇಕು—

ಅವನು ಮೊದಲು ಕರ್ತವ್ಯ ಕರ್ಮಗಳನ್ನು ಕರ್ಮಯೋಗವಾಗಿ ಮಾಡುತ್ತಾ ಅದರ ಮೂಲಕ ಇಂದ್ರಿಯ ವಿಷಯಗಳಲ್ಲಿ ಆಸಕ್ತಿಯನ್ನು ಹೋಗಲಾಡಿಸಿಕೊಂಡು ಕಾಮಸಂಕಲ್ಪವರ್ಜಿತನಾಗಬೇಕು— (ಶ್ಲೋಕಗಳು 1, 2, 3, 4,)

**ಶ್ಲೋಕ 1**—ಕರ್ಮಯೋಗ ಮತ್ತು ಕರ್ಮಸನ್ಯಾಸ ಎರಡೂ ಒಂದೇ ಎಂದು ಈ ಶ್ಲೋಕವು ತಿಳಿಸುತ್ತದೆ—"ಕರ್ಮಫಲವನ್ನು ಅಪೇಕ್ಷಿಸದೆ ಕರ್ತವ್ಯಕರ್ಮವನ್ನು ಯಾವನು ಮಾಡುತ್ತಾನೆಯೋ ಅವನು ಸನ್ಯಾಸಿಯೂ (ಜ್ಞಾನಯೋಗನಿಷ್ಠನೂ) ಆಗಿದ್ದಾನೆ ಮತ್ತು ಕರ್ಮಯೋಗನಿಷ್ಠನೂ ಆಗಿದ್ದಾನೆ ಅವನು ಅಗ್ನಿಕಾರ್ಯವಾದ ಯಜ್ಞ ಯಾಗಾದಿಗಳನ್ನೂ ಬಿಡುವುದಿಲ್ಲ ಮತ್ತು ಕರ್ಮಮಾಡದವನೂ ಆಗುವುದಿಲ್ಲ"

ಬಹುಮಂದಿ ಜನರು ಐಶ್ವರ್ಯಾದಿ ಐಹಿಕ ಫಲಗಳನ್ನು ಹೊಂದುವುದಕ್ಕಾಗಿ ತಮಗೆ ಇಷ್ಟಬಂದ ಹಾಗೆ, ತಮ್ಮ ಬುದ್ಧಿಗೆ ತೋರಿದಂತೆ ಕರ್ಮಗಳನ್ನು ಮಾಡುತ್ತಾರೆ. ಆದರೆ ಕರ್ಮಯೋಗಿಯು ಶಾಸ್ತ್ರವಿಧಿತನಿತ್ಯ ನೈಮಿತ್ತಿಕ ಕರ್ಮಗಳನ್ನೂ, ವರ್ಣಾಶ್ರಮ ಧರ್ಮಕರ್ಮಗಳನ್ನೂ ಮಾಡುತ್ತಾನೆ ಮತ್ತು ಅವುಗಳನ್ನು ಮಾಡುವಾಗಲೂ ಸ್ವರ್ಗಾದಿ ಫಲಗಳನ್ನು ಹೊಂದಬೇಕೆಂಬ ಅಪೇಕ್ಷೆ ಹೊಂದದೆ ಕರ್ಮಾನುಷ್ಠಾನವೇ ಮಾಡತಕ್ಕದ್ದು ಎಂದು ಭಾವಿಸಿ ಸರ್ವಪ್ರಕಾರದಿಂದಲೂ ತನಗೆ ಸುಹೃತ್ತಾಗಿರುವ ಪರಮಪುರುಷನ ಆರಾಧನ ರೂಪವಾಗಿರುವುದರಿಂದ ಕರ್ಮಾನುಷ್ಠಾನವೇ ತನಗೆ ಪ್ರಯೋಜನವಾಗಿದೆಯೇ ವಿನಃ ಅದರಿಂದ ಸಾಧಿಸಲ್ಪಡತಕ್ಕ ಫಲವು ಯಾವುದೂ ಇಲ್ಲ ಎಂದು ಭಾವಿಸಿ ಕರ್ಮ ಮಾಡುತ್ತಾನೆ ಹೀಗೆ ಫಲಾಸಕ್ತಿ ರಹಿತನಾಗಿ, ಅಕರ್ತೃತ್ವಾನುಸಂಧಾನದೊಂದಿಗೆ ಕರ್ಮಮಾಡುವ ಕರ್ಮಯೋಗಿಯು ಸನ್ಯಾಸಿಯೂ ಅಂದರೆ ಜ್ಞಾನಯೋಗ ನಿಷ್ಠನೂ ಆಗಿದ್ದಾನೆ ಅಂದರೇನು ಆತ್ಮಸಾಕ್ಷಾತ್ಕಾರ ರೂಪ ಯೋಗಕ್ಕೆ ಸಾಧನವಾದ ಕರ್ಮಯೋಗ ಮತ್ತು ಜ್ಞಾನಯೋಗನೆಂಬ ಎರಡು ಯೋಗನಿಷ್ಠನೂ ಆಗಿದ್ದಾನೆ ಕೇವಲ ಜ್ಞಾನಯೋಗನಿಷ್ಠನಾದವರೋ ಯಜ್ಞಾದಿ ಯಾವ ಕರ್ಮಗಳನ್ನೂ ಮಾಡುವುದಿಲ್ಲ ಆದರೆ ಕರ್ಮಯೋಗಿಯು ಯಜ್ಞಾದಿ ಅಗ್ನಿಕಾರ್ಯಗಳನ್ನೂ ಇತರ ಕರ್ತವ್ಯ ಕರ್ಮಗಳನ್ನೂ ಮಾಡುತ್ತಲೇ ಇರುವುದರಿಂದ ಕರ್ಮನಿಷ್ಠನಾಗಿದ್ದಾನೆ ಮತ್ತು ಕರ್ಮಗಳನ್ನು ಮಾಡುವಾಗಲೂ ಅವನು ಆತ್ಮಸ್ವರೂಪ ಜ್ಞಾನಾನುಸಂಧಾನ ಮಾಡುತ್ತಿರುವುದರಿಂದಲೂ ಮತ್ತು ಫಲಾಪೇಕ್ಷೆರಹಿತನಾಗಿ, ಅಕರ್ತೃತ್ವಾನುಸಂಧಾನದೊಂದಿಗೆ ಕರ್ಮಮಾಡುವುದರಿಂದಲೂ ಅವನು ಜ್ಞಾನನಿಷ್ಠನಾದ ಸನ್ಯಾಸಿಯೂ ಆಗಿದ್ದಾನೆ (ಅಂದರೇನು ಜ್ಞಾನಯೋಗಿಗೆ ಜ್ಞಾನಾನುಷ್ಠಾನ ಒಂದು ಮಾತ್ರ ಉಂಟು; ಕರ್ಮಯೋಗಿಗೆ ಕರ್ಮಾನುಷ್ಠಾನ ಮತ್ತು ಜ್ಞಾನಾನುಸಂಧಾನ ಎರಡೂ ಉಂಟು ಎಂದು ಅಭಿಪ್ರಾಯ)

**ಶ್ಲೋಕ 2**—ಮೇಲೆ ಹೇಳಿದ ಲಕ್ಷಣಗಳಿಂದ ಕೂಡಿರುವ ಕರ್ಮಯೋಗದಲ್ಲಿ ಜ್ಞಾನವು ಅಂತರ್ಗತವಾಗಿ ಇದೆ ಎಂದು ಈ ಶ್ಲೋಕವು ತಿಳಿಸುತ್ತದೆ "ಅರ್ಜುನನೇ! ಯಾವುದನ್ನು ಸನ್ಯಾಸವೆಂದು (ಜ್ಞಾನ ಯೋಗನೆಂದು) ಹೇಳುತ್ತಾರೆಯೋ ಅದನ್ನು ಕರ್ಮಯೋಗವೆಂದೂ ತಿಳಿಯುವವನಾಗು ಏತಕ್ಕೆಂದರೆ ಸಂಕಲ್ಪಗಳ ತ್ಯಾಗ ಮಾಡಿದ ಯಾವ ಪುರುಷನೂ ಕರ್ಮಯೋಗಿಯಾಗಲಾರನು"

ಆತ್ಮಯಾಥಾತ್ಮ್ಯ ಜ್ಞಾನಾನುಸಂಧಾನವೇ ಜ್ಞಾನ ಯೋಗವು. ಇದು ಕರ್ಮಯೋಗದಲ್ಲಿಯೇ ಅಂತರ್ಗತವಾಗಿದೆ. ಯಾವ ಮನುಷ್ಯನು ಪ್ರಕೃತಿಯ ಭಾಗವಾದ ಇಂದ್ರಿಯ, ಮನಸ್ಸು, ಬುದ್ಧಿ ಮತ್ತು ಅಹಂಕಾರಾದಿಗಳನ್ನು ಒಳಗೊಂಡ ಶರೀರವೇ ತಾನಾದ ಆತ್ಮನೆಂದು ತಿಳಿದು ಕರ್ಮಮಾಡುವನೋ ಅವನು ಕರ್ಮಯೋಗಿಯಲ್ಲ; ಏಕೆಂದರೆ ಅವನು ಕರ್ಮಗಳನ್ನು ಮಾಡುವವನು ತಾನೇ ಎಂಬ ಮತ್ತು ಆ ಕರ್ಮಗಳೂ ಅವುಗಳ ಫಲಗಳೂ ತನಗೇ ಸೇರಿದವು ಎಂಬ ಭಾವನೆ ಹೊಂದಿದವನಾಗಿ ಅಹಂಕಾರ ಮಮಕಾರಯುತನಾಗಿ, ಫಲಾಸಕ್ತಿಯೊಂದಿಗೆ ಕರ್ಮ ಮಾಡುತ್ತಾನೆ ಆದರೆ ಕರ್ಮಯೋಗಿಯು ತನ್ನ ಆತ್ಮಸ್ವರೂಪದ ಯಥಾಸ್ಥಿತಿಯನ್ನು ತಿಳಿದು ಮನನ ಮಾಡುತ್ತಾ ಕರ್ಮಗಳನ್ನು ಮಾಡುವುದರಿಂದ ಅವನು ಆತ್ಮನಲ್ಲದ ಪ್ರಕೃತಿಯಲ್ಲಿ ಅಂದರೆ ಶರೀರದಲ್ಲಿ ಆತ್ಮಾಭಿಮಾನರೂಪವಾದ ಸಂಕಲ್ಪವನ್ನಿಡದ ಸನ್ಯಸ್ತ ಸಂಕಲ್ಪನಾಗಿ ಕರ್ತವ್ಯಕರ್ಮಗಳನ್ನು ಮಾಡುತ್ತಾನೆ ಹಾಗೆ ಮಾಡದೇ ಶರೀರವೇ ಆತ್ಮವೆಂಬ ಭಾವನೆಹೊಂದಿ, ಪ್ರಕೃತಿಯ ಗುಣಗಳು ಮಾಡುವ ಕರ್ಮಗಳನ್ನು ತಾನೇ ಸಂಕಲ್ಪಿಸಿ ಮಾಡುತ್ತಿರುವೆನೆಂದು ಭ್ರಮಿಸಿ ಅಹಂಕಾರ ಮಮಕಾರಯುತನಾಗಿ ಫಲಾಸಕ್ತಿಯೊಂದಿಗೆ ಕರ್ಮಮಾಡುವವನು ಅಸನ್ಯಸ್ತ ಸಂಕಲ್ಪನು ಅವನು ಕರ್ಮಯೋಗಿಯಾಗಲಾರನು ಕರ್ಮಯೋಗಿಯು ಕಾಮ ಸಂಕಲ್ಪ ವರ್ಜಿತನಾಗಿ ಕರ್ಮಮಾಡಬೇಕು ಎಂದು ಹಿಂದೆಯೇ 4ನೇ ಅಧ್ಯಾಯದ 19ನೇ ಶ್ಲೋಕದಲ್ಲಿ ಹೇಳಿದೆ ಆದ್ದರಿಂದ ಯಾವ ಆತ್ಮಯಾಥಾತ್ಮ್ಯ ಜ್ಞಾನವನ್ನು ಹಿರಿಯರು ಸನ್ಯಾಸ ವೆಂದು (ಅಂದರೆ ಜ್ಞಾನಯೋಗದ ಜ್ಞಾನ ಎಂದು) ಹೇಳುತ್ತಾರೆಯೋ ಅದು ಕರ್ಮಯೋಗದಲ್ಲೂ ಅಂತರ್ಗತವಾಗಿರುವುದಾಗಿ ತಿಳಿಯುವವನಾಗು.

**ಶ್ಲೋಕ 3**—ಕರ್ಮಯೋಗವು ಪ್ರಮಾದರಹಿತವಾಗಿ ಆತ್ಮ ಸಾಕ್ಷಾತ್ಕಾರ ಯೋಗವನ್ನು ಸಾಧಿಸಿಕೊಡುತ್ತದೆ. ಆದ್ದರಿಂದ ಜ್ಞಾನ ಯೋಗವನ್ನು ಧೃಢವಾಗಿ ಹೊಂದಿ ಯೋಗಾರೂಢನಾಗುವವರೆಗೂ ಕರ್ಮಯೋಗವನ್ನು ಆಚರಿಸಲೇಬೇಕು. ಎಂದು ಈ ಶ್ಲೋಕವು ತಿಳಿಸುತ್ತದೆ —"ಜ್ಞಾನಯೋಗವನ್ನು ಹೊಂದಲು ಅಪೇಕ್ಷಿಸುವ ಯೋಗಿಗೆ ಕರ್ಮಯೋಗವು ಕಾರಣವು (ಅಂದರೆ ಕರ್ಮಯೋಗವಾಗಿ ಕರ್ಮಮಾಡುವುದು ಸಾಧನವು) ಎಂದು ಹೇಳಲ್ಪಡುತ್ತದೆ. ಜ್ಞಾನ ಯೋಗವನ್ನು ಧೃಢವಾಗಿಹೊಂದಿ ಯೋಗಾರೂಢನಾಗಿರುವವನಿಗೆ ಶಮವು ಕಾರಣವು (ಅಂದರೆ ಕರ್ಮಗಳನ್ನು ಬಿಡುವುದು ಸಾಧನವು) ಎಂದು ಹೇಳುತ್ತದೆ"

ನಿಯತ ಕರ್ಮಗಳನ್ನು ಕರ್ಮಯೋಗವಾಗಿ ಆಚರಿಸುತ್ತಿದ್ದರೆ ಅದರಿಂದ ಆತ್ಮದರ್ಶನವೆಂಬ ಜ್ಞಾನಯೋಗವನ್ನು ಆಚರಿಸುವ ಯೋಗ್ಯತೆ ಉಂಟಾಗುತ್ತದೆ ಆದ್ದರಿಂದ ಕರ್ಮವು ಸಾಧನವು. ಜ್ಞಾನಯೋಗವನ್ನು ಧೃಢವಾಗಿ ಹೊಂದಿದನಂತರ ಶಮವು ಅಂದರೆ ಕರ್ಮನಿವೃತ್ತಿಯಾದ ಜ್ಞಾನಯೋಗವು ಆತ್ಮಸಾಕ್ಷಾತ್ಕಾರಕ್ಕೆ ಸಾಧನ ವಾಗುತ್ತದೆ (ಇಲ್ಲಿ ಶಮ ಎಂದರೆ ಕರ್ಮನಿವೃತ್ತಿ ಎಂದು ಅರ್ಥ) ಆದ್ದರಿಂದ ಕರ್ಮಯೋಗಿಯು ಆತುರದಿಂದ ಜ್ಞಾನಯೋಗವನ್ನು ಸ್ವೀಕರಿಸಕೂಡದು ಆತ್ಮದರ್ಶನವೆಂಬ ಮೋಕ್ಷವು ಲಭಿಸುವವರೆಗೂ ಕರ್ಮಯೋಗವೇ ಮಾಡತಕ್ಕದ್ದು ಎಂದು ತಾತ್ಪರ್ಯವು

**ಶ್ಲೋಕ 4**—ಕರ್ಮಯೋಗಿಯು ಜ್ಞಾನಯೋಗದಲ್ಲಿ ಪ್ರತಿಷ್ಠಿತನಾಗಿ ಯೋಗಾರೂಢನಾಗಿ ಆಗುವುದು ಯಾವಾಗ ಎಂಬುದನ್ನು ಈ ಶ್ಲೋಕವು ತಿಳಿಸುತ್ತದೆ—"ಯಾವಾಗ ಕರ್ಮ ಯೋಗಿಯಾದ ಪುರುಷನು ಇಂದ್ರಿಯವಿಷಯಗಳಲ್ಲೂ ಮತ್ತು ಕರ್ಮಗಳಲ್ಲೂ ನಿಶ್ಚಯವಾಗಿ ಆಸಕ್ತಿ ಹೊಂದುವುದಿಲ್ಲವೋ ಆಗ ಅವನು ಸಮಸ್ತ ಸಂಕಲ್ಪಗಳನ್ನೂ ಬಿಟ್ಟ ಯೋಗಾರೂಢನು (ಜ್ಞಾನ ಯೋಗವನ್ನು ಹೊಂದಿದವನು) ಎಂಬುದಾಗಿ ಹೇಳಲ್ಪಡುತ್ತಾನೆ."

ಆತ್ಮಾನುಭವವನ್ನು ಹೊಂದಬೇಕೆಂಬ ಆಸೆಯುಳ್ಳ ಯೋಗಿಯು ಆತ್ಮಾನುಭವ ಒಂದನ್ನೇ ಸ್ವಭಾವವಾಗಿ ಹೊಂದಿದವನಾಗಿ ಆತ್ಮವ್ಯತಿರಿಕ್ತ ಪ್ರಕೃತಿ ವಿಷಯಗಳಲ್ಲೂ ಅವುಗಳಿಗೆ ಸಂಬಂಧಪಟ್ಟ ಕರ್ಮಗಳಲ್ಲೂ ಯಾವಾಗ ಸ್ವಲ್ಪವೂ ಆಸಕ್ತಿಹೊಂದುವುದಿಲ್ಲವೋ ಆಗ ಅವನು ಸಕಲ ಸಂಕಲ್ಪಗಳನ್ನೂ ಬಿಟ್ಟವನಾಗಿ ಆಗುತ್ತಾನೆ ಮತ್ತು ಯೋಗಾರೂಢನೆನಿಸಿಕೊಳ್ಳುತ್ತಾನೆ ಜ್ಞಾನಯೋಗವನ್ನು ಅನುಷ್ಠಿಸಬೇಕೆಂದು ಆನೆಪಡುವವನಿಗೆ ಆರಂಭದಲ್ಲಿಯೇ ಇಂದ್ರಿಯ ವಿಷಯಗಳಲ್ಲಿ ವೈರಾಗ್ಯ ಉಂಟಾಗುವುದಿಲ್ಲ ಅವನಿಗೆ ವಿಷಯಗಳ ಅನುಭವದಲ್ಲಿ ಆಸಕ್ತಿ ಇರುವುದರಿಂದ ವಿಷಯ ಸುಖಗಳಲ್ಲಿ ಅನಾಸಕ್ತಿಹೊಂದಲು ಕರ್ಮಯೋಗಾಭ್ಯಾಸವೇ ಮಾರ್ಗವು ಮತ್ತು ಅದೇ ಯೋಗಾರೂಢತೆಯ ಪ್ರಾಪ್ತಿಗೆ ಉಪಾಯವು ಆದ್ದರಿಂದ ವಿಷಯಾಸಕ್ತಿಯನ್ನು ತ್ಯಜಿಸಲು ಮಾರ್ಗವಾದ ಕರ್ಮಯೋಗವನ್ನೇ ಆರುರುಕ್ಷವು (ಅಂದರೆ ಜ್ಞಾನಯೋಗನಿಷ್ಠೆಯನ್ನು ಹೊಂದಬೇಕೆಂದು ಆಸೆಯುಳ್ಳವನು) ಆಚರಿಸಬೇಕು (ಅಂದರೆ ಶರೀರಕ್ಕೆ ಸಂಬಂದಪಟ್ಟ ಸಮಸ್ತ ಸಂಕಲ್ಪಗಳನ್ನೂ ಸಂಪೂರ್ಣವಾಗಿ ನಿಶ್ಚಯಪೂರ್ವಕವಾಗಿ ಬಿಟ್ಟ ಮೇಲೆಯೇ ಜ್ಞಾನಯೋಗನಿಷ್ಠೆಗೆ ಅರ್ಹತೆ ಉಂಟಾಗುವುದು ಆದ್ದರಿಂದ ಕರ್ಮಯೋಗಿಯು ಆತುರಪಟ್ಟು ಕರ್ಮಸನ್ಯಾಸ ರೂಪವಾದ ಜ್ಞಾನಯೋಗವನ್ನು ಸ್ವೀಕರಿಸಕೂಡದು ಯೋಗಸಿದ್ಧಿಯನ್ನು ಅಪೇಕ್ಷಿಸುವವನು ಮೊದಲು ಕರ್ಮಯೋಗವನ್ನು ಆಚರಿಸುತ್ತಾ ಸಮಸ್ತ ಕಾಮಗಳನ್ನೂ ಸಂಕಲ್ಪಗಳನ್ನೂ ತ್ಯಾಗಮಾಡುವ ಅರ್ಹತೆ ಪಡೆದ ಮೇಲೆ ಜ್ಞಾನಯೋಗದಲ್ಲಿ ಪರಾಕಾಷ್ಟತೆ ಪಡೆಯಬಹುದು ಎಂದು ಅಭಿಪ್ರಾಯ )

## 2) ಧ್ಯಾನಯೋಗವನ್ನು ಆರಂಭಿಸುವುದಕ್ಕೆ ಮೊದಲು ಮನಸ್ಸನ್ನು ನಿಗ್ರಹಿಸಬೇಕು – (ಶ್ಲೋಕಗಳು 5 ಮತ್ತು 6)

**ಶ್ಲೋಕ 5** — "ಮನಸ್ಸಿನಿಂದ ಆತ್ಮನನ್ನು ಉದ್ಧರಿಸುವವನಾಗು, ಆತ್ಮನನ್ನು ಕೆಳಗೆ ತಳ್ಳಬೇಡ ಏತಕ್ಕೆಂದರೆ ಆತ್ಮನಿಗೆ (ವಿಷಯಾಸಕ್ತಿ ರಹಿತವಾದ) ಮನಸ್ಸೇ ಬಂಧುವು,( ವಿಷಯಾಸಕ್ತಿ ಹೊಂದಿರುವ) ಮನಸ್ಸೇ ಶತ್ರುವು,

ಮನಸ್ಸನ್ನು ವಿಷಯಗಳಲ್ಲಿ ಸಂಗ್ಗದಂತೆ ತಡೆದರೆ ಆಗ ಅದು ಆತ್ಮನನ್ನು ಉದ್ಧಾರಮಾಡುತ್ತದೆ ಹಾಗಿಲ್ಲದೆ ಮನಸ್ಸು ವಿಷಯಗಳಲ್ಲಿ ಸುಕ್ತವಾಗಿ ವಿಷಯಗಳ ಕಡೆಗೆ ಓಡಿದರೆ ಅಂಥ ಮನಸ್ಸು ಆತ್ಮನನ್ನು ಕೆಳಗೆ ತಳ್ಳುತ್ತದೆ. ಆದ್ದರಿಂದ ಆತ್ಮನಿಗೆ ಮನಸ್ಸೇ ಬಂಧುವು ಮತ್ತು ಮನಸ್ಸೇ ಶತ್ರುವು (ಅಂದರೆ ಆತ್ಮನಿಗೆ ವಿಷಯಾಸಕ್ತಿಇರದ ಮನಸ್ಸು ಬಂಧುವಾಗಿಯೂ ವಿಷಯಾಸಕ್ತಿಇರುವ ಮನಸ್ಸು ಶತ್ರುವಾಗಿಯೂ ಆಗುತ್ತದೆ )

**ಶ್ಲೋಕ 6** — "ಯಾವ ಆತ್ಮನಿಂದ ಮನಸ್ಸು ಜಯಿಸಲ್ಪಡುತ್ತದೆಯೋ ಆ ಆತ್ಮನಿಗೆ ಮನಸ್ಸು ಬಂಧುವು ಜಯಿಸಲ್ಪಡದ ಮನಸ್ಸುಳ್ಳವನಿಗೆ ಅವನ ಮನಸ್ಸೇ ಶತ್ರುವಿನಂತೆ ಶತ್ರುತ್ವದಲ್ಲಿ ವರ್ತಿಸುತ್ತದ "

ಯಾವಪುರುಷನು ತಾನಾಗಿಯೇ ತನ್ನ ಮನಸ್ಸನ್ನು ವಿಷಯಗಳಲ್ಲಿ ಪ್ರವರ್ತಿಸದಂತೆ ತಡೆದು ಜಯಿಸುತ್ತಾನೆಯೋ ಅವನಿಗೆ ಆ ಮನಸ್ಸೇ ಬಂಧುವಾಗುತ್ತದೆ ಮನಸ್ಸನ್ನು ಜಯಿಸದೇ ಇರುವವನಿಗೆ ಅವನ ಮನಸ್ಸೇ ಅವನಿಗೆ ಶತ್ರುವಿನಂತೆ ಶತ್ರುತ್ವದಲ್ಲಿ ವರ್ತಿಸುತ್ತದ ಅಂದರ ಅವನ ಶ್ರೇಯಸ್ಸಿಗೆ ಪ್ರತಿಕೂಲವಾಗಿ ವರ್ತಿಸುತ್ತದೆ ಮತ್ತು ಅವನನ್ನು ಸದ್ಗತಿಹೊಂದದಂತೆ ತಡೆಯುತ್ತದ ಎಂದು ಅರ್ಥ ಈ ಅರ್ಥವನ್ನೇ ಶ್ರೀ ಪರಾಶರರು "ಮನಸ್ಸೇ ಮನುಷ್ಯನ ಬಂಧಮೋಕ್ಷಗಳಿಗೆ ಕಾರಣವು ವಿಷಯಾಸಕ್ತಿಉಳ್ಳ ಮನಸ್ಸು ಬಂಧಕ್ಕೂ ವಿಷಯಾಸಕ್ತಿರಹಿತವಾದ ಮನಸ್ಸು ಮುಕ್ತಿಗೂ ಕಾರಣ ವಾಗುತ್ತದ" ಎಂದು ಹೇಳಿದ್ದಾರೆ

## 3) ಧ್ಯಾನಯೋಗವನ್ನು ಆರಂಭಿಸಲು ಯೋಗವಾದ ಅವಸ್ಥೆಯ ವರ್ಣನೆ – (ಶ್ಲೋಕಗಳು7 ರಿಂದ 9)

**ಶ್ಲೋಕ 7**—"ಶೀತ, ಉಷ್ಣ, ಸುಖ, ದುಃಖಗಳಲ್ಲಿಯೂ ಹಾಗೆಯೇ ಮಾನ, ಅವಮಾನಗಳಲ್ಲಿಯೂ ಜಯಿಸಲ್ಪಟ್ಟ ಮನಸ್ಸುಳ್ಳವನಾಗಿ, ಪ್ರಶಾಂತವಾದ ಮನಸ್ಸುಳ್ಳ ಪುರುಷನಲ್ಲಿ (ಅವನ ಮನಸ್ಸಿನಲ್ಲಿ) ಪ್ರತ್ಯಗಾತ್ಮನು ಚೆನ್ನಾಗಿ ನೆಲೆಸಿರುತ್ತಾನೆ"

ಶೀತ, ಉಷ್ಣ, ಸುಖ, ದುಃಖಗಳಲ್ಲಿಯೂ ಮತ್ತು ಮಾನ ಅವಮಾನಗಳಲ್ಲಿಯೂ ಜಿತಮನಸ್ಕನಾಗಿ ವಿಕಾರ ರಹಿತವಾದ ಮನಸ್ಸುಳ್ಳ ಪ್ರಶಾಂತ ಚಿತ್ತನಾದ ಪುರುಷನ ಮನಸ್ಸಿನಲ್ಲಿ ಪ್ರತ್ಯಗಾತ್ಮನು ಚೆನ್ನಾಗಿ ನೆಲೆಸಿರುತ್ತಾನೆ (ಅಂದರೆ ಅನುಸಂಧಾನ ಮಾಡಲು ಯೋಗ್ಯನಾಗುವನು ಎಂದು ಅಭಿಪ್ರಾಯ) ಇದು ಜೀವಾತ್ಮನ ವಿಷಯವನ್ನು ತಿಳಿಸುವ ಪ್ರಕರಣವಾಗಿರುವುದರಿಂದ ಇಲ್ಲಿ ಪರಮಾತ್ಮಾ ಎಂಬ ಪದವು ತನ್ನ ಶುದ್ಧಸ್ವರೂಪದಲ್ಲಿರುವ ಜೀವಾತ್ಮನಿಗೆ ಅನ್ವಯಿಸುತ್ತದೆ ಆತ್ಮಯಥಾತ್ಮಜ್ಞಾನ ಪ್ರಾಪ್ತಿಯಿಂದಲೂ, ಐಹಿಕೋಪಭೋಗಗಳ ಅಲ್ಪ ಅಸ್ಥಿರ ಜ್ಞಾನಪ್ರಾಪ್ತಿಯಿಂದಲೂ ಶರೀರಿಯಾದ ಪ್ರತ್ಯಾಗಾತ್ಮನ ಸ್ವರೂಪವು ಮೊದಲು ಇದ್ದ ಅವಸ್ಥೆಗಿಂತ ಉತ್ತಮವಾದ ಅವಸ್ಥೆಯನ್ನು ಹೊಂದುವುದರಿಂದ ಆತ್ಮನು

ಇಲ್ಲಿ ಪರಮಾತ್ಮ ಎಂದು ಕರೆಯಲ್ಪಟ್ಟಿದ್ದಾನೆ. ಇದಕ್ಕೆ ಇನ್ನೊಂದು ವಿಧವಾದ ಅರ್ಥವೂ ಹೇಳಲ್ಪಟ್ಟಿದೆ. ಪರಮಾತ್ಮಾ ಎಂಬ ಪದವನ್ನು ಪರಂ ಆತ್ಮ ಎಂದು ಪದವಿಭಾಗ ಮಾಡಿ "ಆತ್ಮಾಂಪರಂ ಸಮಾಹಿತಃ" ಎಂದರೆ ಜೀವಾತ್ಮನು ತುಂಬಾ ಸಮಾಹಿತಚಿತ್ತನಾಗುವನು. ಅಂದರೆ ಆತ್ಮನಲ್ಲೇ ಇಡಲ್ಪಟ್ಟ ಮನಸ್ಸುಳ್ಳವನಾಗುವನು ಮತ್ತು ಆತ್ಮಧ್ಯಾನಕ್ಕೆ ಅರ್ಹನಾಗುವನು ಎಂದು ಅಭಿಪ್ರಾಯ

**ಶ್ಲೋಕ 8**—"ಯಾರು ಜ್ಞಾನವಿಜ್ಞಾನಗಳಲ್ಲಿ ತೃಪ್ತಿಯನ್ನು ಪಡೆದಿರುವ ಮನಸ್ಸನ್ನು ಹೊಂದಿದ್ದಾನೆಯೋ, ನಿರ್ವಿಕಾರನಾಗಿದ್ದಾನೆಯೋ ಜಿತೇಂದ್ರಿಯನಾದ್ದಾನೆಯೋ ಮತ್ತು ಮಣ್ಣು, ಕಲ್ಲು, ಹೊನ್ನು ಇವುಗಳನ್ನು ಸಮನಾಗಿ ಭಾವಿಸುತ್ತಾನೆಯೋ ಆ ಕರ್ಮಯೋಗಿಯು (ಆತ್ಮಾವಲೋಕನ ರೂಪವಾದ) ಯೋಗಾಭ್ಯಾಸಕ್ಕೆ ಯೋಗ್ಯನು ಎಂದು ಹೇಳಲ್ಪಡುತ್ತಾನೆ"

ಆತ್ಮ ವಿಷಯವಾದ ಜ್ಞಾನವನ್ನೂ ಮತ್ತು ಆತ್ಮವು ಪ್ರಕೃತಿಗಿಂತ ವಿಲಕ್ಷಣವಾಗಿರುವ ಆಕಾರ ಹೊಂದಿದೆ ಎಂಬ ವಿಷಯವಾದ ವಿಜ್ಞಾನವನ್ನೂ ತಿಳಿಯುವುದರಿಂದ ತೃಪ್ತಿಯನ್ನು ಹೊಂದಿದ ಮನಸ್ಸುಳ್ಳವನಾಗಿ, ದೇವ ಮನುಷ್ಯಾದಿ ಬೇರೆ ಬೇರೆ ಅವಸ್ಥೆಗಳಲ್ಲೆಲ್ಲಾ ಜ್ಞಾನ ಒಂದನ್ನೇ ಆಕಾರವುಳ್ಳ ಆತ್ಮನಲ್ಲಿ ನಿಂತವನಾಗಿ (ಮನಸ್ಸನ್ನು ನಿಲ್ಲಿಸಿದವನಾಗಿ), ಆ ಕಾರಣದಿಂದ ಜಯಿಸಲ್ಪಟ್ಟ ಮನಸ್ಸುಳ್ಳವನಾಗಿ, ಮಣ್ಣು, ಕಲ್ಲು, ಚಿನ್ನ ಇವುಗಳಲ್ಲಿ ಸಮಭಾವ ಅಂದರೆ ಪ್ರಕೃತಿ ವಿಯುಕ್ತನಾದ ಆತ್ಮಸ್ವರೂಪಾನುಸಂಧಾನನಿಷ್ಠನಾಗಿ ಪ್ರಾಕೃತ ವಿಷಯಗಳಲ್ಲಿ ಭೋಗ್ಯತ್ವಬುದ್ಧಿ ಇಲ್ಲದವನಾಗಿರುವುದರಿಂದ ಮಣ್ಣು, ಕಲ್ಲು, ಚಿನ್ನ ಇವುಗಳಲ್ಲಿ ಸಮವಾದ ಪ್ರಯೋಜನ ಉಳ್ಳವನಾಗಿ ಇರುವ ಕರ್ಮಯೋಗಿಯು ಆತ್ಮಾವಲೋಕನರೂಪ ಯೋಗಾಭ್ಯಾಸಕ್ಕೆ ಅರ್ಹನು ಎಂದು ಹೇಳಲ್ಪಡುತ್ತಾನೆ

**ಶ್ಲೋಕ 9**—"ಸುಹೃದಯರು (ಹಿತವನ್ನು ಕೋರುವವರು), ಸ್ನೇಹಿತರು, ಶತ್ರುಗಳು, ಉದಾಸೀನರು (ಒಳ್ಳೆಯದು ಕೆಟ್ಟದ್ದರಲ್ಲಿ ಉದಾಸೀನರು), ಮಧ್ಯಸ್ಥರು (ಎರಡನ್ನೂ ಬಿಡುವವರು), ದ್ವೇಷಿಗಳು ಮತ್ತು ಬಂಧುಗಳು ಇವರೆಲ್ಲರಲ್ಲಿಯೂ, ಸಾಧುಗಳಲ್ಲಿಯೂ, ಪಾಪಿಗಳಲ್ಲಿಯೂ ಸಮಬುದ್ಧಿಯುಳ್ಳವನು ಶ್ರೇಷ್ಠನು"

ಚಿಕ್ಕವರು ದೊಡ್ಡವರು ಎಂಬ ವಯಸ್ಸಿನ ತಾರತಮ್ಯವನ್ನು ಗಣನೆಗೆ ತೆಗೆದುಕೊಳ್ಳದೆ ಹಿತವನ್ನು ಮಾಡುವರು ಸುಹೃದಯರು, ಸಮಾನ ವಯಸ್ಕರಾಗಿ ಹಿತೈಷಿಗಳಾಗಿರುವವರು ಮಿತ್ರರು, ಯಾವುದೋ ಕಾರಣದಿಂದ ಅಹಿತವನ್ನು ಕೋರುವವರು ಶತ್ರುಗಳು; ಹಿತಾಹಿತಗಳನ್ನು ಕೋರಲು ಕಾರಣವಿಲ್ಲದೆ ಹಿತವನ್ನೂ ಕೋರದೆ ಅಹಿತವನ್ನೂ ಕೋರದೆ ಇರುವವರು ಉದಾಸೀನರು; ಜನ್ಮತಃ ಹಿತಾಹಿತಗಳನ್ನು ಕೋರದವರು ಮಧ್ಯಸ್ಥರು, ಜನ್ಮತಃ ಹಿತವನ್ನು ಕೋರುವವರು ಬಂಧುಗಳು, ಧರ್ಮಶೀಲರು ಸಾಧುಗಳು; ಪಾಪಶೀಲರು ಪಾಪಿಷ್ಠರು

ಕರ್ಮಯೋಗಿಯು ಆತ್ಮಾನುಸಂಧಾನ ಒಂದನ್ನೇ ಪ್ರಯೋಜನವಾಗಿ ಉಳ್ಳವನಾಗಿರುವುದರಿಂದ ಮೇಲೆ ಹೇಳಿದ ಸುಹೃನ್ಮಿತ್ರಾದಿ ಜನರುಗಳಿಂದಲೂ ಅವನಿಗೆ ಯಾವ ಪ್ರಯೋಜನವಾಗಲಿ, ವಿರೋಧವಾಗಲಿ ಇರುವುದಿಲ್ಲ ಆದ್ದರಿಂದ ಅವರೆಲ್ಲರಲ್ಲೂ ಅವನು ಇಷ್ಟಾನಿಷ್ಟವಿಲ್ಲದ ಸಮಬುದ್ಧಿ ಹೊಂದಿರುವವನಾಗಿ ಯೋಗಾಭ್ಯಾಸಕ್ಕೆ ಅರ್ಹನಾಗುತ್ತಾನೆ

(ಹಾಗಾದರೆ ಪಾಪಿಗಳಲ್ಲೂ ಸಾಧುಗಳಲ್ಲೂ ಸಮತ್ವ ಭಾವನೆ ಇರಬೇಕು ಎಂಬುದುಸರಿಯೇ? ಸತ್ಸಂಗವು ಕರ್ಮಯೋಗಿಗೆ ಅವಶ್ಯಕವಾದುದಲ್ಲವೇ? ಅವನು ಸಜ್ಜನರ ಸಂಗವನ್ನು ಆಸೆಪಟ್ಟು ಪಡೆಯಲು ಪ್ರಯತ್ನಿಸಬೇಡವೇ? ಎಂದರೆ ಈಗ ಹೇಳುತ್ತಿರುವುದು ಕರ್ಮಯೋಗಿಯ ಪರಾಕಾಷ್ಠದೆಸೆಯಾಗಿರುವುದರಿಂದ ಅಂತಹ ಉತ್ತಮ ಅವಸ್ಥೆ ಹೊಂದಿದ ಕರ್ಮಯೋಗಿಗೆ ಯಾವುದೂ ಅವಶ್ಯಕವಿಲ್ಲವೆಂದು ಅಭಿಪ್ರಾಯ)

ಆತ್ಮಧ್ಯಾನಕ್ಕೆ ಅರ್ಹತೆ ಪಡೆಯಬೇಕಾದರೆ ಮೊದಲು ಮನಸ್ಸನ್ನು ಜಯಿಸಬೇಕು ಎಂದು 7ನೇ ಶ್ಲೋಕದಲ್ಲೂ ಅನಂತರ ಇಂದ್ರಿಯಗಳನ್ನು ಜಯಿಸಿ ಲೋಷ್ಟಾಶ್ಮಕಾಂಚನಗಳಲ್ಲಿ ಸಮಭಾವ ಹೊಂದಿ ವಿಷಯಗಳ ಆಸಕ್ತಿಯನ್ನು ಬಿಡಬೇಕು ಎಂದು 8ನೇ ಶ್ಲೋಕದಲ್ಲೂ ಮತ್ತು ಎಲ್ಲಾ ಜನರಲ್ಲೂ ಸಮಭಾವದಿಂದ ಇರಬೇಕು ದ್ವೇಷಾಸೂಯೆಗಳಿರಕೂಡದು ಎಂದು 9ನೇ ಶ್ಲೋಕದಲ್ಲೂ ಹೇಳಿದೆ ಈ ಮೂರು ಗುಣಗಳೊಂದಿಗೆ ಕೂಡಿದ ಅವಸ್ಥೆಯನ್ನು ಪಡೆದ ಕರ್ಮಯೋಗಿಯು ಧ್ಯಾನಯೋಗಕ್ಕೆ ಅರ್ಹನಾಗುತ್ತಾನೆ

### 4) ಧ್ಯಾನಯೋಗವನ್ನು ಅನುಷ್ಠಿಸುವ ಕ್ರಮ–ಆತ್ಮಧ್ಯಾನ ಮಾಡುವ ಕ್ರಮದ ವಿವರಣೆ (ಶ್ಲೋಕಗಳು 10 ರಿಂದ 18)

(1) ಧ್ಯಾನಯೋಗವನ್ನ ಮಾಡುವಕಾಲದಲ್ಲಿ ಅನುಷ್ಠಿಸಬೇಕಾದ ಅಭ್ಯಾಸಗಳು

**ಶ್ಲೋಕ 10 —** "ಕರ್ಮಯೋಗಿಯು ಜನಗಳಿಲ್ಲದ ಜಾಗದಲ್ಲಿ ತಾನೊಬ್ಬನೇ ಇರುವವನಾಗಿ, ಬುದ್ಧಿಯನ್ನೂ ಮನಸ್ಸನ್ನೂ ವಶದಲ್ಲಿ ಇಟ್ಟುಕೊಂಡವನಾಗೀ ಯಾವುದರಲ್ಲೂ ಆಸೆಯಿಲ್ಲದವನಾಗಿ, ಯಾವುದರಲ್ಲೂ ತನ್ನದೆಂಬ ಮಮತೆಯಿಲ್ಲ ದವನಾಗಿ, ಯಾವಾಗಲೂ ಆತ್ಮನನ್ನು ಕುರಿತು ಯೋಗಾಭ್ಯಾಸ ಮಾಡಬೇಕು (ಅತ್ಮನಲ್ಲೇ ಯುಕ್ತ ಮನಸ್ಕನಾಗಿ ಆತ್ಮಧ್ಯಾನ ಮಾಡಬೇಕು

ಮೇಲೆ ಹೇಳಿದ ರೀತಿಯಲ್ಲಿ ಕರ್ಮಯೋಗ ನಿರತನಾದ ಕರ್ಮ ಯೋಗನಿಷ್ಠನು ಯಾವಾಗಲೂ ಪ್ರತಿದಿನವೂ ಯೋಗಾಭ್ಯಾಸ ಕಾಲದಲ್ಲೆಲ್ಲಾ ಆತ್ಮಧ್ಯಾನಯುಕ್ತನಾಗಿರಬೇಕು ಅದರ ಅವನು ಐದು ನಿಯಮಗಳನ್ನು ಪಾಲಿಸುತ್ತಾ ಆತ್ಮಧ್ಯಾನಮಾಡಬೇಕೆಂದು ಈ ಶ್ಲೋಕದಲ್ಲಿ ತಿಳಿಸಿದೆ ಅವುಯಾವುದೆಂದರೆ 1) **ರಹಸಿಸ್ಥಿತ** ಜನವರ್ಜಿತವಾಗಿ ನಿಶ್ಶಬ್ದವಾಗಿರುವ ಸ್ಥಳದಲ್ಲಿ ಧ್ಯಾನಮಾಡಬೇಕು 2) **ಏಕಾಕೀ** ಮತ್ತಾರೂ ಇಲ್ಲದೆ ತಾನೊಬ್ಬನೇ ಇರಬೇಕು 3) **ಯತಚಿತ್ತಾತ್ಮ** ಮನಸ್ಸನ್ನೂ ಬುದ್ಧಿಯನ್ನೂ ತನ್ನವಶದಲ್ಲಿ ಇಟ್ಟುಕೊಂಡಿರಬೇಕು 4) **ನಿರಾಶೀ** ಆತ್ಮವ್ಯತಿರಿಕ್ತವಾದ ಇತರ ಸಮಸ್ತ ವಸ್ತುಗಳಲ್ಲಿ ಆಸೆ ಇಲ್ಲದವನಾಗಿರಬೇಕು 5) **ಅಪರಿಗ್ರಹ** ಆತ್ಮವ್ಯತಿರಿಕ್ತವಾದ ಯಾವ ವಸ್ತುವಿನಲ್ಲೂ ಅದು ತನ್ನದೆಂಬ ಮಮಕಾರವಿಲ್ಲದವನಾಗಿ ಮಮಕಾರ ಹಿತನಾಗಿರಬೇಕು

**ಶ್ಲೋಕಗಳು 11 ಮತ್ತು 12—**"ಪವಿತ್ರವಾದ ಸ್ಥಳ ದಲ್ಲಿ, ತುಂಬಾ ಎತ್ತರವಾಗಿಲ್ಲದ, ತುಂಬಾ ತಗ್ಗಾಗಿಲ್ಲದ, ವಸ್ತ್ರವೂ ಕೃಷ್ಣಾಜಿನವೂ ಧರ್ಭೆಯೂ ಒಂದರ ಮೇಲೆ ಒಂದು ಹಾಸಿರುವ ಸ್ಥಳದಲ್ಲಿ ತನ್ನ ಸ್ಥಿರವಾದ ಆಸನವನ್ನು ಪ್ರತಿಷ್ಠಾಪಿಸಿ, ಆ ಆಸನದ ಮೇಲೆ ಕುಳಿತುಕೊಂಡು, ಮನಸ್ಸು ಮತ್ತು ಇಂದ್ರಿಯಗಳನ್ನು (ವ್ಯಾಪಾರಗಳನ್ನು) ತಡೆದವನಾಗಿ ಯೋಗಾಭ್ಯಾಸವನ್ನು ಮಾಡ ಬೇಕು"

ಹಿಂದಿನ ಶ್ಲೋಕದಲ್ಲಿ ತಿಳಿಸಿದ 5 ಅಭ್ಯಾಸಗಳೊಂದಿಗೆ ಇನ್ನೂ ಮೂರು ಅಭ್ಯಾಸಗಳನ್ನು ಆತ್ಮಧ್ಯಾನ ಮಾಡುವವನು ಧ್ಯಾನ ಕಾಲದಲ್ಲಿ ಅನುಷ್ಠಿಸಬೇಕೆಂದು ಈ ಶ್ಲೋಕದಲ್ಲಿ ತಿಳಿಸಿದೆ

1) **ತತ್ರಆಸನೇಉಪವಿಶ್ಯ—**ಅಲ್ಲಿ ಆಸನದಲ್ಲಿ ಕುಳಿತ್ತು ಕೊಂಡು ಧ್ಯಾನಮಾಡಬೇಕು ಧ್ಯಾನಕ್ಕೆ ಕುಳಿತುಕೊಳ್ಳುವ ಆಸನವು ಹೇಗಿರಬೇಕು ಎಂದರೆ (1) **ಶುಚಾದೇಶೇ**—ಅದು ಶುಚಿ ಯಾದ ಸ್ಥಳದಲ್ಲಿ ಇರಬೇಕು ಅಂದರ ಅಶುದ್ಧರಾದ ಪುರುಷರುಗಳ ಸಂಬಂಧವಿಲ್ಲದ ಮತ್ತು ಅಶುಚಿಯಾದ ವಸ್ತುಗಳ ಸಂಪರ್ಕವಿಲ್ಲದ ಸ್ಥಳದಲ್ಲಿ ಕುಳಿತುಕೂಂಡು ಧ್ಯಾನಮಾಡಬೇಕು (11) **ನಾತ್ಯು ಚ್ಛಿತಂ**—ಅಧಿಕ ಎತ್ತರವಿಲ್ಲದ ಸ್ಥಳವಾಗಿರಬೇಕು (111) **ನಾತಿ ನೀಚರ**—ಅತಿಕಳಗೆ ಇಲ್ಲದ ಸ್ಥಳವಾಗಿರಬೇಕು (IV) **ಚೈಲಾ ಜಿನಕುಶೋತ್ತರಂ**—ವಸ್ತ್ರ, ಕೃಷ್ಣಾಜಿನ, ಧರ್ಭೆ ಇವುಗಳನ್ನು ಒಂದರ ಮೇಲೊಂದನ್ನು ಹಾಸಿರಬೇಕು (ಅಂದರೆ ಮೊದಲು ಒಂದು ಮಣೆಯಮೇಲೆ ಧರ್ಭೆಗಳನ್ನು ಇರಿಸಿ ಅದರ ಮೇಲೆ ಕೃಷ್ಣಾಜಿನವನ್ನೂ ಅದರಮೇಲೆ ಒಂದು ಬಟ್ಟೆಯನ್ನೂ ಹಾಸಿರ ಬೇಕು)

(ಸೌದೆ, ಮರ ಮುಂತಾದುವುಗಳಿಂದ ಮಾಡಲ್ಪಟ್ಟ ಸ್ಥಿರ ವಾದ ಒಂದು ಆಸನವನ್ನು ಸ್ಥಾಪಿಸಿ ಮನಸ್ಸಿನ ಪ್ರಸನ್ನತೆಗೆ ಅನು ಕೂಲವಾಗುವಂತೆ ಒರಗಿಕೂಳ್ಳಲು ಹಿಂದೆ ಗೋಡೆಯೋ ಮಣೆಯೋ ಇರುವ ಒಂದು ಆಸನದಲ್ಲಿ ಕುಳಿತುಕೊಂಡು ಧ್ಯಾನಮಾಡಬೇಕು ನಡೆಯುತ್ತಿದ್ದರೆ ಆಯಾಸವಾಗುತ್ತದೆ, ಮಲಗಿಕೊಂಡರೆ ನಿದ್ರೆ ಬರುತ್ತದೆ, ಅದ್ದರಿಂದ ಕುಳಿತುಕೊಂಡೆ ಧ್ಯಾನ ಮಾಡಬೇಕೆಂದು ಹೇಳಿದೆ)

2) **ಯತಚಿತ್ತೇಂದ್ರಿಯಕ್ರಿಯಃ**—ಬುದ್ಧಿ ಮತ್ತು ಇಂದ್ರಿಯಗಳ ವ್ಯಾಪಾರಗಳನ್ನು ಎಲ್ಲಾ ಪ್ರಕಾರಗಳಿಂದಲೂ ತಡೆದು

3) **ಏಕಾಗ್ರಮನಃಕೃತ್ವಾ—** ಮನಸ್ಸು ಚಂಚಲತೆ ಯಿಲ್ಲದಂತ ತಡೆದು ಯೋಗ ಒಂದರಲ್ಲೇ ನಿಲ್ಲಿಸಿ–ಆತ್ಮಶುದ್ಧಿಗಾಗಿ ಅಂದರೆ ಆತ್ಮನನ್ನು (ಸಂಸಾರ) ಬಂಧನದಿಂದಬಿಡಿಸುವುದಕ್ಕಾಗಿ ಯೋಗಾಭ್ಯಾಸಗಲ್ಲಿ ಯುಕ್ತನಾಗಬೇಕು ಅಂದರೆ ಆತ್ಮಸಾಕ್ಷಾ ತ್ಕಾರಕ್ಕಾಗಿ ಆತ್ಮಚಿಂತನ ಅಥವ ಧ್ಯಾನಮಾಡಬೇಕು.

**ಶ್ಲೋಕಗಳು 13 ಮತ್ತು 14—**'ಶರೀರ ಶಿರಸ್ಸು ಕಂಠ ಇವುಗಳನ್ನು ಸಮವಾಗಿ ಅಲ್ಲಾಡದಂತೆ ಸ್ಥಿರವಾಗಿ ನಿಲ್ಲಿಸಿ, ಇತರ ದಿಕ್ಕುಗಳನ್ನು ನೋಡದೆ, ತನ್ನ ಮೂಗಿನ ಅಗ್ರಭಾಗವನ್ನು ನೋಡುತ್ತಾ, ಪ್ರಶಾಂತಮನಸ್ಕನಾಗಿ, ಉಭಯರಹಿತನಾಗಿ, ಬ್ರಹ್ಮಚರ್ಯವ್ರತದಲ್ಲಿರುವವನಾಗಿ, ಮನಸ್ಸನ್ನು ನಿಗ್ರಹಿಸಿ, ನನ್ನನ್ನೇ ಸ್ಮರಿಸುವವನಾಗಿ ಜಾಗರೂಕನಾಗಿ, ನಾನೇ ಅತ್ಯಂತ ಶ್ರೇಷ್ಠ ಸಹಾಯಕನೆಂದು ನಂಬಿದವನಾಗಿ ನನ್ನನ್ನೇ ಚಿಂತಿಸುತ್ತಾ ಇರು (ಅಂದರೆ ನನ್ನ ಚಿಂತನೆಯೊಂದಿಗೆ ಧ್ಯಾನಯೋಗವನ್ನು ಆರಂಭಿಸು ಎಂದು ಅಭಿಪ್ರಾಯು)"

ಧ್ಯಾನಯೋಗಿಯು ಅನುಷ್ಠಿಸಬೇಕಾದ ಇನ್ನೂ ಆರು ಅಭ್ಯಾಸಗಳನ್ನು ಈ ಎರಡು ಶ್ಲೋಕಗಳು ತಿಳಿಸುತ್ತವೆ. ಅವು ಗಳಲ್ಲಿ ಮೊದಲು ಮೂರು ಅಭ್ಯಾಸಗಳು ಶರೀರಕ್ಕೂ ಮಿಕ್ಕ ಮೂರು ಅಭ್ಯಾಸಗಳು ಮನಸ್ಸಿಗೂ ಸಂಬಂಧಿಸಿದ ವಿಷಯ ಗಳಾಗಿವೆ.

ಶರೀರಕ್ಕೆ ಸಂಬಂಧಪಟ್ಟ ಮೂರು ಅಭ್ಯಾಸಗಳು —

(1) ಶರೀರ, ಶಿರಸ್ಸು, ಕತ್ತು ಇವೆಲ್ಲವನ್ನೂ ಸಮವಾಗಿ ಅಲ್ಲಾಡದಂತೆ ಸ್ಥಿರವಾಗಿ ನಿಲ್ಲಿಸಿಕೊಂಡು ಕುಳಿತುಕೊಳ್ಳಬೇಕು. (ದೇಹವು ಬಾಗಿದ್ದರೆ ತನ್ನನ್ನು ಆವರಿಸಿಕೊಂಡು ನಿದ್ರೆ ಬರುವ ಸಂಭವವೂ ಉಂಟು. ಧ್ಯಾನಕ್ಕೆ ನಿದ್ರೆಯು ದೊಡ್ಡ ಶತ್ರುವು ಆದ್ದರಿಂದ ಧ್ಯಾನಮಾಡುವಾಗ ಶರೀರ, ಶಿರಸ್ಸು ಮತ್ತು ಕತ್ತು ಇವು ಮೂರನ್ನೂ ನೇರವಾಗಿಯೂ, ಅಲ್ಲಾಡದೆಯೂ, ಸ್ಥಿರವಾಗಿಯೂ ಇಟ್ಟುಕೊಂಡು ಕುಳಿತುಕೊಳ್ಳಬೇಕು.)

(11) ಯಾವ ದಿಕ್ಕುಗಳಕಡೆಗೂ ನೋಡದೆ ತನ್ನ ಮೂಗಿನ ಅಗ್ರಭಾಗ ಒಂದನ್ನೇ ನಿರಂತರವಾಗಿ ನೋಡುತ್ತಾ ಇರಬೇಕು (ನಾಲ್ಕು ಕಡೆಯೂ ನೋಡುತ್ತಾ ಕುಳಿತರೆ ಮನಸ್ಸು ಚಲಿಸುತ್ತಾ ಏಕಾಗ್ರತೆಹೊಂದುವುದು ಕಷ್ಟವಾಗುತ್ತದೆ, ಏನನ್ನೂ ನೋಡದೆ ಸುಮ್ಮನೆ ಕಣ್ಣುಮುಚ್ಚಿ ಕುಳಿತರೆ ನಿದ್ರೆಬರುವ ಸಂಭವವುಂಟು, ಆದ್ದರಿಂದ ಹೊರಗಿನ ಪ್ರಪಂಚವನ್ನು ಮರೆಯಲು ಯತ್ನಿಸಿ ಮೂಗಿನ ತುದಿಯನ್ನು ನೋಡುತ್ತಾ ಕುಳಿತುಕೊಳ್ಳಬೇಕೆಂದು ಹೇಳಿದೆ.)

(111) ಬ್ರಹ್ಮಚರ್ಯವ್ರತದಲ್ಲಿ ಇರುವವನಾಗಬೇಕು. (ಕಾಯೇನವಾಚಾಮನಸಾ ಬ್ರಹ್ಮಚರ್ಯವ್ರತವನ್ನು ಪಾಲಿಸಬೇಕು)

ಮನಸ್ಸಿಗೆ ಸಂಬಂಧಪಟ್ಟ ಮೂರು ಅಭ್ಯಾಸಗಳು —

(IV) ಮನಸ್ಸನ್ನು ನಿಗ್ರಹಿಸಿ ಪ್ರಶಾಂತವಾಗಿಟ್ಟುಕೊಳ್ಳಬೇಕು, ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿರಬೇಕು.

(V) ಧ್ಯಾನಯೋಗಕ್ಕೆ ವಿಘ್ನಪ್ರಾಯವಾಗುವುದರಿಂದ ಎಂದೂ ಭಯವಿಲ್ಲದೆ ಧೈರ್ಯಯುತನಾಗಿರಬೇಕು.

(VI) ಪರಮಪುರುಷನಾದ ನನ್ನಲ್ಲೇ (ಪರಮಾತ್ಮನಲ್ಲೇ) ಪರಮಭಕ್ತಿಯಿಂದ ಯುಕ್ತನಾಗಿ, ಮನಸ್ಸನ್ನು ಪ್ರಾಪಂಚಿಕ ವಿಷಯಗಳಿಂದ ಸೆಳೆದು ನನ್ನ (ಪರಮಾತ್ಮನ) ಚಿಂತನೆಯಲ್ಲೇ ಮಾಡುತ್ತಾ ಯೋಗವನ್ನು ಆರಂಭಿಸಬೇಕು ಎಂದು ಶ್ರೀ ಕೃಷ್ಣನು ಹೇಳಿದ್ದಾನೆ.

**ಶ್ಲೋಕ 15**— ಈ ಪ್ರಕಾರವಾಗಿ ಸದಾ ಮನಸ್ಸನ್ನು ಪರಮಾತ್ಮನಿಗೆ ಸೇರಿಸಿ ನಿಶ್ಚಲ ಮನಸ್ಸುಳ್ಳ ಯೋಗಿಯು(ಆತ್ಮಧ್ಯಾನ ಯೋಗ ನಿರತನಾದ ಪುರುಷನು) ನನ್ನಲ್ಲಿಯೇ ನೆಲಸಿ ಕೊಂಡಿರುವ ನಿರ್ವಾಣ ಪರಾಕಾಷ್ಠೆ ರೂಪವಾದ ಶಾಂತಿಯನ್ನು ಹೊಂದುತ್ತಾನೆ. ಈ ರೀತಿಯಾಗಿ ಯಾವ ಮನಸ್ಸು ಶುಭಾಶ್ರಯ ರೂಪನಾದ, ಪರಬ್ರಹ್ಮನಾದ, ಪುರುಷೋತ್ತಮನಾದ ನನ್ನನ್ನು ಸ್ಪರ್ಶಿಸುತ್ತಿರುವುದರಿಂದ ನನ್ನ ಸಂಪರ್ಕದಿಂದ ಪವಿತ್ರವಾಗಿ ನಿಶ್ಚಲವಾಗಿದೆಯೋ ಆ ನಿಶ್ಚಲ ಮನಸ್ಸುಳ್ಳ ಯೋಗಿಯು ಮೇಲೆ ಹೇಳಿದ ರೀತಿಯಲ್ಲಿ ನನ್ನಲ್ಲಿ ಮನಸ್ಸನ್ನು ಇಟ್ಟು ನನ್ನಲ್ಲೇ ಇರುವವನಾಗಿ ನಿರ್ವಾಣದ ಪರಕಾಷ್ಠರೂಪವಾದ ಶಾಂತಿಯನ್ನು ಅಂದರೆ ಪರಮಸುಖವನ್ನು ಹೊಂದುತ್ತಾನೆ ಎಂದು ಶ್ರೀ ಕೃಷ್ಣ ಹೇಳಿದ್ದಾನೆ.

ಹೀಗೆ ಆತ್ಮ ಸಾಕ್ಷಾತ್ಕಾರರೂಪ ಧ್ಯಾನಯೋಗವನ್ನು ಆರಂಭಿಸುವವನು ಮೊದಲು ಮನಸ್ಸನ್ನು ನಿರ್ಮಲಗೊಳಿಸುವ ಸಲುವಾಗಿ ಅದನ್ನು ಶುಭಸ್ವರೂಪನಾದ ಭಗವಂತನಲ್ಲಿ ನಿಲ್ಲಿಸ ಬೇಕೆಂದು ಹೇಳಿ ಮುಂದೆ ಯೋಗಕ್ಕೆ ಬೇಕಾದ ಇತರ ಸಾಧನಗ ಳನ್ನು ಶ್ರೀ ಕೃಷ್ಣ ವರ್ಣಿಸುತ್ತಾನೆ.

(2) ಧ್ಯಾನಯೋಗಿಯು ಸರ್ವಕಾಲದಲ್ಲೂ ಆಚರಿಸ ಬೇಕಾದ ಇತರ ಅಭ್ಯಾಸಗಳು ಮತ್ತು ನಿಯಮಗಳು
ಶ್ಲೋಕಗಳು 16 ಮತ್ತು 17)

**ಶ್ಲೋಕ 16**—"ಹೆಚ್ಚಾಗಿ ಭೋಜನಮಾಡುವವನಿಗೂ, ಸ್ವಲ್ಪವೂ ಭೋಜನಮಾಡದವನಿಗೂ, ಅತಿಯಾಗಿ ನಿದ್ರೆಮಾಡುವ ಸ್ವಭಾವವುಳ್ಳವನಿಗೂ, ಹಾಗೆಯೇ ಅತಿಯಾಗಿ ಎಚ್ಚರವಾಗಿರುವವ (ನಿದ್ರೆಯೇ ಮಾಡದವನಿಗೂ) ಯೋಗವು ಸಿದ್ಧಿಸುವುದಿಲ್ಲ"

ಅಧಿಕವಾಗಿ ಭೋಜನ ಮಾಡುವುದೂ, ಭೋಜನ ಮಾಡ ದೆಯೇ ಇರುವುದೂ, ಅಧಿಕ ವಿಹಾರಮಾಡುವುದೂ, ಸ್ವಲ್ಪವೂ ವಿಹಾರ ಮಾಡದೆಯೇ ಇರುವುದೂ, ಅಧಿಕ ಆಯಾಸಪಟ್ಟು ಕೆಲಸ ಮಾಡುವುದೂ, ಆಯಾಸವಡದೆ ಕೆಲಸ ಮಾಡದಯೇ ಇರು ವುದೂ ಇವೆಲ್ಲವೂ ಯೋಗಾಭ್ಯಾಸಕ್ಕೆ ವಿರೋಧಿಗಳು (ಅಂದರೆ ಆಹಾರ, ವಿಹಾರ, ನಿದ್ರಾದಿಗಳಲ್ಲಿ ಮಿತವಾಗಿರುವವನೇ ಯೋಗಕ್ಕೆ ಅರ್ಹನು ಎಂದು ಅಭಿಪ್ರಾಯ)

**ಶ್ಲೋಕ 17**—"ಯುಕ್ತವಾದ ಆಹಾರ ವಿಹಾರಗಳುಳ್ಳ ವನೂ, ಕರ್ಮಗಳಲ್ಲಿ ಯುಕ್ತವಾದ ಪರಿಶ್ರಮವುಳ್ಳವನೂ (ಅಂದರೆ ಬೇಸರ ವಟ್ಟು ಕಷ್ಟವಾಗದಷ್ಟು ಕರ್ಮಮಾಡುವವನು) ಯುಕ್ತ ವಾದ ನಿದ್ರೆ ಎಚ್ಚರಾದಿಗಳುಳ್ಳವನೂ ಆದ ಪುರುಷನಿಗೆ ದುಃಖವನ್ನು ಹೋಗಲಾಡಿಸುವ ಯೋಗವು ಸಿದ್ಧಿಸುತ್ತದೆ"

ಇಲ್ಲಿ ಯುಕ್ತವಾದ ಎಂಬುದಕ್ಕೆ ಮಿತವಾದ ಎಂದು ಅರ್ಥ ಮಾಡಿದ್ದಾರೆ ಮಿತವಾದ ಆಹಾರವುಳ್ಳವನಿಗೂ, ಮಿತವಾದ ದೇಹಾಯಾಸವುಳ್ಳವನಿಗೂ, ಮಿತವಾದ ನಿದ್ರೆ ಜಾಗರವುಳ್ಳವನಿಗೂ ಸಂಸಾರ ಬಂಧನವನ್ನು ಹೋಗಲಾಡಿಸುವ ಯೋಗವು ಪೂರ್ಣ ವಾಗಿ ಸಿದ್ಧಿಸುತ್ತದೆ

**(5) ಯೋಗಿಯು ಮನಸ್ಸನ್ನು ಧ್ಯೇಯ ವಸ್ತು ವಿನಲ್ಲಿ ನಿಲ್ಲಿಸುವುದಕ್ಕಾಗಿ ಅನುಷ್ಠಿಸಬೇಕಾದ ಅಭ್ಯಾಸ ಗಳು; ಅದರಿಂದ ಅವನಲ್ಲಿ ಉಂಟಾಗುವ ಮಾನಸಿಕ ಪರಿವರ್ತನೆ ಮತ್ತು ಅದರಿಂದ ಅವನಿಗೆ ಲಭಿಸುವ ನಿರ ತಿಶಯ ಆನಂದದ ವರ್ಣನೆ**

(ಶ್ಲೋಕಗಳು 18 ರಿಂದ 28)

(1) ಆತ್ಮಚಿಂತನ ಯೋಗವನ್ನು ಅನುಷ್ಠಿಸುವ ಯೋಗಿ ಯಲ್ಲಿ ಉಂಟಾಗುವ ಮಾನಸಿಕ ಪರಿವರ್ತನೆ— (ಶ್ಲೋಕಗಳು 18 ರಿಂದ 23)

**ಶ್ಲೋಕ 18**—"ಯಾವಾಗ ನಿಯಮಿಸಲ್ಪಟ್ಟ ಚಿತ್ತವು ಏಕಾಗ್ರವಾಗಿ ಆತ್ಮನಲ್ಲಿಯೇ ನಿಲ್ಲುತ್ತದೆಯೋ ಆಗ ಸಮಸ್ತ ಕಾಮಗಳಲ್ಲಿ ಆಸೆಯಿಲ್ಲದವನಾಗಿ ಯೋಗಾರ್ಹನೆಂದು ಹೇಳಲ್ಪಡು ವನು"

ಯಾವಾಗ ಪ್ರಯೋಜನವನ್ನೇ ವಿಷಯವಾಗಿ ಉಳ್ಳ ಮನಸ್ಸು ಜೀವಾತ್ಮನನ್ನೇ ತನಗೆ ನಿರತಿಶಯ ಪ್ರಯೋಜನವೆಂದು ತಿಳಿದು ಅವನಲ್ಲಿ ನಿಶ್ಚಲವಾಗಿ ಸ್ಥಿರವಾಗಿ ನಿಲ್ಲುತ್ತದೆಯೋ ಆಗ ಅವನು ಇತರ ಸಕಲ ಕಾಮಗಳಲ್ಲೂ ಆಸೆ ಇಲ್ಲದವನಾಗಿ, ಯುಕ್ತ ನೆನಿಸಿಕೊಳ್ಳುವನು ಅಂದರೆ ಯೋಗಾಭ್ಯಾಸಕ್ಕೆ ಅರ್ಹನಾಗಿ ಯೋಗಕ್ಕೆ ಅಧಿಕಾರಿ ಎನ್ನಿಸಿಕೊಳ್ಳುವನು

**ಶ್ಲೋಕ 19**—"ಹೇಗೆ ಗಾಳಿ ಬೀಸದಿರುವ ಸ್ಥಳದಲ್ಲಿರುವ ದೀಪವು ಅಲ್ಲಾಡದೆ ಪ್ರಕಾಶವಾಗಿರುತ್ತದಯೋ ಹಾಗೆ ಎಂಬ ಉವಮಾನವು ಯೋಗಾಭ್ಯಾಸದಲ್ಲಿ ನಿರತನಾಗಿರುವ, ನಿಯಮಿಸ ಲ್ಪಟ್ಟ ಮನಸ್ಸುಳ್ಳ ಯೋಗಿಯ ಆತ್ಮಸ್ವರೂಪದ ವಿಷಯದಲ್ಲಿ ಹೇಳಲ್ಪಟ್ಟಿದೆ"—

ಗಾಳಿ ಬೀಸದಿರುವ ಸ್ಥಳದಲ್ಲಿ ಇಟ್ಟಿರುವ ದೀಪವು ಕಂಪಿಸದ (ಚಲಿಸದ) ನಿಶ್ಚಲವಾದ ಪ್ರಕಾಶದೊಂದಿಗೆ ಪ್ರಕಾಶಿಸುತ್ತಾ ಇರುತ್ತ ದಯೋ ಹಾಗೆಯೇ ಇತರ ಸಮಸ್ತ ಮನೋವೃತ್ತಿಗಳೂ ನಾಶ ವಾಗಿ ಆತ್ಮವಿಷಯ ಒಂದರಲ್ಲೇ ನಿಯಮಿಸಲ್ಪಟ್ಟ ಮನಸ್ಸುಳ್ಳ ಮತ್ತು ಆತ್ಮವಿಷಯ ಯೋಗದಲ್ಲಿ ನಿರತನಾಗಿರುವ ಯೋಗಿಯ ಆತ್ಮಸ್ವರೂಪವು ಚೆನ್ನಾಗಿ ಪ್ರಕಾಶಿಸುತ್ತದೆ ಅಂದರೆ ವಾಯು ರಹಿತ ವಾಗಿರುವ ಪ್ರದೇಶದಲ್ಲಿರುವ ಕಾರಣದಿಂದ ದೀಪವು ಚಲಿಸದ ನಿಶ್ಚಲವಾಗಿ ಪ್ರಕಾಶಯುಕ್ತವಾಗಿರುವಂತೆ ಇತರ ಸಮಸ್ತ ಮನೋ ವೃತ್ತಿಗಳಿಂದ ನಿವೃತ್ತಿಹೊಂದಿರುವ ಮನಸ್ಸಿನಿಂದ ಕೂಡಿರುವುದರಿಂದ ಯೋಗಿಯ ಆತ್ಮವು ನಿಶ್ಚಲವಾದ ಜ್ಞಾನಪ್ರಕಾಶದಿಂದ ಕೂಡಿ ಸ್ಥಿರವಾಗಿ ಪ್ರಕಾಶಿಸುತ್ತದ ಎಂದು ಅರ್ಥ (ಗಾಳಿಯು ದೀಪವನ್ನು ಕದಲಿಸಿ ಅದರ ಪ್ರಭೆಯನ್ನು ಕಡಿಮೆ ಮಾಡುವಂತೆ ಎಲ್ಲಾ ಕಡೆ ಗಳಲ್ಲೂ ಚಲಿಸುವ ಮನೋವ್ಯಾಪಾರಗಳು ಆತ್ಮನ ಧರ್ಮಭೂತ ಜ್ಞಾನವನ್ನು ಕದಲಿಸಿ ಅದರ ವಿಕಾಸಕ್ಕೆ ನ್ಯೂನತೆ ಉಂಟುಮಾಡು ತ್ತದ ಆದ್ದರಿಂದ ಯತಚಿತ್ತನಾದ ಧರ್ಮಭೂತಜ್ಞಾನವು ನ್ಯೂನತೆ ಯಿಲ್ಲದ ಚೆನ್ನಾಗಿ ಪ್ರಕಾಶಿಸುತ್ತದ ಎಂದು ಅಭಿಪ್ರಾಯ)

**ಶ್ಲೋಕಗಳು 20, 21, 22, 23**—ಈ ನಾಲ್ಕು ಶ್ಲೋಕಗಳನ್ನು ಯೋಗಸಾಧನೆಗಳನ್ನು ಅನುಷ್ಠಿಸಿ ಯೋಗದೆಶ ಯನ್ನು ಪಡೆಯಬೇಕಾದವನ ಮಾನಸಿಕ ಪ್ರವೃತ್ತಿ ಹೇಗಿರುತ್ತದೆ ಎಂಬುದನ್ನು ವಿವರಿಸುತ್ತವೆ —

**ಶ್ಲೋಕ 20**—"ಯೋಗಾಭ್ಯಾಸದಿಂದ ನಿರೋಧಿಸಲ್ಪಟ್ಟ ಚಿತ್ತವು ಯಾವಯೋಗದಲ್ಲಿ ರಮಿಸುತ್ತಾ ಇರುತ್ತದೆಯೋ, ಯಾವ ಯೋಗದಿಂದ ಮನಸ್ಸಿನಲ್ಲಿ ಆತ್ಮನನ್ನು ನೋಡುತ್ತಿರುವವನಾಗಿ ಆತ್ಮನಲ್ಲಿ ಸಂತೋಷ ಹೊಂದುತ್ತಾನೆಯೊ"—

**ಶ್ಲೋಕ 21**—"ಯಾವ ಸುಖವು ಇಂದ್ರಿಯಗಳಿಗೆ ಗೋಚರವಲ್ಲದ್ದಾಗಿರುವುದೋ ಮತ್ತು ಬುದ್ಧಿಯಿಂದ ಗ್ರಹಿಸಲು ಯೋಗ್ಯವಾಗಿರುವುದೋ ಅಂತಹ ಅತ್ಯಂತವಾದ ಸುಖವನ್ನು ಯಾವ ಯೋಗದಿಂದ ತಿಳಿಯುತ್ತಾನೆಯೋ ಮತ್ತು ಯಾವ ಯೋಗದಲ್ಲಿ ನಿಂತವನಾಗಿ ಯೋಗಿಯು ಮತ್ತೆ ತತ್ತ್ವದಿಂದ ಚಲಿಸದೇ ಇರುತ್ತಾನೆಯೋ"—

**ಶ್ಲೋಕ 22**—"ಯಾವ ಯೋಗವನ್ನು ಹೊಂದಿ ಅದಕ್ಕಿಂತ ಅಧಿಕವಾದ ಲಾಭವು ಮತ್ತೊಂದಿಲ್ಲನೆಂದು ತಿಳಿಯುತ್ತಾನೆಯೋ, ಮತ್ತು ಯಾವ ಯೋಗದಲ್ಲಿ ಇರುವ ಯೋಗಿಯು ಅತ್ಯಂತ ಅಧಿಕವಾದ ದುಃಖದಿಂದಲೂ ಅಲ್ಲಾಡಿಸಲ್ಪಡುವುದಿಲ್ಲವೋ"—

**ಶ್ಲೋಕ 23**—"ಆ ದುಃಖ ಸಂಬಂಧವಿಲ್ಲದ ಅದನ್ನು ಯೋಗವೆಂದು ಹೆಸರುಳ್ಳದ್ದಾಗಿ ತಿಳಿದುಕೊಳ್ಳಬೇಕು ಅಂತಹ ಯೋಗವು ನಿಶ್ಚಯ ಪೂರ್ವಕವಾಗಿ ಹರ್ಷಚಿತ್ತದಿಂದ ಆಚರಿಸಲ್ಪಡಬೇಕು"

ಈ ನಾಲ್ಕು ಶ್ಲೋಕಗಳು ಯೋಗಾಭ್ಯಾಸ ಮಾಡುವವನ ಮಾನಸಿಕ ಪ್ರವೃತ್ತಿಗಳು ಯಾವ ರೀತಿ ಇರುತ್ತವೆ ಎಂಬುದನ್ನು ತಿಳಿಸಿ ಯೋಗಾಭ್ಯಾಸದ ಮಹಾತ್ಮೆಯನ್ನು ವರ್ಣಿಸುತ್ತವೆ ಇಲ್ಲಿ ಮುಖ್ಯವಾಗಿ ಆರು ವಿಷಯಗಳು ತಿಳಿಸಲ್ಪಟ್ಟಿವೆ (1) ಆತ್ಮಚಿಂತನ ಯೋಗವನ್ನು ಅಭ್ಯಾಸ ಮಾಡುವುದಕ್ಕಾಗಿ ಸಮಸ್ತ ಬಾಹ್ಯ ವಿಷಯಗಳಿಂದ ತಡೆಯಲ್ಪಟ್ಟ ಯೋಗಿಯ ಮನಸ್ಸು, ಯೋಗ ವಿಷಯ ವಾದ ಆತ್ಮ ಚಿಂತನೆಯಲ್ಲಿ ಅದೇ ಅತ್ಯಧಿಕವಾದ ಸುಖವು ಎಂದು ತಿಳಿದು ಅದರಲ್ಲಿ ರಮಿಸುತ್ತದೆ (2) ಆತ್ಮಚಿಂತನ ಯೋಗವನ್ನು ಅಭ್ಯಾಸ ಮಾಡುತ್ತಿರುವ ಯೋಗಿಯ ಮನಸ್ಸು, ಜೀವಾತ್ಮ ಸ್ವರೂಪವನ್ನು ಸಾಕ್ಷಾತ್ಕರಿಸುತ್ತಾ ಇತರ ಯಾವುದನ್ನೂ ಅಪೇಕ್ಷಿಸದ ಆತ್ಮ ಚಿಂತನದಲ್ಲೇ ಸಂತುಷ್ಟನಾಗಿರುತ್ತದೆ. (3) ಇಂತಹ ಬುದ್ಧಿಗ್ರಾಹ್ಯನಲ್ಲದ ಕೇವಲ ಆತ್ಮ ವಿಷಯಕ ಬುದ್ಧಿಯಿಂದ ಮಾತ್ರ ಗ್ರಾಹ್ಯವಾದ ಆತ್ಯಂತಿಕ ಸುಖವನ್ನು ಯೋಗದಲ್ಲಿರುವ ಯೋಗಿಯು ಅನುಭವಿಸುತ್ತಾನೆ (4) ಆ ಯೋಗದಲ್ಲಿರುವವನು ಸುಖದ ಅಧಿಕತೆಯಿಂದಾಗಿ ತತ್ತ್ವದಿಂದ ಅಂದರೆ ಆತ್ಮಸ್ವರೂಪಚಿಂತನದಿಂದ ವಿಚಲಿತನಾಗುವುದಿಲ್ಲ (5) ಆ ಯೋಗವನ್ನು ಪಡೆದ ಯೋಗಿಯು ಯೋಗದಿಂದ ನಿವೃತ್ತಿ ಹೊಂದಿದಾಗ ಮತ್ತೆ ಅದನ್ನೇ ಹೊಂದಬೇಕೆಂಬ ಆಸೆ ಹೊಂದುತ್ತಾನೆ ಮತ್ತು ಇತರ ಯಾವ ಲಾಭವನ್ನೂ ಅದಕ್ಕಿಂತ ಅಧಿಕವೆಂದು ತಿಳಿಯುವುದಿಲ್ಲ (6) ಆಯೋಗದಲ್ಲಿರುವ ಯೋಗಿಯು ಗುಣವಂತನಾದ ಪುತ್ರನ ವಿಯೋಗವೇ ಮೊದಲಾದ ಅತ್ಯಂತ ದುಃಖವು ಪ್ರಾಪ್ತವಾದಾಗ ಕೂಡ ಯೋಗಾಭ್ಯಾಸದಿಂದ ವಿಚಲಿತನಾಗುವುದಿಲ್ಲ (ಅಂದರೆ ಯೋಗವನ್ನು ತ್ಯಜಿಸುವುದಿಲ್ಲ ಎಂದು ಅರ್ಥ )

ಈ ಯೋಗವು ಮೇಲೆ ಹೇಳಿದ ಲಕ್ಷಣಗಳಿಂದ ಕೂಡಿದ್ದಾಗಿದ ದುಃಖ ಸಂಯೋಗಕ್ಕೆ ಪ್ರತೀಕಾರವಾದ ಅಂದರೆ ದುಃಖವನ್ನು ನಾಶಗೊಳಿಸುವ ಯೋಗವೆಂಬ ಹೆಸರುಳ್ಳ ಈ ಜ್ಞಾನವನ್ನು ತಿಳಿದುಕೊಳ್ಳುವನಾಗು ಇದನ್ನು ಪ್ರಾರಂಭಿಸುವುದಕ್ಕ ಮೊದಲು ನಿಶ್ಚಯ ಪೂರ್ವಕವಾಗಿ ನಿರ್ವೇದ ರಹಿತ ಚಿತ್ತನಾಗಿ ಇರಬೇಕು ಅನಂತರ ಈ ಯೋಗವನ್ನು ಅನುಷ್ಠಿಸಬೇಕು ಅಂದರೆ ಈ ಯೋಗವನ್ನು ಉತ್ಸಾಹದಿಂದ ಕೂಡಿದ ಸಂತೋಷದಿಂದ ಕೂಡಿದ ಮನಸ್ಸಿನಿಂದ ಅನುಷ್ಠಿಸಬೇಕು ಎಂದು ಶ್ರೀ ಕೃಷ್ಣ ಇಲ್ಲಿ ಉಪದೇಶ ಮಾಡಿದ್ದಾನೆ

(11) ಯೋಗಿಯು ಮನಸ್ಸನ್ನು ಧ್ಯೇಯ ವಸ್ತುವಿನಲ್ಲಿ ನಿಲ್ಲಿಸುವ ಕ್ರಮ (ಶ್ಲೋಕಗಳು 24, 25, 26)

**ಶ್ಲೋಕಗಳು 24 ಮತ್ತು 25.**

ಮೇಲೆ ಹೇಳಿದಂತೆ ಸಂತೋಷದಿಂದ ಕೂಡಿದ ಮನಸ್ಸಿನಿಂದ ಈ ಯೋಗವನ್ನು ಅನುಷ್ಠಿಸಬೇಕಾದರೆ ಮೊದಲು ಇಂದ್ರಿಯಗಳನ್ನು ನಿಗ್ರಹಿಸಿ, ಅವು ಬಾಹ್ಯಕಾಮ ವಿಷಯಗಳಲ್ಲಿ ಹೋಗದಂತೆ ತಡೆದು, ಅದನ್ನು ಅಂತರ್ಮುಖವನ್ನಾಗಿ ಮಾಡಿ ಆತ್ಮಚಿಂತನದಲ್ಲೇ ರಮಿಸುವಂತೆ ಮಾಡಬೇಕು ಇದು ಬಹಳ ಕಷ್ಟವಾದ ಕೆಲಸವಾದಾಗ್ಯೂ ಇದನ್ನು ಸ್ವಲ್ಪ ಸ್ವಲ್ಪವಾಗಿ ಅಭ್ಯಾಸ ಮಾಡುತ್ತಾ ಸಾಧಿಸಬೇಕು ಎಂದು ಈ ಎರಡು ಶ್ಲೋಕಗಳು ತಿಳಿಸುತ್ತವೆ—"ಸಂಕಲ್ಪ ಜನ್ಯವಾದ ಸಮಸ್ತ ಕಾಮಗಳನ್ನೆಲ್ಲಾ ನಿಶ್ಶೇಷವಾಗಿ ಮನಸ್ಸಿನಿಂದಲೇ ತ್ಯಾಗಮಾಡಿ, ಇಂದ್ರಿಯ ಸಮೂಹವನ್ನು ಸಮಸ್ತಬಾಹ್ಯ ವಿಷಯಗಳಿಂದ ಮನಸ್ಸಿನಿಂದಲೇ ನಿಗ್ರಹಿಸಿ"

—"ಮತ್ತ ಮೆತ್ತಗೆ (ಸ್ವಲ್ಪ ಸ್ವಲ್ಪವಾಗಿ) ವಿವೇಕದಿಂದ ಗ್ರಹಿಸಲ್ಪಟ್ಟ ಬುದ್ಧಿಯಿಂದ (ವಿವೇಕ ಜ್ಞಾನದಿಂದ) ಮನಸ್ಸನ್ನು

ತಡೆದು, ಮನಸ್ಸು ಆತ್ಮಚಿಂತನದಲ್ಲೇ ಸಕ್ತವಾಗಿರುವಂತೆ ಮಾಡಿ, ಮತ್ತಾವುದನ್ನೂ ಚಿಂತಿಸದೇ ಇರುವವನಾಗು "—

ಕಾಮಗಳು ಸ್ಪರ್ಶದಿಂದ ಹುಟ್ಟುವಂತಹವುಗಳು ಮತ್ತು ಸಂಕಲ್ಪದಿಂದ ಹುಟ್ಟುವಂತಹವುಗಳು ಎಂದು ಎರಡು ವಿಧಗಳಾಗಿವೆ ಶೀತೋಷ್ಣಾದಿಗಳು ಸ್ಪರ್ಶಜಗಳು ಮತ್ತು ಪುತ್ರ ಕ್ಷೇತ್ರಾದಿಗಳು ಸಂಕಲ್ಪಜಗಳು ಸಂಕಲ್ಪದಿಂದ ಉಂಟ ಗುವ ಪುತ್ರ ಕ್ಷೇತ್ರಾದಿಗಳ ಕಾಮಗಳು ಸ್ವರೂಪದಿಂದಲೇ ಬಿಡಲು ಶಕ್ಯವಾದವುಗಳು ಈ ಸಂಕಲ್ಪ ಜನ್ಯಗಳಾದ ಅಭಿಲಾಷೆಗಳನ್ನೆಲ್ಲಾ ಮನಸ್ಸಿನಿಂದಲೇ, ಅವುಗಳಿಗೂ ತನಗೂ ಯಾವ ಸಂಬಂಧವೂ ಇಲ್ಲವೆಂಬ ಅನುಸಂಧಾನದಿಂದ ಬಿಡಲು ಪ್ರವರ್ತ್ತಿಸಬೇಕು. ಸ್ಪರ್ಶಜನಿಕವಾದ ಶೀತೋಷ್ಣಾದಿ ಕಾಮಗಳ ಸಂಬಂಧವು ಅಪರ್ಜನೀಯವಾಗಿ ತ್ಯಜಿಸುವುದು ಸಾಧ್ಯವಿಲ್ಲದೇ ಇರುವುದರಿಂದ ಅವುಗಳ ಮೂಲಕ ಉಂಟಾಗುವ ಸುಖ ದುಃಖಗಳನ್ನು ತ್ಯಜಿಸಬೇಕು ಸಮಸ್ತ ವಿಷಯಗಳಿಂದ ಸಮಸ್ತ ಇಂದ್ರಿಯ ಸಮೂಹವನ್ನು ನಿರೋಧಿಸಿ, ಸ್ವಲ್ಪ ಸ್ವಲ್ಪವಾಗಿ ಅಭ್ಯಾಸದ ಮೂಲಕ ವಿವೇಕ ಜ್ಞಾನದಿಂದ ಕೂಡಿದ ಮನಸ್ಸಿನ ಸ್ಥೈರ್ಯದಿಂದ ಆತ್ಮಕ್ಕಿಂತ ಬೇರೆಯಾದ ಸಮಸ್ತ ವಸ್ತುಗಳಿಂದ ವಿರಾಮವನ್ನು ಹೊಂದಿ, ಮನಸ್ಸನ್ನು ಆತ್ಮಚಿಂತನದಲ್ಲೇ ನಿಲ್ಲುವ ಹಾಗೆ ಮಾಡಿ, ಬೇರೆ ಏನನ್ನೂ ಚಿಂತಿಸದೇ ಇರಬೇಕು

**ಶ್ಲೋಕ 26**—"ಅಸ್ಥಿರವೂ ಚಂಚಲವೂ ಆದ ಮನಸ್ಸು (ಆತ್ಮನಲ್ಲೇ ಸ್ಥಿರವಾಗಿ ನಿಲ್ಲದೆ) ಯಾವ ಯಾವ ವಿಷಯಗಳಲ್ಲಿ ಚೆನ್ನಾಗಿ ಚಲಿಸುತ್ತದೆಯೋ, ಆಯಾಯಾ ವಿಷಯಗಳಿಂದ ಮನಸ್ಸನ್ನು ತಡೆದು, ಅದು ಈ ಆತ್ಮನಲ್ಲೇ ವಶವಾಗ ವಂತೆ ಮಾಡಬೇಕು"—

ಮನಸ್ಸು ಚಂಚಲ ಸ್ವಭಾವವನ್ನು ಹೊಂದಿರುವುದರಿಂದ ಆತ್ಮಚಿಂತನದಲ್ಲಿ ಸ್ಥಿರವಾಗಿನಿಲ್ಲದ ವಿಷಯ ಚಿಂತನದಲ್ಲಿ ಚಲಿಸುತ್ತಾ ಇರುತ್ತದೆ. ಆದ್ದರಿಂದ ಯಾವ ಯಾವ ವಿಷಯಾಭಿಲಾಷೆಯ ಕಾರಣದಿಂದ ಮನಸ್ಸು ಬಾಹ್ಯ ವಿಷಯಗಳಲ್ಲಿ ಚಲಿಸುತ್ತದೆಯೋ ಆಯಾಯಾ ವಿಷಯಗಳಿಂದ ಪ್ರಯತ್ನಪೂರ್ವಕವಾಗಿ ಮನಸ್ಸನ್ನು ನಿಗ್ರಹಿಸಿ, ಆತ್ಮಚಿಂತನದಿಂದ ಅತಿಶಯವಾದ ಸುಖವು ಲಭಿಸುವುದೆಂಬ ಭಾವನ ಹೊಂದಿದವನಾಗಿ ಮನಸ್ಸನ್ನು ಆತ್ಮನಲ್ಲೇ ವಶವಾಗುವಂತೆ ಮಾಡಬೇಕು (ಯಾವ ಯಾವ ವಿಷಯಾನುಭವ ಸುಖಕ್ಕಾಗಿ ಮನಸ್ಸು ಆತ್ಮನಲ್ಲಿ ನಿಲ್ಲದೆ ಚಲಿಸುತ್ತದೆಯೋ ಅಂತಹ ವಿಷಯಗಳಿಂದ ಬಲಾತ್ಕಾರದಿಂದ ಮನಸ್ಸನ್ನು ಸೆಳೆದು, ಆತ್ಮ ಚಿಂತನದಲ್ಲೇ ಸಕ್ತವಾಗಿ ನಿಲ್ಲುವಂತೆ ವಶಪಡಿಸಿಕೊಳ್ಳಬೇಕು ಎಂದು ಅಭಿಪ್ರಾಯ )

(iii) ಆತ್ಮಚಿಂತನ ಯೋಗವನ್ನು ಅನುಷ್ಠಿಸುವ ಯೋಗಿಗೆ ಲಭಿಸುವ ನಿರತಿಶಯ ಆನಂದ (ಶ್ಲೋಕಗಳು 27,28)

ಹೀಗೆ ಮನಸ್ಸನ್ನು ವಿಷಯಚಿಂತನದಿಂದ ತಪ್ಪಿಸಿ ಆತ್ಮ ಚಿಂತನದಲ್ಲಿ ನಿಲ್ಲಿಸುವವನಿಗೆ ನಿರತಿಶಯ ಆನಂದವು ಲಭಿಸುತ್ತದೆ ಎಂದು ಈ ಎರಡು ಶ್ಲೋಕಗಳು ತಿಳಿಸುತ್ತವೆ

**ಶ್ಲೋಕ 27**—"ಈ ಪ್ರಶಾಂತ ಮನಸ್ಕನಾದ ರಜೋ ಗುಣ ರಹಿತನಾದ, ಪಾಪರಹಿತನಾದ, ಬ್ರಹ್ಮಭೂತನಾದ (ಅಂದರೆ ಪರಿಶುದ್ಧವಾದ ಆತ್ಮಸ್ವರೂಪವನ್ನು ಹೊಂದಿದ) ಯೋಗಿಯು ನಿಸ್ಸಂದೇಹವಾಗಿ ಉತ್ತಮ ಸುಖವನ್ನು ಹೊಂದುತ್ತಾನೆ" -

ಆತ್ಮನಲ್ಲಿ ನಿಶ್ಚಲನಾಗಿ ಆತ್ಮನಲ್ಲೇ ಇಟ್ಟ ಮನಸ್ಸುಳ್ಳ ಮತ್ತು ಆಕಾರಣದಿಂದಲೇ ಸಮಸ್ತ ಪಾಪಗಳಿಂದ ಭಸ್ಮನಾಗಿರುವ ಕಾರಣದಿಂದಲೇ ರಜೋಗುಣರಹಿತನಾದ, ಆ ಕಾರಣದಿಂದಲೇ ಬ್ರಹ್ಮಭೂತನಾದ ಅಂದರೆ ತನ್ನ ಸ್ವಾಭಾವಿಕ ಆಕಾರ (ಪರಿಶುದ್ಧವಾದ ಆತ್ಮಸ್ವರೂಪವನ್ನು ಹೊಂದಿದ)—ಈ ಯೋಗಿಯು ಆತ್ಮಾನುಭವ ರೂಪವಾದ ಉತ್ತಮ ಸುಖವನ್ನು ಹೊಂದುತ್ತಾನೆ ಅಂದರೆ ಉತ್ತಮ ಸುಖರೂಪನಾದ ಆತ್ಮಸ್ವರೂಪವನ್ನು ಹೊಂದುತ್ತಾನೆ ಎಂದು ಅರ್ಥ

**ಶ್ಲೋಕ 28**— ಈರೀತಿಯಾಗಿ ಯಾವಾಗಲೂ ಆತ್ಮ ಚಿಂತನವನ್ನು ಅಭ್ಯಾಸಮಾಡುತ್ತಾ ಪಾಪಗಳನ್ನೆಲ್ಲಾ ಕಳೆದು ಕೊಂಡವನಾಗಿ, ಪರಿಶುದ್ಧ ಆತ್ಮಸ್ವರೂಪದ ಸಂಬಂಧವುಳ್ಳವನಾಗಿ (ಆತ್ಮಾನುಭವವುಳ್ಳವನಾಗಿ), ಸುಖದಿಂದ (ಶ್ರಮವಿಲ್ಲದೆ) ಯಾವಾಗಲೂ ಅತ್ಯಂತ ಉತ್ತಮವಾದ ಆನಂದವನ್ನು ಅನುಭವಿಸುತ್ತಾನೆ"—ಈ ರೀತಿಯಾಗಿ ಕರ್ಮಯೋಗಿಯು ಮೇಲೆ ಹೇಳಿದ ರೀತಿಯಲ್ಲಿ ಆತ್ಮಚಿಂತನವನ್ನು ಅಭ್ಯಾಸಮಾಡುತ್ತಾ, ಆ ಕಾರಣದಿಂದ ಸಮಸ್ತ ಪ್ರಾಚೀನ ಪಾಪಗಳಿಂದ ಮುಕ್ತನಾಗಿ, ಬ್ರಹ್ಮಾನುಭವ ರೂಪವಾದ ಅಂದರೆ ಪರಿಶುದ್ಧ ಆತ್ಮಾನುಭವರೂಪವಾದ ಅತ್ಯಂತ ಪರಿಮಿತವಾದ ಸುಖವನ್ನು ಅನಾಯಾಸವಾಗಿ (ಸುಖವಾಗಿ) ಸದಾ ಅನುಭವಿಸುತ್ತಾನೆ

2) **ಆತ್ಮ ಚಿಂತನೆಮಾಡುವ ಧ್ಯಾನಯೋಗಿಗಳ ನಾಲ್ಕು ಅವಸ್ಥೆಗಳು**—(ಶ್ಲೋಕಗಳು 19 ರಿಂದ 32)

ಶ್ರೀಕೃಷ್ಣನು ಈ ನಾಲ್ಕು ಶ್ಲೋಕಗಳಿಂದ ಯೋಗಸಿದ್ಧಿ ವುಂಟಾದವನ ನಾಲ್ಕು ವಿಧವಾದ ಅವಸ್ಥೆಗಳನ್ನು ವರ್ಣಿಸಿದ್ದಾನೆ. ಅವು ಒಂದಕ್ಕಿಂತ ಒಂದು ಉತ್ಕೃಷ್ಟವಾದ ಅವಸ್ಥೆಯಾಗಿದೆ.

**ಶ್ಲೋಕ 29 :**— ಈ ಶ್ಲೋಕವು ಯೋಗಸಿದ್ಧಿಯ ಮೊದಲನೆಯ ಹಂತವನ್ನು ಹತ್ತಿದವನ ಅವಸ್ಥೆಯು ಎಂತಹ ದು ಎಂಬುದನ್ನು ತಿಳಿಸುತ್ತದೆ ಅಂದರೆ ಮೊದಲನೆಯ ಮೆಟ್ಟಿಲಿ ನಲ್ಲಿರುವ ಅಧಿಕಾರಿಯ ದಶೆಯನ್ನು ವಿವರಿಸುತ್ತದ "ಯೋಗದಿಂದ ಕೂಡಿದ ಮನಸ್ಸುಳ್ಳವನು ಸರ್ವತ್ರ ಸಮದೃಷ್ಟಿ ಪಡೆದವನಾಗಿ, ತನ್ನನ್ನು ಸರ್ವಜೀವಿಗಳಲ್ಲಿರುವಂತೆ (ಸರ್ವಜೀವಿಗಳಲ್ಲಿರುವ ಆತ್ಮರಿಗೆ ಸಮನಾಗಿ) ನೋಡುತ್ತಾನೆ ಮತ್ತು ಸಮಸ್ತ ಜೀವಿಗಳಲ್ಲಿರುವ ಆತ್ಮರುಗಳನ್ನು ತನ್ನಲ್ಲಿರುವಂತೆ (ತನ್ನಲ್ಲಿರುವ ಆತ್ಮನಿಗೆ ಸಮನಾಗಿ ನೋಡುತ್ತಾನೆ "

ತನ್ನ ಮತ್ತು ಇತರ ಜೀವಿಗಳ ಆತ್ಮಗಳೆಲ್ಲಾ ಪ್ರಕೃತಿ ಸಂಬಂಧ ರಹಿತವಾದ ಶುದ್ಧಸ್ವರೂಪದಲ್ಲಿ ಜ್ಞಾನ ಒಂದನ್ನೇ ಆಕಾರವಾಗಿ ಹೊಂದಿ ಸಮನಾಗಿವೆ ಮತ್ತು ವಿಷಮತೆಯೆಲ್ಲಾ ಕೇವಲ ಪ್ರಕೃತಿಗೆ ಸಂಬಂಧಪಟ್ಟಿದ್ದಾಗಿವೆ (ಅಂದರೆ ಬದ್ಧದಶೆ ಯಲ್ಲಿ ತಾನು ಮತ್ತು ಇತರ ಆತ್ಮರುಗಳು ಭಿನ್ನಭಿನ್ನ ಶರೀರಗಳಲ್ಲಿ ರುವುದರಿಂದ, ಶರೀರ ಭೇದದಿಂದ ವಿಷಮತೆ ಹೊಂದಿವೆ ) ಎಂಬ ಜ್ಞಾನವನ್ನು ಹೊಂದಿರುವ ಯೋಗದಿಂದ ಕೂಡಿದ ಮನಸ್ಸುಳ್ಳ ಪುರುಷನು ಸರ್ವತ್ರಸಮ ದರ್ಶನವನ್ನು ಪಡೆದಿದ್ದಾನೆ. ಅಂದರೆ ಪ್ರಕೃತಿ ಸಂಬಂಧ ರಹಿತವಾದ ಆತ್ಮರ ಗಳೆಲ್ಲ, ಸರ್ವತ್ರ ಜ್ಞಾನ ಒಂದನ್ನೇ ಆಕಾರವಾಗಿ ಹೊಂದಿ ಸಮವಾಗಿವೆ ಎಂಬ ಜ್ಞಾನವನ್ನು ಪಡೆದವನು ಸಮತ್ವವನ್ನು ಕಾಣುತ್ತಾನೆ ಈ ಅವಸ್ಥೆಯನ್ನು ಪಡೆದವನು ತನ್ನ ಆತ್ಮನನ್ನು ಇತರರಲ್ಲಿರುವಂತೆಯೂ ಮತ್ತು ಇತರರಲ್ಲಿರುವ ಆತ್ಮವು ತನ್ನಲ್ಲಿರುವಂತೆಯೂ ಕಾಣುತ್ತಾನೆ. ಅಂದರೆ ತನ್ನ ಆತ್ಮವನ್ನು ಸಮಸ್ತಜೀವಿಗಳಲ್ಲಿರುವ ಆತ್ಮರಿಗೆ ಸಮ ವಾದ ಆಕಾರವುಳ್ಳದ್ದಾಗಿಯೂ ಮತ್ತು ಸಮಸ್ತ ಜೀವಿಗಳಲ್ಲಿರುವ ಆತ್ಮಗಳನ್ನು ತನ್ನ ಆತ್ಮಕ್ಕೆ ಸಮವಾದ ಆಕಾರವುಳ್ಳದ್ದಾಗಿಯೂ ನೋಡುತ್ತಾನೆ ಎಂದು ಅಭಿಪ್ರಾಯ "ಸರ್ವತ್ರ ಸಮದರ್ಶನ" – ಎಂಬ ವಾಕ್ಯದಿಂದ ಒಂದು ಆತ್ಮವನ್ನು ಸಾಕ್ಷಾತ್ಕರಿಸಿದ ಮೇಲೆ ಸಮಸ್ತ ಆತ್ಮಗಳೂ ಅದಕ್ಕೆ ಸಮವಾದ ಆಕಾರ ಹೊಂದಿರುವುದ ರಿಂದ ಸಮಸ್ತ ಆತ್ಮರುಗಳನ್ನೂ ಸಾಕ್ಷಾತ್ಕರಿಸಿದಂತೆ ಆಗುತ್ತದೆ ಎಂಬ ಅರ್ಥವೂ ಸೂಚಿತವಾಗಿದೆ

**ಶ್ಲೋಕ 30**–ಈ ಶ್ಲೋಕವು ಯೋಗಸಿದ್ಧಿಯ ಎರಡನೆಯ ಮೆಟ್ಟಿಲನ್ನು ಹತ್ತಿದವನ ಸ್ಥಿತಿಯನ್ನು ತಿಳಿಸುತ್ತದ ಅಂದರೆ ಹಿಂದಿನ ಅವಸ್ಥೆಗಿಂತ ಮೇಲಿನ ಅವಸ್ಥೆ ಹೊಂದಿರುವ ಅಧಿಕಾರಿಯ ದಶೆ ಯನ್ನು ವರ್ಣಿಸುತ್ತದೆ–"ಯಾವ (ಆತ್ಮಾವಲೋಕವನ್ನು ಹೊಂದಿ ರುವ) ಕರ್ಮಯೋಗಿಯು, ಸಮಸ್ತ ಚೇತನರಲ್ಲೂ ನನ್ನನ್ನು ನೋಡು ವನೋ (ಪರಮಾತ್ಮನಾದ ನನಗೆ ಸಮಾನವಾದ ಆಕಾರವನ್ನು ನೋಡುವನೋ) ಮತ್ತು ನನ್ನಲ್ಲಿ ಸಮಸ್ತ ಚೇತನರನ್ನೂ ನೋಡು ವನೋ (ಸಮಸ್ತ ಚೇತನರಿಗೆ ಸಮವಾದ ಆಕಾರವನ್ನು ನೋಡು ವನೋ) ಅವನಿಗೆ ನಾನು ಅದೃಶ್ಯನಾಗಿ ಇರುವುದಿಲ್ಲ (ಕಾಣಿಸದ ಇರುವುದಿಲ್ಲ) ಮತ್ತು ನನಗೆ ಅವನು ಅದೃಶ್ಯನಾಗಿ ಇರುವುದಿಲ್ಲ (ಕಾಣಿಸದ ಇರುವುದಿಲ್ಲ)" [ಅಂದರೆ ಅವನಿಗೆ ನಾನು ಕಾಣಿಸು ತ್ತಿರುವುದರಿಂದ ಅವನು ನನ್ನ ಭಕ್ತನಾಗುತ್ತಾನೆ ಮತ್ತು ನನಗೆ

ಅವನು ಕಾಣಿಸುತ್ತಿರುವುದರಿಂದ ಅವನ ಯೋಗಕ್ಷೇಮವನ್ನು ನಾನು ನೋಡಿಕೊಳ್ಳುತ್ತೇನೆ ಎಂದು ಅರ್ಥ ]

ಇದು ಮೇಲಿನ ಅವಸ್ಥೆಗಿಂತ ಉತ್ತಮವಾದ ಅವಸ್ಥೆಯು "ನಿರಂಜನಃ ಪರಮಂಸಾಮ್ಯಮುಪಾಗತಃ"-ಅಂದರೆ "ಪರಿಶುದ್ಧನಾಗಿ ಪರಮಪುರುಷನಿಗೆ ಸಮಾನತೆಯನ್ನು ಪಡೆಯುತ್ತಾನೆ" ಎಂದು ಹೇಳಿರುವಂತೆ ಪರಿಶುದ್ಧವಾದ ಆತ್ಮರುಗಳು ಪರಮಾತ್ಮನಿಗೆ ಸಮವಾದ ಅವಸ್ಥೆಯನ್ನು ಪಡೆಯುತ್ತವೆ ಎಂದು ತಿಳಿದ ಯೋಗಿಯು, ಪುಣ್ಯಪಾಪರಹಿತವಾಗಿ ನಿಜಸ್ವರೂಪದಲ್ಲಿರುವ ಸಮಸ್ತ ಆತ್ಮವಸ್ತುಗಳಲ್ಲಿ ಪರಮಾತ್ಮನಾದ ನನ್ನ ಸಮಾನತೆಯನ್ನು ನೋಡುತ್ತಲೂ, ಮತ್ತು ಪರಮಾತ್ಮನಾದ ನನ್ನಲ್ಲಿ ಪರಿಶುದ್ಧವಾದ ಸಮಸ್ತ ಆತ್ಮವಸ್ತುಗಳನ್ನು ನೋಡುತ್ತಲೂ ಇರುತ್ತಾನೆ ಪರಸ್ಪರ ಸಮಾನತೆ ಇರುವ ಎರಡು ವಸ್ತುಗಳಲ್ಲಿ ಒಂದು ವಸ್ತುವನ್ನು ನೋಡಿದಾಗ, ಇನ್ನೊಂದೂ ಹೀಗೆಯೇ ಇದೆ ಎಂದು ತಿಳಿದಿರುವುದರಿಂದ ಅದನ್ನೂ ನೋಡಿದಂತೆ ಆಗುತ್ತದೆ ಆದ್ದರಿಂದ ತನ್ನ ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸಿರುವ ಯೋಗಿಗೆ, ಅದರೊಂದಿಗೆ ಸಮಾನತೆ ಹೊಂದಿರುವ ನಾನು (ಪರಮಾತ್ಮನು) ಅದೃಶ್ಯನಲ್ಲ, ಅವನ ದೃಷ್ಟಿಗೆ ಅಗೋಚರನಾಗಿಲ್ಲ ನನ್ನೊಂದಿಗೆ ಸಮಾನತೆ ಇರುವುದರಿಂದ ತನ್ನ ಮತ್ತು ಇತರರ ಆತ್ಮರುಗಳನ್ನು ನನಗೆ ಸಮವೆಂದು ಕಾಣುತ್ತಿರುವ ಅವನು ನನ್ನ ದೃಷ್ಟಿಗೆ ಅಗೋಚರನಾಗಿಲ್ಲ [ಅಭಿಪ್ರಾಯವೇನೆಂದರೆ ಅಂತಹ ಯೋಗಿಯು ಪರಮಾತ್ಮನನ್ನು ಎಲ್ಲೆಡೆಯಲ್ಲೂ ಕಾಣುತ್ತಿರುವುದರಿಂದ ಪರಮಾತ್ಮನಲ್ಲಿ ಭಕ್ತಿ ಹೊಂದುತ್ತಾನೆ ಮತ್ತು ಅವನನ್ನು ಪರಮಾತ್ಮನು ಸರ್ವದಾ ಕಟಾಕ್ಷಿಸುತ್ತಾ ರಕ್ಷಿಸುತ್ತಾನೆ ಎಂದು ಅರ್ಥ]

**ಶ್ಲೋಕ 31**-ಇದು ಯೋಗ ಸಿದ್ಧಿಯ ಮೂರನೆಯ ಹಂತವನ್ನು ಹತ್ತಿದವನ ಸ್ಥಿತಿಯನ್ನು ವರ್ಣಿಸುತ್ತದೆ ಹಿಂದಿನ ಅವಸ್ಥೆಗಿಂತ ಇದು ಮೇಲಿನ ಅವಸ್ಥೆ— "ಯಾವ ಯೋಗಿಯು ಏಕತ್ವಭಾವದಲ್ಲಿ ನಿಂತವನಾಗಿ (ಅಸಂಕುಚಿತವಾದ ಜ್ಞಾನೈಕಾಕರತೆಯಿಂದಲೂ ಮತ್ತು ಶರೀರಾತ್ಮಭಾವದಿಂದಲೂ ಪರಮಾತ್ಮನೊಂದಿಗೆ ಏಕತ್ವಭಾವನೆ ಹೊಂದಿದವನಾಗಿ) ಸಮಸ್ತ ಭೂತಪ್ರಾಣಿಗಳಲ್ಲಿ ಇರುವ ನನ್ನನ್ನು ಭಜಿಸುತ್ತಾನೆಯೋ (ಧ್ಯಾನಿಸುತ್ತಾನೆಯೋ) ಅವನು ಯಾವ ಪ್ರಕಾರದಲ್ಲಿ ಇದ್ದರೂ ಕೂಡ (ಧ್ಯಾನ ಕಾಲದಲ್ಲೂ ಮತ್ತು ಧ್ಯಾನವಿಲ್ಲದ ಕಾಲದಲ್ಲೂ) ನನ್ನಲ್ಲಿಯೇ ಇರುತ್ತಾನೆ (ನನ್ನನ್ನು ತನ್ನಲ್ಲಿ ಮತ್ತು ಇತರರಲ್ಲಿ ನೇರಿ ಇರುವವನನಾಗಿ ನೋಡುತ್ತಾನೆ)" ಯಾವ ಯೋಗದಶೆಯಲ್ಲಿರುವ ಯೋಗಿಯು ಪ್ರಕೃತಿಸಂಬಂಧದಿಂದ ಉಂಟಾಗಿರುವ ಪ್ರಾಕೃತ ಭೇಧ ಭಾವಗಳನ್ನು ಪರಿತ್ಯಜಿಸಿ ಅಸಂಕುಚಿತವಾದ ಜ್ಞಾನೈಕ ಆಕಾರತೆಯಿಂದ ಆತ್ಮರುಗಳಲ್ಲಿ ಏಕತ್ವಭಾವನೆ ಹೊಂದಿದವನಾಗಿ ಮತ್ತು ಸಮಸ್ತ ಆತ್ಮಗಳೂ ಶರೀರಭಾವದಿಂದ ಪರಮಾತ್ಮನೊಂದಿಗೆ ಏಕೀಭವಿಸಿರುವುದರಿಂದ ಸಮಸ್ತ ಭೂತಗಳಲ್ಲಿ ಆತ್ಮನಾಗಿ ನಿಂತಿರುವ ನನ್ನನ್ನು (ಪರಮೇಶ್ವರನನ್ನು) ದೃಢತೆಯೊಂದಿಗೆ ಭಜಿಸುತ್ತಾನೆಯೋ ಆ ಯೋಗಿಯು (ಅಂತಹ ವಿಪಾಕದಶೆಯನ್ನು ಹೊಂದಿದ ಯೋಗಿಯು ಉತ್ಥಾನ ಕಾಲದಲ್ಲಿಯೂ ಕೂಡ (ಅಂದರೆ ಯೋಗದಿಂದ ಎದ್ದ ಕಾಲದಲ್ಲೂ ಕೂಡ), ಯಾವ ರೀತಿಯಲ್ಲಿದ್ದರೂ, ಯಾವ ಯಾವ ಕೆಲಸಗಳಲ್ಲಿ ಪ್ರವೃತ್ತನಾಗಿದ್ದರೂ ಕೂಡ, ಸಮಸ್ತ ಭೂತಗಳಲ್ಲಿ ನನ್ನೊಂದಿಗೆ (ಪರಮಾತ್ಮನೊಂದಿಗೆ) ಸಮಾನ ಭಾವವನ್ನೇ ನೋಡುತ್ತಾನೆ ಅಂದರೆ ಆಯಾ ಆತ್ಮರುಗಳಲ್ಲಿ ಅಂತರಾತ್ಮನಾಗಿ ನಿಂತಿರುವ ನನ್ನನ್ನೇ (ಪರಮಾತ್ಮನನ್ನೇ) ಕಾಣುತ್ತಾನೆ ಅಂದರೇನು ನನ್ನನ್ನು ತನ್ನಲ್ಲಿ ಮತ್ತು ಇತರರಲ್ಲಿ ನೇರಿ ಇರುವವನನಾಗಿ ಕಾಣುವವನು ಮತ್ತು ನನ್ನ ಸಮತ್ವದೊಂದಿಗೆ ನನ್ನ ಏಕತ್ವವನ್ನೂ ಕೂಡ ನೋಡುವವನು. ಜ್ಞಾನೈಕಾಕಾರತೆಯಿಂದ ಎಲ್ಲಾ ಆತ್ಮಗಳೂ ಸಮರಾಗಿರುವುದು ಮಾತ್ರವಲ್ಲದೆ, ಪರಮಾತ್ಮನೊಂದಿಗೂ ಸಮರಾಗಿ, ಆತನಿಗೆ ಶರೀರವಾಗಿ ಆತನನ್ನು ಆತ್ಮನಾಗಿ ಹೊಂದಿ ಅವನೊಂದಿಗೆ ಏಕೀಭವಿಸಿ ಇರುವವರಾಗಿ ನೋಡುವವನು ಎಂದು ಅರ್ಥ. ಯೋಗಿಯಾದವನು ಸಮಸ್ತ ಆತ್ಮರಲ್ಲೂ ತನ್ನಲ್ಲಿಯೂ ಸಹ ಶರೀರಾತ್ಮಭಾವದಿಂದ ಪರಮಾತ್ಮನೊಂದಿಗೆ ಏಕತ್ವವನ್ನು ಕಾಣುವನು ಆದ್ದರಿಂದ ಅವನು ತನ್ನಲ್ಲೂ, ಎಲ್ಲಾ ಜೀವಿಗಳಲ್ಲೂ ಸರ್ವದಾ ಪರಮಾತ್ಮನನ್ನು ನೋಡುತ್ತಿರುವನು ಮತ್ತು ಅವನ ಮನಸ್ಸು ಸದಾ ಪರಮಾತ್ಮನ ಚಿಂತನದಲ್ಲೇ ಇರುವುದು ಎಂದು ಅಭಿಪ್ರಾಯ.

**ಶ್ಲೋಕ 32**—ಇದು ಯೋಗ ಸಿದ್ಧಿಯ ಮೇಲಿನ ಹಂತವನ್ನು ಹತ್ತಿರುವವನ ಸ್ಥಿತಿಯನ್ನು ವರ್ಣಿಸುತ್ತದೆ ಇದೇ ಯೋಗದ ನಾಲ್ಕನೆಯದಾದ ಪರಿಪೂರ್ಣದಶೆಯು "ಅರ್ಜುನ! ಯಾವ ಯೋಗಿಯು ಎಲ್ಲರಲ್ಲೂ (ತನ್ನಲ್ಲೂ, ಇತರರಲ್ಲೂ ಸಹ) ಆತ್ಮರ ಉಪಮೆಯಿಂದ (ಅಂದರೆ ಪ್ರಕೃತಿ ಸಂಬಂಧವಿಲ್ಲದ ಕಾಲದಲ್ಲಿ ಅಸಂಕುಚಿತವಾದ ಜ್ಞಾನೈಕಾಕಾರತೆಯಿಂದ ಆತ್ಮಗಳೆಲ್ಲಾ ಸಮರಾಗಿರುವುದರಿಂದ) ಎಲ್ಲಾ ಕಡೆಯೂ (ತನ್ನ ಮತ್ತು ಇತರರ) ಸುಖ ಅಥವ ದುಃಖಗಳನ್ನು ಸಮವಾಗಿ ನೋಡುತ್ತಾನೆಯೋ ಅವನು ಎಲ್ಲರಿಗಿಂತ ಶ್ರೇಷ್ಠನೆಂದು (ಯೋಗದ ಅತ್ಯಂತ ಮೇಲಾದ ದಶೆಯನ್ನು ಹೊಂದಿದ ಸರ್ವಶ್ರೇಷ್ಠನೆಂದು ನನ್ನ ಅಭಿಪ್ರಾಯ"—

ಅತ್ಯಂತ ಮೇಲಾದ ಯೋಗದಶೆಯನ್ನು ಪಡೆದ ಯೋಗಿಯು, ತನ್ನ ಮತ್ತು ಇತರರ ಆತ್ಮರುಗಳು ಪ್ರಕೃತಿ

ವಿಯುಕ್ತದಶೆಯಲ್ಲಿ ಅಸಂಕುಚಿತವಾದ ಜ್ಞಾನ ಒಂದನ್ನೇ ಆಕಾರವಾಗಿ ಹೊಂದಿರುವುದರಿಂದ ಸಮಾನತೆ ಹೊಂದಿರುವ ದೃಷ್ಟಾಂತವನ್ನು ಕಾಣುತ್ತಿರುವುದರಿಂದ ತನ್ನಲ್ಲೂ ಮತ್ತು ಇತರ ಆತ್ಮರಲ್ಲೂ ಎಲ್ಲರಲ್ಲೂ ಉಂಟಾಗುತ್ತಿರುವ ಪುತ್ರ ಜನ್ಮರೂಪವಾದ ಸುಖವೇನು ಪುತ್ರ ಮರಣ ರೂಪವಾದ ದುಃಖವೇನು ಇವುಗಳನ್ನು ಸಮವಾಗಿ ಕಾಣುತ್ತಾನೆ ತನಗೂ ಅವರಿಗೂ ಸಂಬಂಧವಿಲ್ಲವೆಂಬ (ಅಂದರೆ ತನಗೂ, ತನ್ನ ಪುತ್ರಾದಿಗಳಿಗೂ ಪ್ರಕೃತಿ ಸಂಬಂಧದ ಮೂಲಕ ಉಂಟಾಗಿರುವ ಸಂಬಂಧವೇ ವಿನಃ ಆತ್ಮನಾದ ತನಗೂ ಅವರಿಗೂ ನಿಜವಾದ ಯಾವ ಸಂಬಂಧವೂ ಇಲ್ಲವೆಂಬ) ಅನುಭವವನ್ನು ಅವನು ಪಡೆದಿರುವುದರಿಂದ ತನ್ನ ಮತ್ತು ಇತರರ ಸುಖ ದುಃಖಗಳನ್ನು ಸಮವಾಗಿ ಕಾಣುತ್ತಾನೆ ಅಂದರೆ ತನ್ನ ಮಗನ ಜನನ ಮರಣಾದಿಗಳನ್ನು ಇತರರ ಮಕ್ಕಳ ಜನನ ಮರಣಾದಿಗಳಿಗೆ ಸಮನಾಗಿ ಕಾಣುತ್ತಾನೆ (ಲೋಕದ ಜೀವಿಗಳಿಗೆ ಸಾಮಾನ್ಯವಾಗಿ ತಮ್ಮ ತಮ್ಮ ಸುಖ ದುಃಖಗಳು ಬಹಳ ಅಗಾಧವಾಗಿ ಕಾಣುತ್ತವೆ ಅದೇ ವಿಧವಾದ ಸುಖದುಃಖಗಳು ಇತರರಿಗೆ ಪ್ರಾಪ್ತವಾದಾಗ ಅದು ಹೆಚ್ಚಾಗಿ ಕಾಣುವುದಿಲ್ಲ ಆದರೆ ಯೋಗಿಯಾದವನಿಗೆ ಎರಡರಲ್ಲೂ ಒಂದೇ ಸಮಭಾವನೆ, ಸಮವಾದ ಅನುಭವವಿರುತ್ತದೆ) ಈ ರೀತಿಯಾಗಿ ಯಾವ ಕರ್ಮಯೋಗಿಯು ಭಾವಿಸುವನೋ ಅಂತಹ ಯೋಗಿಯು ಯೋಗದ ಪರಮೋತ್ಕೃಷ್ಟ ದಶೆಯನ್ನು ಹೊಂದಿದವನಾಗುತ್ತಾನೆ ಎಂದು ನನ್ನ ಅಭಿಪ್ರಾಯ ಎಂದಿದ್ದಾನೆ ಶ್ರೀ ಕೃಷ್ಣ

ಈ ನಾಲ್ಕು ಶ್ಲೋಕಗಳಿಂದ ಯೋಗಿಯು ಹತ್ತಬೇಕಾದ ನಾಲ್ಕು ಹಂತಗಳ ವಿವರಣೆಯಿಂದ ಮತ್ತು ನಾಲ್ಕು ವಿಧವಾದ ಸಾಮ್ಯಾನುಸಂಧಾನವು ಹೇಳಲ್ಪಟ್ಟಿದೆ (1) 29 ನೆಯ ಶ್ಲೋಕದಲ್ಲಿ ಜ್ಞಾನಾಕಾರರಿಂದ ಪ್ರಕೃತಿ ವಿಯುಕ್ತ ಆತ್ಮರುಗಳೆಲ್ಲಾ ಸಮನಾಗಿರುವುದರಿಂದ ಯೋಗಿಯು ಮೊದಲು ತನ್ನ ಮತ್ತು ಇತರರ ಆತ್ಮರುಗಳ ಸಮಾನತೆಯನ್ನು (ಪ್ರಕೃತಿವಿಯುಕ್ತ ದಶೆಯಲ್ಲಿ ಜ್ಞಾನೈಕಾಕಾರತೆಯಿಂದ ಎಲ್ಲ ಆತ್ಮರೂ ಸಮಾನರು ಎಂಬುದನ್ನು ಅನುಸಂಧಾನ ಮಾಡುತ್ತಾ ಅದರ ಅನುಭವವನ್ನು ಪಡೆಯಬೇಕು ಎಂದು ಹೇಳಿದೆ ಅಂದರೆ ಜೀವಾತ್ಮರಲ್ಲಿ ಪರಸ್ಪರ ಸಾಮ್ಯಾನುಸಂಧಾನವು ಹೇಳಲ್ಪಟ್ಟಿದೆ (2) 30 ನೆಯ ಶ್ಲೋಕದಲ್ಲಿ ಪ್ರಕೃತಿವಿಯುಕ್ತದಶೆಯಲ್ಲಿ ಪುಣ್ಯ ಪಾಪ ರಹಿತರಾದ ಆತ್ಮರುಗಳಿಗೂ ಪರಮಾತ್ಮನಿಗೂ ಸಾಮ್ಯತೆ ಇರುವುದರಿಂದ ತನ್ನ ಮತ್ತು ಇತರರ ಆತ್ಮರುಗಳಿಗೂ ಪರಮಾತ್ಮನಿಗೂ ಸಮಾನತೆಯನ್ನು ಅನುಸಂಧಾನ ಮಾಡುತ್ತಾ ಅದರ ಅನುಭವವನ್ನು ಪಡೆಯಬೇಕೆಂದು ಹೇಳಿದೆ. ಅಂದರೆ ಪ್ರಕೃತಿ ವಿಯುಕ್ತದಶೆಯಲ್ಲಿ ಎಲ್ಲಾ ಆತ್ಮರಿಗೂ ಪರಮಾತ್ಮನೊಂದಿಗೆ ಸಾಮ್ಯವು ಹೇಳಲ್ಪಟ್ಟಿದೆ. (3) ಅನಂತರ 31 ನೆಯ ಶ್ಲೋಕದಲ್ಲಿ ಪರಮಾತ್ಮನು ಎಲ್ಲಾ ಆತ್ಮರುಗಳಲ್ಲಿ ಅಂತರ್ಯಾಮಿಯಾಗಿ ಇರುವುದರಿಂದ ತನ್ನಲ್ಲೂ ಮತ್ತು ಇತರ ಆತ್ಮರುಗಳಲ್ಲೂ ಪರಮಾತ್ಮನು ಅಂತರಾತ್ಮನಾಗಿ ಇರುವನು ಎಂಬುದನ್ನು ಅನುಸಂಧಾನಮಾಡುತ್ತಾ ಶರೀರಾತ್ಮ ಭಾವದಿಂದ ಪರಮಾತ್ಮನೊಂಗೆ ಐಕ್ಯತೆಯ ಅನುಭವ ಪಡೆಯಬೇಕು ಎಂದು ಹೇಳಿದೆ ಅಂದರೆ ಎಲ್ಲಾ ಆತ್ಮರೂ ಪರಮಾತ್ಮನಿಗೆ ಶರೀರವಾಗಿ ಅವನೊಂದಿಗೆ ಏಕೀಭವಿಸಿರುವ ಸಾಮ್ಯಾನುಸಂಧಾನವು ಹೇಳಲ್ಪಟ್ಟಿದೆ (4) ಅನಂತರ ಕೊನೆಯದಾಗಿ 32ನೆಯ ಶ್ಲೋಕದಲ್ಲಿ ಯೋಗಿಯು ಹೊಂದಬೇಕಾದ ಯೋಗದ ಪರಾಕಾಷ್ಠ ದಶೆಯು ಹೇಳಲ್ಪಟ್ಟಿದೆ, ಪ್ರಕೃತಿವಿಯುಕ್ತದಶೆಯಲ್ಲಿ ಜೀವಾತ್ಮರಿಗೂ ಪ್ರಕೃತಿಗೆ (ಶರೀರಕ್ಕೆ) ಸಂಬಂಧಪಟ್ಟ ಚೇತನಾಚೇತನ ವಸ್ತುಗಳಿಗೂ ಯಾವ ಸಂಬಂಧವೂ ಇಲ್ಲದ ಇರುವುದರಿಂದ ಅದರ ಅನುಸಂಧಾನ ಮಾಡುತ್ತಾ ಅದರ ಅನುಭವಪಡೆದಯೋಗಿಗೆ (ಬಂಧುಗಳ ಹುಟ್ಟು ಸಾವು ಮುಂತಾದುವುಗಳಿಂದ ಉಂಟಾಗುವ) ಸುಖ ದುಃಖಗಳ ಗಂಧವೇ ಇಲ್ಲದ ನಿರ್ವಿಕಾರದಶೆಯು ಪ್ರಾಪ್ತವಾಗುತ್ತದೆ. ಈ ದಶೆಯನ್ನು ಪಡೆದ ಯೋಗಿಯು ತನ್ನ ಮತ್ತು ಇತರರ ಸುಖ ದುಃಖಗಳನ್ನು ಒಂದೇ ವಿಧವಾಗಿ ಕಾಣುತ್ತಾನೆ ಸಾಮಾನ್ಯ ಮಾನವ ರೀತಿ ತನಗೆ ಪ್ರಾಪ್ತವಾಗುವ ಸುಖ ದುಃಖಗಳನ್ನು ಅತಿಯಾಗಿ ಪರಿಗಣಿಸುವುದಿಲ್ಲ ಇತರರಿಗೆ ಪ್ರಾಪ್ತವಾಗುವ ಸುಖ ದುಃಖಗಳಲ್ಲಿ ಯಾವರೀತಿ ವಿಕಾರರಹಿತನಾಗಿ ಇರುತ್ತಾನೆಯೋ ಅದೇರೀತಿ ತನ್ನದರಲ್ಲೂ ಇರುತ್ತಾನೆ ಹೀಗೆ ಅನ್ಯರ ಪುತ್ರ ಜನನ, ಪುತ್ರಮರಣಾದಿ ಸುಖದುಃಖಗಳಿಗೆ ಸಮನಾಗಿ ತನ್ನ ಪುತ್ರಾದಿಗಳ ಜನನಮರಣಾದಿಗಳನ್ನು ನೋಡುವವನು ಯೋಗದ ಕೊನೆಯ ನೆಲೆಯನ್ನು ಮುಟ್ಟುತ್ತಾನೆ ಇಲ್ಲಿ ಪ್ರಕೃತಿವಿಯುಕ್ತದಶೆಯಲ್ಲಿ ಪ್ರಾಕೃತಿಕ ಸುಖದುಃಖಗಳು ಯಾವ ಆತ್ಮರಿಗೂ ಸಂಬಂಧಿಸಿದವುಗಳಲ್ಲವಾದ್ದರಿಂದ ಆತ್ಮರುಗಳಲ್ಲಿ ಸುಖದುಃಖ ಸಂಬಂಧರಹಿತವಾದ ಸಾಮ್ಯಾನುಸಂಧಾನವು ಹೇಳಲ್ಪಟ್ಟಿದೆ

### 3) ಆತ್ಮಚಿಂತನರೂಪ ಧ್ಯಾನಯೋಗಕ್ಕಾಗಿ ಮನಸ್ಸನ್ನು ಜಯಿಸಲು ಅವಶ್ಯಕವಾದ ಅಭ್ಯಾಸ, ವೈರಾಗ್ಯಾದಿ ಸಾಧನೆಗಳು— (ಶ್ಲೋಕಗಳು 33ರಿಂದ 36)

(1) "ಮನಸ್ಸನ್ನು ಜಯಿಸುವುದು ಹೇಗೆ ?" ಎಂಬ ಅರ್ಜುನನ ಪ್ರಶ್ನೆ— (ಶ್ಲೋಕಗಳು 33 ಮತ್ತು 34)

**ಶ್ಲೋಕಗಳು 33 ಮತ್ತು 34**—ಮೇಲಿನ ನಾಲ್ಕು ಶ್ಲೋಕಗಳಿಂದ ಶ್ರೀಕೃಷ್ಣನು ತಿಳಿಸಿದ ಯೋಗಸಿದ್ಧಿಯ ನಾಲ್ಕು ಹಂತಗಳ ವಿವರಣೆಯನ್ನೂ, ಅದರಲ್ಲಿ ಸುಖ ದುಃಖ ನಿರ್ವಿಕಾರತ್ವ ರೂಪವಾದ ಯೋಗದ ಪರಾಕಾಷ್ಠದಶೆಯ ವಿವರಣೆಯನ್ನೂ ಕೇಳಿ, ಅರ್ಜುನನಿಗೆ ಆಶ್ಚರ್ಯ ಹುಟ್ಟಿತು ಬಾಹ್ಯ ವಿಷಯಾನುಭವಗಳು ಮನುಷ್ಯನ ಮನಸ್ಸಿನ ಮೇಲೆ ಅತಿ ಪ್ರಬಲವಾದ ಪರಿಣಾಮ ಉಂಟುಮಾಡುತ್ತಿವೆಯಲ್ಲಾ, ಹೀಗಿರುವಾಗ ಸುಖ ದುಃಖ ನಿರ್ವಿಕಾರತ್ವರೂಪ ಯೋಗ ಪರಾಕಾಷ್ಠತೆಯು ಲಭಿಸುವುದು ಹೇಗೆ; ಅದಕ್ಕೆ ಮನಸ್ಸೇ ಪ್ರಬಲವಿರೋಧಿಯಾಗಿದೆಯಲ್ಲಾ ಎಂಬ ಯೋಚನೆ ಉಂಟಾಯಿತು ಇಂತಹ ಮನಸ್ಸನ್ನು ಜಯಿಸಲು ಸರಿಯಾದ ಯಾವುದಾದರೂ ಉಪಾಯವುಂಟೇ ಎಂದು ಶ್ರೀ ಕೃಷ್ಣನನ್ನು ಈ ಎರಡು ಶ್ಲೋಕಗಳಲ್ಲಿ ಪ್ರಶ್ನಿಸುತ್ತಾನೆ

ಅರ್ಜುನನು ಹೇಳುತ್ತಾನೆ—"ಸರ್ವತ್ರ ಸಮಸ್ತ ಜೀವಿಗಳಲ್ಲಿ ಸಮದರ್ಶನತ್ವವನ್ನು ಉಂಟುಮಾಡುವ ಸಮತ್ವದಿಂದ ಕೂಡಿದ ಯಾವ ಈ ಯೋಗವು ನಿನ್ನಿಂದ ಹೇಳಲ್ಪಟ್ಟಿತೋ, ಇದರ ಸ್ಥಿರವಾದ ಸ್ಥಿತಿಯನ್ನು ಮನಸ್ಸಿನ ಚಂಚಲತೆಯಿಂದ ನಾನು ಕಾಣುತ್ತಿಲ್ಲ"—"ಮನಸ್ಸು ಚಂಚಲವಾದುದು ಬಲಾತ್ಕಾರವಾಗಿ ದೃಢವಾಗಿ (ವಿಷಯಗಳ ಕಡೆಗೆ ಎಳೆದು) ಮಥನ ಮಾಡುವಂತಹುದಾಗಿದೆ. ಅದರ ನಿಗ್ರಹವು ಗಾಳಿಯನ್ನು ತಡೆಯುವಂತೆ ಬಹಳ ಕಷ್ಟಕರವಾದುದೆಂದು ನಾನು ತಿಳಿಯುತ್ತೇನೆ" (ವ್ಯಾಕುಲವನ್ನುಂಟುಮಾಡುವಂತಹುದಾಗಿರುವ ಮನಸ್ಸನ್ನು ತಡೆದು ಒಂದು ಕಡೆ ನಿಲ್ಲಿಸುವುದು ಅಸಾಧ್ಯವಾದ ಕೆಲಸವೆಂದು ನನ್ನ ಅಭಿಪ್ರಾಯ)

ಇಂದಿನವರೆಗೆ ದೇವತೆಗಳು, ಮನುಷ್ಯರು ಎಂಬ ಭೇದವನ್ನೂ ಜೀವರು ಪರಮಾತ್ಮರು ಎಂಬ ಭೇದವನ್ನೂ ಸಮಸ್ತ ಮಾನವರೂ ಬಹುಕಾಲದಿಂದ ಅನುಭವಿಸುತ್ತಾ ಬಂದಿದ್ದಾರೆ ಅಂತಹವರಿಗೆ ಸಮಸ್ತ ಆತ್ಮರುಗಳೂ ಜ್ಞಾನೈಕಾಕಾರತೆಯಿಂದ ಪರಸ್ಪರ ಸಮಾನರಾಗಿದ್ದಾರೆ ಮತ್ತು ಕರ್ಮವಶರಾಗದೇ ಇರುವುದರಿಂದ ಈಶ್ವರನಿಗೂ ಸಮಾನರಾಗಿದ್ದಾರೆ; ಆದ್ದರಿಂದ ಸರ್ವತ್ರ ಸಮದರ್ಶನ ರೂಪವಾದ ಜ್ಞಾನವಿರಬೇಕೆಂದು ನಿನ್ನಿಂದ ಹೇಳಲ್ಪಟ್ಟ ಈ ಯೋಗವನ್ನು ಆಚರಣೆಯಲ್ಲಿ ತರುವುದು ಹೇಗೆ ಸಾಧ್ಯ? ಇದು ನಮ್ಮಂತಹವರಲ್ಲಿ ಸ್ಥಿರವಾಗಿ ನೆಲೆಸಿ ನಿಲ್ಲುವುದು ಸಾಧ್ಯವಿಲ್ಲವೆಂದು ಕಾಣುತ್ತದೆ ಏಕೆಂದರೆ ಮನಸ್ಸು ಚಂಚಲವಾದ ಸ್ವಭಾವವುಳ್ಳದ್ದು ಚಂಚಲವಾದ ಸ್ವಭಾವವುಳ್ಳ ಪುರುಷನಿಂದ ಅನವರತ ಅಭ್ಯಾಸವಾಗಿರುವ ವಿಷಯಗಳಲ್ಲಿ ಕೂಡ ಮನಸ್ಸನ್ನು ಒಂದುಕಡೆ ನಿಲ್ಲಿಸುವುದು ಅಶಕ್ಯವಾಗಿದೆ ಅದು (ಮನಸ್ಸು) ಮನುಷ್ಯನನ್ನು ಆ ವಿಷಯದಿಂದ ಇತರ ವಿಷಯಗಳ ಕಡೆಗೆ ಬಲವಂತವಾಗಿ ಎಳೆದುಕೊಂಡು ಹೋಗುತ್ತದೆ (ಅಂದರೆ ಮನುಷ್ಯನು ಒಂದನ್ನು ನೆನೆಯುವಾಗ ಮನಸ್ಸು ಅಲ್ಲಿ ನಿಲ್ಲದೆ ಮತ್ತೊಂದು ವಿಷಯದ ಕಡೆಗೆ ಎಳೆದುಕೊಂಡು ಹೋಗುತ್ತದೆ) ಹೀಗಿರುವಾಗ ಅಂದರೆ ಹೀಗೆ ಅಭ್ಯಾಸವಾಗಿರುವ ವಿಷಯಗಳಲ್ಲೇ ನೆಲೆ ನಿಲ್ಲದ ಚಂಚಲ ಸ್ವಭಾವದಿಂದ ಕೂಡಿರುವ ಮನಸ್ಸನ್ನು, ವಿಪರೀತವಾದ ಆಕಾರವುಳ್ಳ ಹಿಂದೆ ಅಭ್ಯಾಸವಿಲ್ಲದ ಆತ್ಮನಲ್ಲಿ ನೆಲೆಯಾಗಿ ನಿಲ್ಲಲು ಪ್ರಯತ್ನಿಸುವುದು, ಪ್ರಬಲವಾಗಿ ಬೀಸುತ್ತಿರುವ ಎದುರುಗಾಳಿಯನ್ನು ಒಂದು ಚಿಕ್ಕ ಬೀಸಣಿಗೆಯಿಂದ ತಡೆಯಲು ಪ್ರಯತ್ನಿಸುವ ಹಾಗೆ ತುಂಬ ಕಷ್ಟಕರವಾದುದು ಎಂದು ತಿಳಿಯುತ್ತೇನೆ ಎಂದು ಅರ್ಜುನ ಹೇಳಿದ್ದಾನೆ ಅಂದರೆ ಮನಸ್ಸನ್ನು ತಡೆಯಲು ಉಪಾಯ ಹೇಳಬೇಕೆಂದು ಕೇಳಿದ್ದಾನೆ ಎಂದು ಅರ್ಥ

(2) 'ಮನಸ್ಸನ್ನು ಅಭ್ಯಾಸ ವೈರಾಗ್ಯಗಳಿಂದ ಜಯಿಸಲು ಪ್ರಯತ್ನಿಸು"– ಎಂದು ಶ್ರೀ ಕೃಷ್ಣ ಉತ್ತರ ಹೇಳಿದ್ದಾನೆ

(ಶ್ಲೋಕಗಳು 35 ಮತ್ತು 36)

**ಶ್ಲೋಕಗಳು** 35 ಮತ್ತು 36—"ಅರ್ಜುನ! ಮನಸ್ಸು ಚಂಚಲವಾದುದು ಮತ್ತು ನಿಗ್ರಹಿಸಲು ಕಷ್ಟವಾದುದು ಎಂಬುದರಲ್ಲಿ ಸಂದೇಹವಿಲ್ಲ ಆದರೆ ಎಲೈ ಕೌಂತೇಯನೇ! ಅಭ್ಯಾಸ ಮತ್ತು ವೈರಾಗ್ಯಗಳಿಂದ ಅದನ್ನು ವಶಪಡಿಸಿಕೊಳ್ಳಬಹುದು"—"ವಶಪಡಿಸಿಕೊಳ್ಳದ ಮನಸ್ಸುಳ್ಳವನಿಂದ ಯೋಗವು ಹೊಂದಲ್ಪಡಲಾರದು ಆದರೆ (ಜ್ಞಾನಾಂತರ್ಗತ ಕರ್ಮಯೋಗದ ಮೂಲಕ) ಉಪಾಯದಿಂದ ವಶಪಡಿಸಿಕೊಂಡ ಮನಸ್ಸುಳ್ಳ ಪ್ರಯತ್ನಶೀಲನಾದ ಪುರುಷನಿಂದ ಆ ಯೋಗವು ಹೊಂದಲು ಸಾಧ್ಯವು ಎಂದು ನನ್ನ ಅಭಿಪ್ರಾಯ".

ಮನಸ್ಸು ಚಂಚಲ ಸ್ವಭಾವವುಳ್ಳದ್ದಾಗಿರುವುದರಿಂದ ಅದನ್ನು ವಶಪಡಿಸಿಕೊಳ್ಳುವುದು ಬಹಳ ಕಷ್ಟ ಆದಾಗ್ಯೂ ಆತ್ಮನು ನಿತ್ಯತ್ವ, ಅನಂದತ್ವ ಅಮಲತ್ವಾದಿ ಗುಣಭರಿತನು ಎಂಬುದನ್ನು ಅನುಸಂಧಾನ ಮಾಡುವ ಅಭ್ಯಾಸದಿಂದ ಆತ್ಮನಲ್ಲಿ ಪ್ರೀತಿ ಉಂಟಾಗಿ ಅವನಲ್ಲೇ ಮನಸ್ಸು ಸಕ್ತವಾಗುತ್ತದೆ ಆತ್ಮಕ್ಕೆ ವ್ಯತಿರಿಕ್ತವಾದ ವಸ್ತುಗಳು ಅಲ್ಪವೂ, ಅಸ್ಥಿರವೂ ಆಗಿ ದೋಷ ಭರಿತವಾಗಿವೆ ಎಂಬುದನ್ನು ಅನುಸಂಧಾನ ಮಾಡುವ ಅಭ್ಯಾಸದಿಂದ ಅವುಗಳಲ್ಲಿ ಅಸಹ್ಯತೆಯೂ, ವೈರಾಗ್ಯವೂ ಉಂಟಾಗುತ್ತದೆ ಹೀಗೆ ಆತ್ಮನ ಗುಣಗಳನ್ನೂ, ಇತರ ವಸ್ತುಗಳ ದೋಷಗಳನ್ನೂ ಸುತ್ತ ಮತ್ತೆ ಅನುಸಂಧಾನ ಮಾಡುವ ಅಭ್ಯಾಸದ ಮೂಲಕ ಹೇಗಾದರೂ ಮನಸ್ಸನ್ನು ವಶಪಡಿಸಿಕೊಳ್ಳಬೇಕು ಮನಸ್ಸನ್ನು ಜಯಿಸದೆ ಇದ್ದರೆ ಎಷ್ಟು ಕಷ್ಟಪಟ್ಟು ಪ್ರಯತ್ನಪಟ್ಟರೂ ಆತ್ಮ ಸಾಕ್ಷಾತ್ಕಾರವು ಲಭಿಸುವುದಿಲ್ಲ ಮನಸ್ಸನ್ನು ಜಯಿಸದವನಿಗೆ ಅದು ದುರ್ಲಭವು ಆದರೆ ಉಪಾಯದಿಂದ ಅಂದರೆ ಭಗವಂತನ ಆರಾಧನರೂಪವಾದ, ಮೇಲೆ ವಿವರಿಸಿದ ಅಂತರ್ಗತ ಜ್ಞಾನದಿಂದ ಕೂಡಿದ ಕರ್ಮಗಳ ಮೂಲಕ ಮನಸ್ಸನ್ನು ಜಯಿಸಿ, ಪ್ರಯತ್ನ ಪಡುವ ಸಾಧಕನಿಗೆ ಈ ಸಮದರ್ಶನ ರೂಪಯೋಗ ಸಿದ್ಧಿಯು ಪ್ರಾಪ್ತವಾಗುತ್ತದೆ

### 4) ಕರ್ಮಯೋಗದಿಂದ ಸಾಧಿಸಲ್ಪಡುವ ಆತ್ಮಚಿಂತನ ರೂಪವಾದ ಧ್ಯಾನಯೋಗದ ಮಹಾತ್ಮೆ.

(ಶ್ಲೋಕಗಳು 37 ರಿಂದ 46)

### 1) ಯೋಗ ಭ್ರಷ್ಟನಾದವನೂ ಉತ್ತಮಗತಿಯನ್ನು ಹೊಂದುತ್ತಾನೆ

(ಶ್ಲೋಕಗಳು 37 ರಿಂದ 44)

ಹಿಂದೆ ಕರ್ಮಯೋಗವನ್ನು ವರ್ಣಿಸುವಾಗಲೇ " ನೇಹಾಭಿಕ್ರಮನಾಶೋಽಸ್ತಿ " ಅಂದರೆ ಈ ಯೋಗವನ್ನು ಪ್ರಾರಂಭಿಸಿದ ಮೇಲೆ ಅದಕ್ಕೆ ನಾಶವೆಂಬುದಿಲ್ಲ— ಎಂದು 2 ನೆಯ ಅಧ್ಯಾಯದಲ್ಲಿಯೇ ಹೇಳಿರುವ ಯೋಗಮಹಾತ್ಮೆಯನ್ನು ಮತ್ತೆ ವಿಶದವಾಗಿ ತಿಳಿಯಬೇಕೆಂದು ಅರ್ಜುನ ಶ್ರೀ ಕೃಷ್ಣನನ್ನು ಈ ರೀತಿ ಪ್ರಶ್ನಿಸುತ್ತಾನೆ ಕರ್ಮಯೋಗದಲ್ಲಿ ಜ್ಞಾನಾಂಶವು ಅಂತರ್ಗತವಾಗಿರುವುದರಿಂದ ಕರ್ಮಯೋಗಕ್ಕೆ ಅಲ್ಲಿ ಹೇಳಿರುವ ಮಹಾತ್ಮೆಯೂ, ಕರ್ಮಯೋಗದಿಂದ ಸಾಧಿಸಲ್ಪಡುವ ಆತ್ಮದರ್ಶನ ರೂಪವಾದ ಈ ಧ್ಯಾನಯೋಗದ ಮಹಾತ್ಮೆಯೂ ಎರಡೂ ಒಂದೇ ಆಗಿರುತ್ತದೆ ಏತಕ್ಕೆಂದರೆ ಕರ್ಮಯೋಗದ ಸಿದ್ಧಿಯೇ ಅಂದರೆ ಫಲವೇ ಆತ್ಮಾವಲೋಕನವು ಇದರ ಮಹಾತ್ಮೆಯು ಮುಂದಿನ ಶ್ಲೋಕಗಳಲ್ಲಿ ವಿವರವಾಗಿ ವರ್ಣಿಸಲ್ಪಟ್ಟಿದೆ

(1) "ಯೋಗಭ್ರಷ್ಟನ ಗತಿಏನು "?—ಎಂಬ ಅರ್ಜುನನ ಪ್ರಶ್ನೆ—(ಶ್ಲೋಕಗಳು 37, 38, 39)

**ಶ್ಲೋಕ 37**—ಅರ್ಜುನನು ಹೇಳುತ್ತಾನೆ "ಶ್ರದ್ಧೆಯಿಂದ ಯೋಗ ಸಾಧನೆಯಲ್ಲಿ ನಿರತನಾಗಿರುವ ಸಾಧಕನು ತನ್ನ ಪ್ರಯತ್ನದಲ್ಲಿ ಕೊರತೆ ಹೊಂದಿದವನಾಗಿ ಯೋಗ ಸಿದ್ಧಿಯನ್ನು ಪಡೆಯದೆ ಯೋಗದಿಂದ ವಿಚಲಿತವಾದ ಮನಸ್ಸುಳ್ಳವನಾದರೆ, ಅವನು ಯಾವಗತಿಯನ್ನು ಹೊಂದುತ್ತಾನೆ" ?—ಆತ್ಮದರ್ಶನ ರೂಪವಾದ ಯೋಗಾನುಷ್ಠಾನದಲ್ಲಿ ಅತ್ಯಂತ ಶ್ರದ್ಧೆಯಿಂದ ಪ್ರವರ್ತಿಸಿದ ಒಬ್ಬ ಯೋಗಸಾಧಕನು, ಅದನ್ನು ಧೃಢವಾಗಿ ಅಭ್ಯಾಸ ಮಾಡಲು ಶಕ್ತನಾಗದ, ಯೋಗಸಿದ್ಧಿಯನ್ನು ಹೊಂದದ, ಯೋಗಾ

ಭ್ಯಾಸದಿಂದ ವಿಚಲಿತವಾದ ಮನಸ್ಸುಳ್ಳವನಾದರೆ ಆಗ ಅವನ ಗತಿ ಏನು ?—ಎಂದು ಅರ್ಜುನನು ಪ್ರಶ್ನಿಸುತ್ತಾನೆ

**ಶ್ಲೋಕ 38**—"ಬ್ರಹ್ಮಮಾರ್ಗದಲ್ಲಿ ತಪ್ಪಿದವನಾಗಿ, ಆಶ್ರಯರಹಿತನಾದ ಪುರುಷನು ಒಂದು ದೊಡ್ಡ ಮೇಘವನ್ನು ಬಿಟ್ಟು ಅಗಲಿದ ಒಂದು ಮೇಘ ಶಕಲದಂತೆ (ಮೇಘದ ತುಂಡಿನಂತೆ) ಎರಡು ಕಡೆಗಳಿಂದಲೂ ಭ್ರಷ್ಟನಾಗಿ ನಷ್ಟನಾಗದೇ ಇರುತ್ತಾನೆಯೇ "?—

**ಶ್ಲೋಕ 39**—"ಶ್ರೀ ಕೃಷ್ಣನೇ ! ನನ್ನ ಈ ಸಂಶಯವನ್ನು ಸಂಪೂರ್ಣವಾಗಿ ಕತ್ತರಿಸುವುದಕ್ಕೆ ನೀನು ಯೋಗ್ಯನಾಗಿದ್ದೀಯೆ, ನನ್ನ ಈ ಸಂಶಯವನ್ನು ಕತ್ತರಿಸಲು ನಿನಗಿಂತ ಬೇರೆ ಯಾದವನು ಯಾರೂ ಲಭಿಸಲಾರನು"

ಒಂದು ದೊಡ್ಡ ಮೇಘದಿಂದ ಅಗಲಿಸಲ್ಪಟ್ಟ ಸಣ್ಣ ಮೇಘದ ತುಂಡು ಮತ್ತೊಂದು ದೊಡ್ಡ ಮೇಘವನ್ನು ಹೋಗಿ ಸೇರದ ಮಧ್ಯದಲ್ಲಿ ನಷ್ಟವಾಗುವಂತೆ ಯೋಗಭ್ರಷ್ಟನಾದ ಈ ಸಾಧಕನೂ ಕೂಡ ಉಭಯ ಭ್ರಷ್ಟನಾಗಿ ನಾಶಹೊಂದುವುದಿಲ್ಲವೇ ? ಇವನಿಗೆ ಎರಡು ವಿಧವಾದ ಭ್ರಷ್ಟತೆಯು ಹೇಗೆಂದರೆ ಯಥಾವತ್ತಾಗಿ ಸಾಧನಭೂತವಾದ ಕರ್ಮಗಳನ್ನು ಫಲಾಭಿಸಂಧಿರಹಿತನಾಗಿ ಮಾಡುವುದರಿಂದ ಈ ಪುರುಷನಿಗೆ ತಾನು ಮಾಡುತ್ತಿರುವ ಕರ್ಮಗಳ ಫಲದಲ್ಲಿ ಆಸಕ್ತಿಯಿಲ್ಲ ಮತ್ತು ತಾನು ಈಗ ಆರಂಭಿಸಿರುವ ಬ್ರಹ್ಮಮಾರ್ಗದಲ್ಲಿ ಈತನು ಅಜ್ಞನಾಗಿ ಜಾರಿದವನಾಗಿರುವುದರಿಂದ ಅದರ ಫಲವು ಇವನಿಗೆ ಲಭಿಸುವುದಿಲ್ಲ ಹೀಗೆ ಎರಡು ವಿಧದಲ್ಲೂ ಭ್ರಷ್ಟತೆಯನ್ನು ಹೊಂದಿರುವ ಈತನು ನಾಶ ಹೊಂದುವನೋ ಇಲ್ಲ ನಾಶ ಹೊಂದದೆ ಇರಬಲ್ಲನೋ ಎಂಬ ಸಂಶಯವು ಉಂಟಾಗಿದೆ ಈ ಸಂಶಯವನ್ನು ಸಂಪೂರ್ಣವಾಗಿ ಹೋಗಲಾಡಿಸಲು ನೀನೇ ಸಮರ್ಥನು ಏತಕ್ಕೆಂದರೆ ನೀನು ಏಕಕಾಲದ ಸಕಲವನ್ನೂ ಸರ್ವಕಾಲದಲ್ಲೂ ನೀನಾಗಿಯೇ ಪ್ರತ್ಯಕ್ಷವಾಗಿ ನೋಡಬಲ್ಲವನಾಗಿದ್ದೀಯೆ ನಿನ್ನ ವಿನಹ ಬೇರೆ ಯಾರಿಂದಲೂ ಈ ಸಂಶಯವು ಕತ್ತರಿಸಲ್ಪಡಲಾರದು ಆದ್ದರಿಂದ ನನ್ನ ಈ ಸಂಶಯವನ್ನು ಕೃಪೆಮಾಡಿ ಹೋಗಲಾಡಿಸು —ಎಂದು ಅರ್ಜುನ ಕೇಳುತ್ತಾನೆ

(II) "ಯೋಗಭ್ರಷ್ಟನು ಉತ್ತಮ ಜನ್ಮಹೊಂದಿ ಉತ್ತಮಗತಿಯನ್ನೇ ಹೊಂದುವನು" —ಎಂಬ ಕೃಷ್ಣನ ಉತ್ತರ (ಶ್ಲೋಕಗಳು 40 ರಿಂದ 44)

**ಶ್ಲೋಕ 40**—"ಅರ್ಜುನ ! ಯೋಗಭ್ರಷ್ಟನಾದ ಆ ಪುರುಷನಿಗೆ ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ವಿನಾಶವೆಂಬುದಿಲ್ಲ ಒಳ್ಳೆಯ ಕೆಲಸಮಾಡುವವನು ಎಂದೂ ದುರ್ಗತಿ ಹೊಂದುವುದಿಲ್ಲ"—ಶ್ರದ್ಧೆಯಿಂದ ಯೋಗವನ್ನು ಪ್ರಾರಂಭಿಸಿ ಅದರಿಂದ ಜಾರಿದವನಿಗೆ ಇಲ್ಲಿ ಮತ್ತು ಅಲ್ಲಿ ಎಲ್ಲೂ ಎಂದರೆ ಇಹಪರಗಳೆರಡರಲ್ಲೂ ನಾಶವಿಲ್ಲವು. ಅಂದರೆ ಪ್ರಾಕೃತ ಸ್ವರ್ಗಾದಿ ಭೋಗಗಳ ಅನುಭವದಲ್ಲೂ ಮತ್ತು ಬ್ರಹ್ಮಾನುಭವದಲ್ಲೂ ಇಷ್ಟದ ಅಪ್ರಾಪ್ತಿ ಮತ್ತು ಅನಿಷ್ಟದ ಪ್ರಾಪ್ತಿ ಎಂಬ ಎರಡುವಿಧ ವಿನಾಶವುಂಟಾಗುವುದಿಲ್ಲ ನಿರತಿಶಯ ಕಲ್ಯಾಣಕರವಾದ ಯೋಗಸಾಧನೆ ಮಾಡುವ ಯಾವ ಪುರುಷನೂ ತ್ರಿಕಾಲದಲ್ಲೂ ಎಂದೂ ದುರ್ಗತಿ ಹೊಂದುವುದಿಲ್ಲ ಇದು ಹೇಗೆ ಎಂಬುದು ಮುಂದಿನ ಶ್ಲೋಕದಲ್ಲಿ ತಿಳಿಸಿದೆ

**ಶ್ಲೋಕ 41**—ಯೋಗಭ್ರಷ್ಟನಾದವನು ಹೊಂದುವ ಗತಿ ಏನು ಎಂಬುದನ್ನು ಈ ಶ್ಲೋಕವು ತಿಳಿಸುತ್ತದೆ ಯೋಗಭ್ರಷ್ಟನು ಆಚರಿಸಿದ ಅಲ್ಪಯೋಗಾಭ್ಯಾಸದ ಫಲವಾಗಿ ಅವನು ಹೊಂದುವ ಶ್ರೇಯಸ್ಸು ಎಂತಹದು ಎಂಬುದನ್ನು ಹೇಳಿ ಯೋಗದ ಮಹಾತ್ಮೆಯನ್ನು ಶ್ರೀ ಕೃಷ್ಣ ತಿಳಿಸಿದ್ದಾನೆ,

"ಯೋಗಭ್ರಷ್ಟನಾದವನು ಪುಣ್ಯ ಮಾಡಿದವರಿಗೆ ಲಭಿಸಲು ಯೋಗ್ಯವಾದ ಸ್ವರ್ಗಾದಿಲೋಕಗಳನ್ನು ಹೊಂದಿ, ಅಲ್ಲಿ ಶಾಶ್ವತವಾಗಿ ಬಹಳ ವರ್ಷಗಳು ವಾಸಮಾಡಿ ಪವಿತ್ರ ಶೀಲವಂತರೂ ಮತ್ತು ಶ್ರೀಮಂತರ ಮನೆಯಲ್ಲಿ ಹುಟ್ಟುತ್ತಾನೆ"

ಯೋಗಭ್ರಷ್ಟನಾದ ಇವನು ಅತಿ ಪುಣ್ಯಮಾಡಿದವರು ಹೊಂದಲು ಯೋಗ್ಯವಾದ ಲೋಕಗಳನ್ನು ಹೊಂದಿ ತಾನು ಯಾವ ಪ್ರಕಾರವಾದ ಭೋಗಾಭಿಲಾಷೆಯಿಂದ ಯೋಗಸಾಧನೆ ಮಾಡದೆ ಜಾರಿದನೋ, ಅದೇ ಪ್ರಕಾರದ ಅತ್ಯಂತ ಕಲ್ಯಾಣರೂಪವಾದ ಭೋಗಗಳನ್ನು ಜ್ಞಾನೋಪಾಯರೂಪವಾದ ಯೋಗದ ಮಹಾತ್ಮೆಯಿಂದಲೇ ಅನುಭವಿಸುತ್ತಾನೆ ಅವನ ಭೋಗಾಭಿಲಾಷೆಯು ಸಮಾಪ್ತವಾಗುವವರೆಗೂ ಅನೇಕ ವರ್ಷಗಳು ಅಲ್ಲಿ ವಾಸವಾಗಿದ್ದು ಆ ಭೋಗತೃಷೆಯು ಮುಗಿದಮೇಲೆ ಯೋಗದ ಮಹಾತ್ಮೆಯಿಂದ ಯೋಗಸಾಧನೆಗೆ ಯೋಗ್ಯವಾದ ವಿಶುದ್ಧರಾದ ಮತ್ತು ಶ್ರೀಮಂತರಾದವರ ಕುಲದಲ್ಲಿ ಜನ್ಮ ಹೊಂದುತ್ತಾನೆ

**ಶ್ಲೋಕ 42**—"ಅಥವ ಜ್ಞಾನಿಗಳಾದ ಯೋಗಿಗಳ ಕುಲದಲ್ಲಿಯೇ ಹುಟ್ಟುತ್ತಾನೆ. ಇಂತಹ ಜನ್ಮವು ಯಾವುದುಂಟು ಅದು ಲೋಕದಲ್ಲಿ ಅತ್ಯಂತ ದುರ್ಲಭವಾದುದಲ್ಲವೇ !"

"ಯೋಗದ ಪರಿಪಕ್ವ ಅವಸ್ಥೆಯಲ್ಲಿ ಅಂದರೆ ಯೋಗವು ಕೈಗೂಡುವ ಸಮಯದಲ್ಲಿ ಯೋಗದಿಂದ ವಿಚಲಿತನಾದರೆ, ಅವನು ಖಂಡಿತ ಜ್ಞಾನಿಗಳಾದ ಯೋಗಿಗಳ ಅಂದರೆ ಸ್ವಯಂ ಯೋಗ ಸಾಧನೆ ಮಾಡುತ್ತಿರುವ ಮತ್ತು ಇತರರಿಗೆ ಯೋಗದ ಉಪದೇಶ ಮಾಡುತ್ತಿರುವ ಯೋಗಿಗಳ ಕುಲದಲ್ಲಿ ಹುಟ್ಟುತ್ತಾನೆ ಹೀಗೆ ಯೋಗಸಾಧನಕ್ಕೆ ಉಪಯುಕ್ತವಾದ ಶೀಲವಂತರ ಮತ್ತು ಶ್ರೀಮಂತರ ಮನೆಗಳಲ್ಲಿ ಜನ್ಮಹೊಂದುವುದು ಮತ್ತು ಯೋಗಿಗಳ ಕುಲದಲ್ಲಿ ಜನ್ಮಹೊಂದುವುದು ಎಂಬ ಈ ಎರಡು ಪ್ರಕಾರವಾದ ಯೋಗಾಭ್ಯಾಸಕ್ಕೆ ಯೋಗ್ಯವಾದ ಜನ್ಮವು ಲೋಕದ ಪ್ರಾಕೃತ ಮಾನವರಿಗೆ ಲಭಿಸುವುದು ಬಹಳ ದುರ್ಲಭವು ಏತಕ್ಕೆಂದರೆ ಇದು ಕೇವಲ ಯೋಗಮಹಾತ್ಮೆಯಿಂದಲೇ ಲಭಿಸತಕ್ಕದ್ದಾಗಿದ

**ಶ್ಲೋಕ 43**—"ಆ ಮುಂದಿನ ಜನ್ಮದಲ್ಲಿ ಹಿಂದಿನ ಶರೀರಕ್ಕೆ ಸೇರಿದ ಆ ಬುದ್ಧಿ ಸಂಬಂಧವನ್ನು (ಜ್ಞಾನ ಪ್ರಾಪ್ತಿಯನ್ನು) ಹೊಂದುತ್ತಾನೆ ಆದುದರಿಂದ ಅವನು ಮತ್ತೆ ಯೋಗ ಸಂಸಿದ್ಧಿಗಾಗಿ ಯತ್ನಿಸುತ್ತಾನೆ"

ಆ ಮುಂದಿನ ಜನ್ಮದಲ್ಲಿ ಅವನು ತನ್ನ ಹಿಂದಿನ ಶರೀರದಲ್ಲಿ ಅಭ್ಯಾಸ ಮಾಡಿದ ಯೋಗ ವಿಷಯಕವಾದ ಬುದ್ಧಿ ಸಂಬಂಧವನ್ನು (ಜ್ಞಾನ ಪ್ರಾಪ್ತಿಯನ್ನು) ಮತ್ತೆ ಹೊಂದುತ್ತಾನೆ ಆದ್ದರಿಂದ ಅವನು ನಿದ್ರೆಯಿಂದ ಎಚ್ಚೆತ್ತವನಂತೆ ಮತ್ತೆ ಯೋಗದ ಪೂರ್ಣ ಸಿದ್ಧಿಗಾಗಿ, ತಿರುಗಿ ಅದಕ್ಕೆ ವಿಘ್ನ ಉಂಟಾಗದ ರೀತಿಯಲ್ಲಿ ಪ್ರಯತ್ನ ಮಾಡುತ್ತಾನೆ

**ಶ್ಲೋಕ 44**—"ಅವನು ಪೂರ್ವದಲ್ಲಿ ತಾನು ಮಾಡಿದ ಆ ಯೋಗಾಭ್ಯಾಸದಿಂದಲೇ ಅವಶನಾಗಿ ಸೆಳೆಯಲ್ಪಡುತ್ತಾನೆ ಯೋಗದ ಮಹಾತ್ಮೆಯನ್ನು ತಿಳಿಯಬೇಕೆಂಬ ಆಸೆ ಉಳ್ಳವನೂ ಕೂಡ ವ್ಯವಹಾರಕ್ಕೆ ಕಾರಣವಾದ ಪ್ರಕೃತಿಯನ್ನು ದಾಟುತ್ತಾನೆ"

ಆ ಯೋಗಭ್ರಷ್ಟನಾದ ಪುರುಷನು ತಾನು ಹಿಂದೆ ಮಾಡಿದ ಯೋಗ ವಿಷಯಕ ಅಭ್ಯಾಸದಿಂದ ಅವಶನಾಗಿ, ಮುಂದಯೂ ಯೋಗಾಭ್ಯಾಸದಲ್ಲಿಯೇ ಆಕರ್ಷಿಸಲ್ಪಟ್ಟವನಾಗುತ್ತಾನೆ ಇದರಿಂದ ಯೋಗದ ಮಹಾತ್ಮೆಯು ಪ್ರಸಿದ್ಧವಾಯಿತೆಂದು ಅಭಿಪ್ರಾಯ ಇಷ್ಟು ಮಾತ್ರವಲ್ಲದೆ ಯೋಗಾಭ್ಯಾಸದಲ್ಲಿ ಪ್ರವೃತ್ತನಾಗದೆ ಕೇವಲ ಯೋಗಾಭ್ಯಾಸದ ಮಾರ್ಗವನ್ನು ತಿಳಿಯಬೇಕೆಂದು ಆಸೆಪಡುವ ಜಿಜ್ಞಾಸುವೂ ಕೂಡ, ಆದರಿಂದ ಚಲಿಸಲ್ಪಟ್ಟ ಮನಸ್ಸುಳ್ಳವನಾದರೆ ಮುಂದಿನ ಜನ್ಮದಲ್ಲಿ ಯೋಗವನ್ನು ಚಿಂತಿಸುವ ಅವಸ್ಥೆಯನ್ನೇ ಮತ್ತೆ ಹೊಂದಿ ಕರ್ಮಯೋಗದಿಂದ ಕೂಡಿರುವ ಆತ್ಮಚಿಂತನ ರೂಪವಾದ ಈ ಯೋಗವನ್ನು ಅನುಷ್ಠಿಸಿ ಶಬ್ದ ಬ್ರಹ್ಮವನ್ನು ಅಂದರೆ ಪ್ರಕೃತಿಯನ್ನು ದಾಟುತ್ತಾನೆ ಶಬ್ದ ಬ್ರಹ್ಮ ಎಂದರೆ ದೇವ, ಮನುಷ್ಯ, ಪೃಥಿವಿ, ಅಂತರಿಕ್ಷ ಮತ್ತು ಸ್ವರ್ಗ ಮುಂತಾದ ಶಬ್ದಗಳಿಂದ ವರ್ಣನೆ ಮಾಡಲು ಯೋಗ್ಯವಾದ ಬ್ರಹ್ಮರೂಪವಾದ ಪ್ರಕೃತಿಯು ಈ ಪ್ರಕೃತಿ ಸಂಬಂಧದಿಂದ ಮುಕ್ತನಾಗಿ ದೇವ ಮನುಷ್ಯಾದಿ ಶಬ್ದಗಳಿಂದ ಹೇಳಲಾಗದ ಜ್ಞಾನಾನಂದೈಕ ಸ್ವರೂಪವಾದ ಆತ್ಮ ಸಾಕ್ಷಾತ್ಕಾರವನ್ನು ಹೊಂದುತ್ತಾನೆ ಎಂದು ಅಭಿಪ್ರಾಯ

[40ನೆಯ ಶ್ಲೋಕದಿಂದ 44 ನೆಯ ಶ್ಲೋಕದವರೆಗಿನ ಈ ನಾಲ್ಕು ಶ್ಲೋಕಗಳು ಯೋಗ ಭ್ರಷ್ಟನಾದವನು, ತಾನು ಅನುಷ್ಠಿಸಿದ ಅಲ್ಪ ಯೋಗಾಭ್ಯಾಸದ ಮಹಾತ್ಮೆಯಿಂದಲೇ ಉತ್ತಮ ಗತಿಯನ್ನು ಹೊಂದುವನು ಎಂಬುದನ್ನು ಪ್ರತಿಪಾದಿಸುತ್ತವೆ ಯೋಗದ ಪೂರ್ವದಶೆಯಲ್ಲಿ ಯೋಗ ಭ್ರಷ್ಟತೆ ಉಂಟಾದರೆ ಅಂದರೆ ಯೋಗವನ್ನು ಪ್ರಾರಂಭಿಸಿದ ಕೆಲವು ಕಾಲದಲ್ಲಿಯೇ, ಯೋಗಿಯು ಯೋಗವನ್ನು ಮುಂದುವರಿಸಲು ಶಕ್ತನಾಗದ ಯೋಗಭ್ರಷ್ಟನಾದರೆ ಅವನು ಮುಂದೆ "ಶುಚೀನಾಂ ಶ್ರೀಮತಾಂ ಗೇಹೆ"—ಅಂದರೆ ಶೀಲವಂತರೂ ಶ್ರೀಮಂತರೂ ಆದವರ ಮನೆಯಲ್ಲಿ ಜನ್ಮ ಹೊಂದಿ, ಯೋಗಾಭ್ಯಾಸವನ್ನು ಮುಂದುವರಿಸಲು ಅನುಕೂಲವಾದ ವಾತಾವರಣವನ್ನು ಹೊಂದುವನು ಮತ್ತು ತನ್ನ ಯೋಗಾಭ್ಯಾಸವನ್ನು ಮುಂದುವರಿಸುವನು ಯೋಗದ ಉತ್ತರದಶೆಯಲ್ಲಿ ಯೋಗಭ್ರಷ್ಟತೆ ಉಂಟಾದರೆ ಅಂದರೆ ಯೋಗಾಭ್ಯಾಸವನ್ನು ಮುಂದುವರಿಸಿ ಮೇಲೆ ಮೇಲೆ ಅದನ್ನು ಅನುಷ್ಠಿಸುತ್ತಾ ಇದ್ದರೂ ಅದರಲ್ಲಿ ಉತ್ತಮವಾದ ಅವಸ್ಥೆ ಪ್ರಾಪ್ತವಾಗುವುದಕ್ಕೆ ಮುಂಚೆ ಯೋಗಾಭ್ಯಾಸವನ್ನು ತ್ಯಜಿಸಿ ಯೋಗಭ್ರಷ್ಟನಾದವನು, "ಧೀಮಂತಾಂ ಯೋಗಿನಾಂ ಕುಲೇ" ಅಂದರೆ ಜ್ಞಾನಿಗಳಾದ ಯೋಗಿಗಳ ಕುಲದಲ್ಲಿ ಜನ್ಮಹೊಂದಿ, ಮತ್ತೆ ಯೋಗ ಸಿದ್ಧಿಗಾಗಿ ಪ್ರಯತ್ನಮಾಡಿ ಕೊನೆಗೆ ಯೋಗಸಿದ್ಧಿಯನ್ನು ಹೊಂದುವನು ಇಷ್ಟೆ ಅಲ್ಲದೆ ಯೋಗಾಭ್ಯಾಸವನ್ನೇ ಪ್ರಾರಂಭಿಸಿದ ಯೋಗಾಭ್ಯಾಸದ ಮಹಾತ್ಮೆಯನ್ನು ತಿಳಿಯಬೇಕೆಂಬ ಜಿಜ್ಞಾಸುವಾದವನು ಮನದ ಚಂಚಲತೆಯಿಂದ ಯೋಗಾಭ್ಯಾಸವನ್ನು ಪ್ರಾರಂಭಿಸದೆ ಇದ್ದರೂ ಕೂಡ, ಕೇವಲ ಯೋಗಾಭ್ಯಾಸದ ಮಹಾತ್ಮೆಯನ್ನು ಚಿಂತಿಸಿದ

ಅವನಿಗೂ ಯೋಗ ಭ್ರಷ್ಟನ ಹಾಗೆಯೇ ಶ್ರೇಯಸ್ಸುಂಟು. ಅವನೂ ಕಾಲಕ್ರಮದಲ್ಲಿ ಯೋಗಾಭ್ಯಾಸದಲ್ಲಿ ನಿರತನಾಗಿ ಉತ್ತಮ ಗತಿಯನ್ನು ಹೊಂದುವನು ಎಂದು ಶ್ರೀಕೃಷ್ಣ ಇಲ್ಲಿ ಚಲಿತ ಮನಸ್ಕರಾಗಿ ಯೋಗ ಭ್ರಷ್ಟರಾದ ಈ ಮೂರು ವಿಧ ಅಧಿಕಾರಿಗಳಿಗೂ ಉತ್ತಮ ಫಲವು ಲಭಿಸುವುದೆಂದು ಹೇಳಿದ್ದಾನೆ ]

**2) ಯೋಗಾಭ್ಯಾಸವನ್ನು ಪ್ರಾರಂಭಿಸಿದವನು ಜನ್ಮ ಜನ್ಮಾಂತರದಲ್ಲಿಯಾದರೂ ಯೋಗ ಸಿದ್ಧಿಯನ್ನು ಹೊಂದಿಯೇ ಹೊಂದುವನು** (ಶ್ಲೋಕ-45)

**ಶ್ಲೋಕ 45**—"ಪ್ರಯತ್ನ ಪೂರ್ವಕವಾಗಿ ಸಾಧನೆ ಮಾಡುತ್ತಾ, ಪಾಪಗಳಿಂದ ಸಂಪೂರ್ಣವಾಗಿ ಬಿಡಲ್ಪಟ್ಟು ಪರಿಶುದ್ಧನಾಗಿರುವ ಯೋಗಿಯು ಅನೇಕ ಜನ್ಮಗಳಲ್ಲಿ ಯೋಗ ಸಿದ್ಧಿಯನ್ನು ಹೊಂದಿ ಉತ್ತಮಗತಿಯನ್ನು ಹೊಂದುವನು" ಯೋಗ ಸಾಧನೆಯನ್ನು ಮಾಡುವವನು ಅನೇಕ ಜನ್ಮಗಳಲ್ಲಿ ಆರ್ಜಿಸಿದ ಪುಣ್ಯಗಳ ಸಮೂಹದಿಂದ ಯೋಗಸಾಧನೆಗೆ ವಿರೋಧಿಗಳಾದ ಸಮಸ್ತ ಪಾಪಗಳನ್ನೂ ನಾಶಗೊಳಿಸಿಕೊಂಡವನಾಗುತ್ತಾನೆ ಹೀಗೆ ಪಾಪರಹಿತನಾಗಿ ಪರಿಶುದ್ಧನಾಗಿ ಜನ್ಮ ಪಡೆದು ಪ್ರಯತ್ನ ಪೂರ್ವಕವಾಗಿ ಯೋಗಸಾಧನೆ ಮಾಡುವವನು ಯೋಗಾಭ್ಯಾಸದಿಂದ ವಿಚಲಿತನಾಗಿ ಯೋಗಭ್ರಷ್ಟನಾದಾಗ್ಯೂ ಕೂಡ ಅವನು ಮುಂದೆ ಜನ್ಮ ಜನ್ಮಾಂತರದಲ್ಲಿಯಾದರೂ ಪರಮಗತಿಯನ್ನು ಹೊಂದಿಯೇ ಹೊಂದುವನು

[ಇದರ ಅಭಿಪ್ರಾಯವೇನೆಂದರೆ-ಯೋಗ ಸಾಧನೆಯನ್ನು ಮಾಡುವವನು ಯೋಗ ಭ್ರಷ್ಟನಾದರೆ ಮುಂದೆ ಉತ್ತಮಕುಲದಲ್ಲಿ ಜನಿಸುವನು ಆದರೆ ಈ ಮುಂದಿನ ಉತ್ತಮ ಜನ್ಮದಲ್ಲೂ ಅವನಿಗೆ ಯೋಗ ಭ್ರಷ್ಟತೆ ಉಂಟಾಗಬಹುದಲ್ಲವೇ ಎಂಬ ಶಂಕೆ ಉಂಟಾಗುತ್ತದೆ ಇದಕ್ಕೆ ಉತ್ತರವಾಗಿ ಅನೇಕ ಜನ್ಮಗಳಿಂದ ಆರ್ಜಿಸಲ್ಪಟ್ಟ ಸುಕೃತ್ಯಗಳ ಬಲದಿಂದ ವಿಘ್ನಗಳೆಲ್ಲಾ ತೊಲಗಿ ಅವನು ಮತ್ತೆ ಯೋಗಾಭ್ಯಾಸದಲ್ಲಿ ತೊಡಗುವನು ಮತ್ತು ಯೋಗಾಭ್ಯಾಸವನ್ನು ಒಂದು ಸಲ ಪ್ರಾರಂಭಿಸಿದವನು ಅದರ ಮಹಿಮೆಯಿಂದ ಜನ್ಮ ಜನ್ಮಾಂತರದಲ್ಲಿಯಾದರೂ ಯೋಗಸಿದ್ಧಿಯನ್ನು ಪಡೆದೇ ಪಡೆಯುವನು ಎಂದು ಶ್ರೀಕೃಷ್ಣ ಎಲ್ಲರಿಗೂ ಭರವಸೆ ನೀಡಿದ್ದಾನೆ ]

**3) ಫಲಾಸಕ್ತಿಯಿಂದ ಅನುಷ್ಠಿಸಲ್ಪಡುವ ತಪಸ್ಸು, ಜ್ಞಾನ, ಕರ್ಮ ಇವುಗಳಿಗಿಂತ ಫಲಾಸಕ್ತಿ ರಹಿತವಾದ ಕರ್ಮಯೋಗದಿಂದ ಸಾಧಿಸಲ್ಪಡುವ ಆತ್ಮಚಿಂತನರೂಪ ಧ್ಯಾನ್ಯಯೋಗ ಶ್ರೇಷ್ಠವಾದುದು** (ಶ್ಲೋಕ 46)

**ಶ್ಲೋಕ 46**—"ಆತ್ಮಧ್ಯಾನನಿರತನಾದ ಕರ್ಮಯೋಗಿಯಾದವನು (ಫಲಾಪೇಕ್ಷೆಯಿಂದ ಕೂಡಿದ) ತಪಸ್ವಿಗಳಿಗಿಂತ ಶ್ರೇಷ್ಠನು, ಜ್ಞಾನಿಗಳಿಗಿಂತ ಶ್ರೇಷ್ಠನು ಮತ್ತು ಕಾಮ್ಯ ಕರ್ಮಿಗಳಿಗಿಂತ ಶ್ರೇಷ್ಠನು ಆದ್ದರಿಂದ ಅರ್ಜುನನೇ ! ನೀನು ಆತ್ಮಧ್ಯಾನಪರನಾದ ಕರ್ಮಯೋಗಿಯಾಗು"—

ಫಲಾಪೇಕ್ಷೆಯಿಂದ ಕೂಡಿದ ಕೇವಲ ತಪಸ್ಸಿನಿಂದ ಯಾವ ಪುರುಷಾರ್ಥವು ಸಾಧಿಸಲ್ಪಡುತ್ತದೆಯೋ, ಆತ್ಮಜ್ಞಾನ ವ್ಯತಿರಿಕ್ತವಾದ ಇತರ ಜ್ಞಾನಗಳಿಂದ ಯಾವ ಪುರುಷಾರ್ಥವು ಸಾಧಿಸಲ್ಪಡುತ್ತದೆಯೋ, ಮತ್ತು ಫಲಾಪೇಕ್ಷೆಯಿಂದ ಮಾಡುವ ಕೇವಲ ಅಶ್ವಮೇಧಾದಿ ಕರ್ಮಗಳಿಂದ ಯಾವ ಪುರುಷಾರ್ಥವು ಸಾಧಿಸಲ್ಪಡುತ್ತದೆಯೋ ಅವುಗಳೆಲ್ಲಕ್ಕಿಂತ ಅಧಿಕವಾದ ಪುರುಷಾರ್ಥವು (ಅಂದರೆ ಭಕ್ತಿಯೋಗವು) ಆತ್ಮಚಿಂತನ ರೂಪಧ್ಯಾನದಿಂದ ಕೂಡಿರುವ ಕರ್ಮಯೋಗದಿಂದ ಸಾಧಿಸಲ್ಪಡುತ್ತದೆ ಆದ್ದರಿಂದ ಕೇವಲ ಫಲಾಸಕ್ತಿಯಿಂದ ಕೂಡಿ ತಪಸ್ಸನ್ನು ಆಚರಿಸುವ ತಪೋನಿಷ್ಠರಿಗಿಂತಲೂ, ಆತ್ಮಜ್ಞಾನ ರಹಿತವಾದ ಇತರ ಜ್ಞಾನನಿಷ್ಠರಿಗಿಂತಲೂ, ಮತ್ತು ಫಲಾಸಕ್ತಿಯೊಂದಿಗೆ ಆಚರಿಸುವ ಕಾಮ್ಯಕರ್ಮಿಗಳಿಗಿಂತಲೂ ಆತ್ಮಧ್ಯಾನಯುಕ್ತನಾದ ಕರ್ಮಯೋಗಿಯೇ ಶ್ರೇಷ್ಠನು ಅವನು ಅವುಗಳೆಲ್ಲವನ್ನು ಫಲಾಪೇಕ್ಷೆ ರಹಿತನಾಗಿ ಭಗವತ್ಕೈಂಕರ್ಯ ರೂಪವಾಗಿ ಅನುಷ್ಠಿಸುವನು ಆದ್ದರಿಂದ ಅರ್ಜುನ ! ನೀನು ಕರ್ಮಯೋಗವನ್ನು ಅನುಷ್ಠಿಸಿ ಆತ್ಮಧ್ಯಾನಪರನಾಗು ಅಂದರೆ ಆತ್ಮಧ್ಯಾನಪರನಾದ ಕರ್ಮಯೋಗಿಯಾಗು ಎಂದು ಶ್ರೀ ಕೃಷ್ಣ ಇಲ್ಲಿ ಉಪದೇಶಮಾಡಿದ್ದಾನೆ [ಇಲ್ಲಿ ಒಂದು ಮುಖ್ಯವಾದ ವಿಷಯವನ್ನು ಗಮನಿಸಬೇಕು ಈ ಶ್ಲೋಕದಲ್ಲಿ ತಿಳಿಸಿರುವ ತಪಸ್ವಿಗಳು, ಜ್ಞಾನಿಗಳು, ಕರ್ಮಿಗಳು ಕರ್ಮಯೋಗಿಗಳಲ್ಲ ಅಂದರೆ ಅವರು ಅವುಗಳೆಲ್ಲವನ್ನು ಫಲಾಸಕ್ತಿ ರಹಿತರಾಗಿ, ಭಗವದಾರಾಧನ ರೂಪವಾಗಿ, ಕರ್ಮಯೋಗವಾಗಿ ಅನುಷ್ಠಿಸುವವರಲ್ಲ ಆದರೆ ತಪಸ್ಸನ್ನೂ ಜ್ಞಾನಾಭ್ಯಾಸಗಳನ್ನೂ, ಸಕಲ ಕರ್ಮಗಳನ್ನೂ ಫಲಾಭಿಸಂಧಿ ರಹಿತನಾಗಿ, ಆತ್ಮಸ್ವರೂಪ ಚಿಂತನದೊಂದಿಗೆ ಅನುಷ್ಠಿಸುವ ಯೋಗಿಯು ಕೇವಲ ಫಲಕ್ಕಾಗಿ ಅವುಗಳನ್ನು ಅನುಷ್ಠಿಸುವವನಿಗಿಂತ ಅಧಿಕನು

ಏಕೆಂದರೆ ಮೇಲೆ ಐದು ಅಧ್ಯಾಯಗಳಿಂದ ವಿವರಿಸಿರುವ ಈಕರ್ಮ–ಯೋಗಾನುಷ್ಠಾನದಿಂದ ಆತ್ಮಧ್ಯಾನವು ಸಿದ್ಧಿಸಿ ಆತ್ಮಾವಲೋಕನವುಉಂಟಾಗುತ್ತದೆ ಆತ್ಮಾವಲೋಕನವು ಭಕ್ತಿಯೋಗಕ್ಕೆ ಸಾಧನವಾಗಿರುವುದರಿಂದ, ಇದರಿಂದ ಲಭಿಸುವ ಪುರುಷಾರ್ಥವು ಇತರ ಸಕಲ ಪುರಷಾರ್ಥಗಳಿಗಿಂತ ಅಧಿಕವಾದುದು ಹೀಗೆ ಅತ್ಯಂತ ಮೇಲಾದ ಪುರುಷಾರ್ಥವಾದ ಭಕ್ತಿಯೋಗವನ್ನು ಸಾಧಿಸಿಕೊಡುವುದರಿಂದ ಈ ಆತ್ಮಚಿಂತನರೂಪ ಧ್ಯಾನದಿಂದ ಕೂಡಿರುವ ಕರ್ಮಯೋಗದ ಮಹಾತ್ಮೆಯು ಬಹಳ ಅಧಿಕವಾದುದು ಇಂತಹ ಶ್ರೇಷ್ಠವಾದ ಯೋಗವನ್ನು ಆಚರಿಸುವವನು ಫಲಾಸಕ್ತಿಯಿಂದ ಕೂಡಿರುವ ಕೇವಲ ತಪೋನಿಷ್ಠರಿಗಿಂತಲೂ, ಕೇವಲ ಜ್ಞಾನಿಗಿಂತಲೂ ಮತ್ತು ಕಾಮ್ಯ ಕರ್ಮಿಗಳಿಗಿಂತಲೂ ಶ್ರೇಷ್ಠನು ಅಂದರೆ ತಪಸ್ಸನ್ನೂ, ಜ್ಞಾನಾಭ್ಯಾಸಗಳನ್ನೂ ಸಕಲ ಕರ್ಮಗಳನ್ನೂ ಫಲಾಭಿಸಂಧಿ ರಹಿತನಾಗಿ, ಆತ್ಮ ಸ್ವರೂಪ ಚಿಂತನದೊಂದಿಗೆ ಅನುಷ್ಠಿಸುವವನು, ಕೇವಲ ಫಲಕ್ಕಾಗಿ ಅವುಗಳನ್ನು ಅನುಷ್ಠಿಸುವ ಅಧಿಕಾರಿಗಿಂತ ಅತ್ಯಂತ ಮೇಲಾದವನು ಎಂದು ಅಭಿಪ್ರಾಯ

## 5) ಆತ್ಮಚಿಂತನ ರೂಪಧ್ಯಾನ ಯೋಗಕ್ಕಿಂತ ಪರಮಾತ್ಮಚಿಂತನ ರೂಪ ಭಕ್ತಿಯೋಗದ ಶ್ರೇಷ್ಠತೆ

(ಶ್ಲೋಕ 47)

ಇಲ್ಲಿಯವರೆಗೆ ಅಂದರೆ 2 ನೆಯ ಅಧ್ಯಾಯದಿಂದ ಪ್ರಾರಂಭಿಸಿ 6 ನೆಯ ಅಧ್ಯಾಯ ಪೂರ್ತಿ ಪರವಿದ್ಯೆಗೆ (ಭಗವಂತನ ಸ್ವರೂಪ ಜ್ಞಾನಕ್ಕೆ) ಅಂಗಭೂತವಾದ ಪ್ರತ್ಯಗಾತ್ಮದರ್ಶನವು (ಜೀವಾತ್ಮ ಸ್ವರೂಪಜ್ಞಾನವು) ಹೇಳಲ್ಪಟ್ಟಿತು ಇನ್ನು ಮುಂದೆ ಅಂದರೆ 7 ನೆಯ ಅಧ್ಯಾಯದಿಂದ ಭಕ್ತಿಯೋಗವು ವಿವರಿಸಲ್ಪಡುತ್ತದೆ ಅದರ ಪ್ರಸ್ತಾವನೆಯು 6 ನೆಯ ಅಧ್ಯಾಯದ ಈ 47 ನೆಯ ಶ್ಲೋಕದಿಂದ ಮಾಡಲ್ಪಟ್ಟಿದೆ.

**ಶ್ಲೋಕ 47**—"ಶ್ರದ್ಧಾವಂತನಾಗಿ, ಪರಮಾತ್ಮನಾದ ನನ್ನಲ್ಲಿ ಸಕ್ತವಾದ ಮನಸ್ಸುಳ್ಳವನಾಗಿ ಯಾರು ನನ್ನನ್ನು ಭಜಿಸುತ್ತಾನೆಯೋ ಅವನು ಸಮಸ್ತಯೋಗಿಗಳಿಗಿಂತ ಶ್ರೇಷ್ಠತಮನೆಂದು ನನ್ನ ಅಭಿಪ್ರಾಯ—

ಹಿಂದೆ ಹೇಳಿದ ಸಮಸ್ತಯೋಗಿಗಳೆಲ್ಲರಿಗಿಂತಲೂ ಮುಂದಿನ ಷಟ್ಕದಲ್ಲಿ ಹೇಳಲ್ಪಡುವ ಭಕ್ತಿಯೋಗಿಯೇ ಅತ್ಯಂತ ಶ್ರೇಷ್ಠನಾದ ಯೋಗಿಯು ಅವನಿಗೂ ಇತರರಿಗೂ ಎಷ್ಟರಮಟ್ಟಿಗೆ ವ್ಯತ್ಯಾಸವಿದೆ ಎಂದರೆ ಮೇರು ಪರ್ವತಕ್ಕೂ, ಸಾಸಿವೆಕಾಳುಗಳಿಗೂ ಇರುವಷ್ಟು ಇರುವ ಅಂತರವಿದೆ ಇತರಯೋಗಿಗಳಲ್ಲಿ ಒಬ್ಬೊಬ್ಬರಿಗೆ ಇರುವ ತಾರತಮ್ಯವನ್ನು ಸಾಸಿವೆಕಾಳುಗಳಲ್ಲಿ ಒಂದಕ್ಕೊಂದಕ್ಕೆ ಗಾತ್ರದಲ್ಲಿ ಇರುವ ಪರಸ್ಪರ ವ್ಯತ್ಯಾಸಕ್ಕೆ ಹೋಲಿಸಬಹುದು ಆದರೆ ಇತರ ಯೋಗಿಗಳಿಗೂ, ಭಗವಂತನ ಧ್ಯಾನ ಮಾಡುವ ಭಕ್ತಿಯೋಗಿಗೂ ಇರುವ ಅಂತರವನ್ನು ಇಷ್ಟಿಷ್ಟೆಂದು ಹೇಳಲಾಗುವುದಿಲ್ಲ ಇತರ ಯೋಗಿಗಳಲ್ಲೆಲ್ಲಾ ಆತ್ಮಸ್ವರೂಪಚಿಂತನೆ ಮಾಡುವ ಕರ್ಮಯೋಗಿಯೇ ಅತ್ಯಂತ ಶ್ರೇಷ್ಠನು ಎಂದು ಮೇಲೆ ಹೇಳಿದೆ. ಅಂತಹ ಅತ್ಯಂತ ಶ್ರೇಷ್ಠನಾದ ಅವನಿಗಿಂತ ಭಗವತ್ ಧ್ಯಾನ ಮಾಡುವ ಭಕ್ತಿಯೋಗಿಯು ಅತ್ಯಂತ ಶ್ರೇಷ್ಠನಾದವನು ಅವನಿಗೂ ಜೀವಾತ್ಮಸ್ವರೂಪ ಧ್ಯಾನ ಮಾಡುವ ಯೋಗಿಗೂ ಮೇರು ಪರ್ವತಕ್ಕೂ, ಸಾಸಿವೆಕಾಳಿಗೂ ಇರುವಷ್ಟು ಅಂತರವಿದೆ ಇಷ್ಟೊಂದು ಅಂತರವಿರಲು ಕಾರಣವೇನೆಂದರೆ—ಸರ್ವೇಶ್ವರನಾದ ಪರಮಾತ್ಮನು ಅನಂತ ವಿಭೂತಿಗಳಿಂದಲೂ ಐಶ್ವರ್ಯಗಳಿಂದಲೂ ಕಲ್ಯಾಣ ಗುಣಗಳಿಂದಲೂ

ಕೂಡಿ ಜೀವಾತ್ಮನಿಗಿಂತ ಅತ್ಯಂತ ಮೇಲಾದವನಾಗಿದ್ದಾನೆ ಪರಮಾತ್ಮನಿಗೂ ಜೀವಾತ್ಮನಿಗೂ ಇರುವ ಅಂತರವನ್ನು ಇಷ್ಟೆಂದು ಅಳತೆ ಮಾಡಿ ಹೇಳಲಾಗುವುದಿಲ್ಲ ಆದರಿಂದ ಜೀವಾತ್ಮ ಸಾಕ್ಷಾತ್ಕಾರಕ್ಕಿಂತ ಪರಮಾತ್ಮ ಸಾಕ್ಷಾತ್ಕಾರವು ಅತ್ಯಂತಮೇಲಾದುದು. ಆದ್ದರಿಂದ ನನ್ನಲ್ಲಿ ಅತ್ಯಂತ ಪ್ರೀತಿ ಹೊಂದಿ, ನಾನಲ್ಲದೆ ಬೇರೆ ಯಾರೂ ತನಗೆ ಧಾರಕರಲ್ಲವೆಂಬ ಸ್ವಭಾವವುಳ್ಳವನಾಗಿ, ನನ್ನಲ್ಲೇ ಸಕ್ತವಾದ ಮನಸ್ಸುಳ್ಳವನಾಗಿ ನನಲ್ಲಿ ಅತ್ಯಂತ ಪಚ್ಛಾದ ಭಕ್ತಿ ಹೊಂದಿ, ಅತ್ಯಂತ ಶ್ರದ್ಧೆಯಿಂದ ಭಕ್ತಿಯೋಗಾಭ್ಯಾಸದಲ್ಲಿ ನಿರತನಾಗಿ ನನ್ನನ್ನು ಯಾವನು ಉಪಾಸಿಸುತ್ತಾನೋ ಅವನೇ ಸಮಸ್ತ ಯೋಗಿಗಳಿಗಿಂತ ಶ್ರೇಷ್ಠತಮನೆಂದು ನನ್ನ ಅಭಿಪ್ರಾಯ—ಎಂದು ಶ್ರೀಕೃಷ್ಣಪರಮಾತ್ಮನೇ ಹೇಳಿದ್ದಾನೆ "ಮಾಂ ಭಜತೆ"—ಅಂದರೆ ನನ್ನ ಉತ್ಕೃಷ್ಟವಾದ ಸ್ವರೂಪವನ್ನು ಯಾವನು ಭಜಿಸುತ್ತಾನೋ ಅವನೇ ಶ್ರೇಷ್ಠತಮನು ಎಂದು ಹೇಳಿದ್ದಾನೆ

ಇಲ್ಲಿ "**ಮಾಂ**" ಎಂಬ ಪದಕ್ಕೆ ವ್ಯಾಖ್ಯಾನವಾಗಿ ಮುಂದಿನ ಎರಡು ಷಟ್ಕಗಳಲ್ಲಿ ತಿಳಿಸಿರುವ ಪರಮಾತ್ಮನ ಸ್ವರೂಪವನ್ನು ಮಹಾ ಆಚಾರ್ಯರುಗಳು ಸಂಗ್ರಹವಾಗಿ ತಿಳಿಸಿದ್ದಾರೆ 'ಮಾಂ'—ಎಂದರೆ 'ನನ್ನನ್ನು' ಎಂದು ಅರ್ಥ-ತಾನು ಎಂಥಹವನು ಎಂದರೆ-ವಸುದೇವನ ಮನೆಯಲ್ಲಿ ಕೃಷ್ಣನಾಗಿ ಅವತರಿಸಿದ್ದರೂ ತಾನು ಜಗತ್ಸೃಷ್ಟಿ ಸ್ಥಿತಿಲಯಾದಿ ಕಾರ್ಯಗಳಿಂದ ಕೂಡಿದ ಪರತ್ವ, ಹೇಯಗುಣರಹಿತತ್ವ, ಕಲ್ಯಾಣ ಗುಣಭರಿತತ್ವ, ವಿಭವ ಐಶ್ವರ್ಯ ಯುಕ್ತತ್ವ, ಆಶ್ರಯೋಚಿತವಾದ ಕೃಪೆ ಸೌಲಭ್ಯ ಸೌಶೀಲ್ಯ ವಾತ್ಸಲ್ಯ ಮುಂತಾದ ಗುಣಗಳಿಂದ ಕೂಡಿದ ಸರ್ವಲೋಕ ಶರಣ್ಯತ್ವ—ಇವೇ ಮುಂತಾದ ಗುಣಗಳಿಂದ ಕೂಡಿದ ಪುರುಷೋತ್ತಮನು ಎಂಬುದನ್ನು ಮುಂದಿನ ಅಧ್ಯಾಯಗಳಲ್ಲಿ ಶ್ರೀಕೃಷ್ಣ ಪ್ರತಿಪಾದಿಸಿದ್ದಾನೆ ಅದರ ಸಾರಾಂಶ ವೇನೆಂದರೆ —

ವಿಚಿತ್ರವೂ ಅನಂತವೂ ಆದ ಭೋಗ್ಯ ಪದಾರ್ಥಗಳಿಂದ ಕೂಡಿದ ಪ್ರಕೃತಿಯೇನು, ಭೋಕ್ತೃವರ್ಗಗಳಾದ ನಾನಾ ವಿಧ ಪ್ರಾಣಿಗಳೇನು, ಪ್ರಾಣಿಗಳು ಪ್ರಕೃತಿಯನ್ನು ಅನುಭವಿಸಲು ಬೇಕಾದ ಭೋಗಸಾಮಗ್ರಿಗಳೇನು ಮತ್ತು ಭೋಗಸ್ಥಾನಗಳೇನು, ಇವುಗಳಿಂದ ಪರಿಪೂರ್ಣವಾಗಿ ತುಂಬಿರುವ ಸಮಸ್ತ ಜಗತ್ತಿನ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣನಾಗಿ, ಅದರೊಂದಿಗೆ ಸಂಬಂಧ ಹೊಂದಿದ್ದರೂ ಅದರಲ್ಲಿರುವ ದೋಷಗಳೊಂದಿಗೆ ಸ್ವಲ್ಪವೂ ಸ್ಪರ್ಶವಿಲ್ಲದವನಾಗಿ, ಅವಧಿಯಿಲ್ಲದ ಅತಿಶಯ ವಾದ ಜ್ಞಾನಬಲ ಐಶ್ವರ್ಯ ವೀರ್ಯ ಶಕ್ತಿ ಮತ್ತು ತೇಜಸ್ಸು ಮುಂತಾದ ಅಸಂಖ್ಯವಾದ ಕಲ್ಯಾಣಗುಣಗಳ ಸಮೂಹಕ್ಕೆ ನಿಧಿಯಾಗಿ ಹೇಯಗುಣರಹಿತನೂ ಕಲ್ಯಾಣಗುಣಭರಿತನೂ ಆಗಿರುವ; ತನ್ನ ಇಷ್ಟಕ್ಕೆ ಅನುರೂಪವಾದ, ಏಕರೂಪವಾದ, ಚಿಂತಿಸಲಶಕ್ಯವಾದ, ದಿವ್ಯವಾದ, ಅದ್ಭುತವಾಗಿ ಅತ್ಯಾಶ್ಚರ್ಯಕರವಾದ, ನಿತ್ಯವಾದ, ದೋಷರಹಿತವಾಗಿ ನಿರ್ಮಲವಾದ, ಅತ್ಯಂತ ಉಜ್ವಲವಾದ, ಸೌಂದರ್ಯ ಸೌಗಂಧ್ಯ ಸೌಕುಮಾರ್ಯ ಲಾವಣ್ಯ ಯೌವನವೇ ಮುಂತಾದ ಅನೇಕ ಗುಣಗಳಿಗೆ ಮಹಾಸಾಗರದಂತಿರುವ ದಿವ್ಯ ಮಂಗಳ ರೂಪವನ್ನು ಹೊಂದಿರುವ, ಮನಸ್ಸಿನಿಂದ ಇಷ್ಟೆಂದು ಊಹಿಸಲು ಮತ್ತು ವಾಕ್ಕಿನಿಂದ ಇಷ್ಟೆಂದು ವರ್ಣಿಸಲು ಅಸಾಧ್ಯವಾದ ಸ್ವರೂಪ ಸ್ವಭಾವವುಳ್ಳವನಾಗಿರುವ (ಮನಸ್ಸು ವಾಕ್ಕುಗಳಿಗೆ ಅಗೋಚರವಾದ ಸ್ವರೂಪ ಸ್ವಭಾವಗಳನ್ನು ಪಡೆದಿರುವ), ಆದಾಗ್ಯೂ ಅಪಾರವಾದ ಕಾರುಣ್ಯ ಸೌಶೀಲ್ಯ ವಾತ್ಸಲ್ಯ ಔದಾರ್ಯ ಐಶ್ವರ್ಯಾದಿ ಗುಣಗಳಿಗೆ ಸಮುದ್ರ ಪ್ರಾಯನಾಗಿರುವ, ಆ ಕಾರಣದಿಂದ ಯಾವ ವಿಧವಾದ ವಿಶೇಷವನ್ನೂ ಯೋಚಿಸದ ಸಮಸ್ತ ಲೋಕದ ಶರಣಾಗತರನ್ನೂ ರಕ್ಷಿಸುವ, ಆಶ್ರಿತರ ದುಃಖವನ್ನು ಹೋಗಲಾಡಿಸುವ, ಆಶ್ರಿತರಲ್ಲಿ ಅತ್ಯಂತ ವಾತ್ಸಲ್ಯವುಳ್ಳವನಾಗಿರುವ, ತನ್ನ ಉತ್ಕೃಷ್ಟವಾದ ಸ್ವರೂಪ ಸ್ವಭಾವಗಳನ್ನು ಸ್ವಲ್ಪವೂ ತ್ಯಜಿಸದ ವಸುದೇವನ ಮನೆಯಲ್ಲಿ ಕೃಷ್ಣನಾಗಿ ಅವತರಿಸಿ ಸಮಸ್ತ ಮಾನವರ ಕಣ್ಣಿಗೆ ಗೋಚರನಾಗಿರುವ, ಅಪರಿಮಿತವೂ ಅತಿಶಯವೂ ಆದ ತೇಜಸ್ಸಿನಿಂದ ಸಮಸ್ತ ಜಗತ್ತನ್ನೂ ಪ್ರಕಾಶಗೊಳಿಸುತ್ತಿರುವ, ತನ್ನಕಾಂತಿಯಿಂದ ಜಗತ್ತಿನ ಸಮಸ್ತ ತಾಪಗಳನ್ನೂ ಹೋಗಲಾಡಿಸುತ್ತಿರುವ-

'**ಮಾಂ**' ಇಂತಹ ನನ್ನನ್ನು ಯಾವ ಯೋಗಿಯು ಭಜಿಸುತ್ತಾನೆಯೋ, ಸೇವಿಸುತ್ತಾನೆಯೋ, ಉಪಾಸಿಸುತ್ತಾನೆಯೋ ಅವನೇ ಇತರ ಎಲ್ಲಾ ಯೋಗಿಗಳಿಗಿಂತ ಅತ್ಯಂತ ಶ್ರೇಷ್ಠನು ಎಂದು ಸರ್ವಕಾಲದಲ್ಲೂ ಸಮಸ್ತವನ್ನೂ ಯಥಾರ್ಥವಾಗಿ ಸ್ವಯಂ ನಾನಾಗಿಯೇ ಸಾಕ್ಷಾತ್ಕರಿಸಲು ಶಕ್ತನಾದ ನಾನು ತಿಳಿಯುತ್ತೇನೆ ಎಂದು ಶ್ರೀ ಕೃಷ್ಣ ಹೇಳಿದ್ದಾನೆ. ಆದ್ದರಿಂದ ಭಗವಂತನ ಧ್ಯಾನ ಉಪಾಸನೆ ಮಾಡುವ ಯೋಗಿಯೇ ಎಲ್ಲರಿಗಿಂತಲೂ ಶ್ರೇಷ್ಠನು ಮತ್ತು ಇತರ ಯೋಗಗಳಿಗಿಂತ ಶ್ರೇಷ್ಠವಾದ ಆತ್ಮಚಿಂತನ ರೂಪಧ್ಯಾನ ಯೋಗಕ್ಕಿಂತ ಪರಮಾತ್ಮ ಚಿಂತನರೂಪ ಭಕ್ತಿಯೋಗವೇ ಅತ್ಯಂತ ಶ್ರೇಷ್ಠವಾದುದು ಎಂದು ಹೇಳಿ 6 ನೆಯ ಅಧ್ಯಾಯವನ್ನು ಮುಕ್ತಾಯಗೊಳಿಸಿ ಮುಂದಿನ 6 ಅಧ್ಯಾಯಗಳಲ್ಲಿ ,ಭಕ್ತಿಯೋಗವನ್ನು ಶ್ರೀಕೃಷ್ಣ ವಿಶದವಾಗಿ ಪ್ರತಿಪಾದಿಸುತ್ತಾನೆ

**ಈ ಅಧ್ಯಾಯದ ಸಾರಾಂಶ—**

ಈ ಅಧ್ಯಾಯದಲ್ಲಿ ಕರ್ಮಯೋಗಿಯು ಅನುಷ್ಠಿಸುವ ಆತ್ಮಚಿಂತನರೂಪ ಧ್ಯಾನಯೋಗದ ವಿವರಣೆಯಿದೆ ಇಲ್ಲಿ ಮುಖ್ಯವಾಗಿ ಐದು ವಿಷಯಗಳು ತಿಳಿಸಲ್ಪಟ್ಟಿವೆ

**I ಕರ್ಮಯೋಗಿಯು ಅನುಷ್ಠಿಸುವ ಆತ್ಮಚಿಂತನ ರೂಪ ಧ್ಯಾನ ಯೋಗಾಭ್ಯಾಸ ಕ್ರಮವು** (ಶ್ಲೋಕಗಳು 1 ರಿಂದ 28)

**(1) ಆತ್ಮಚಿಂತನ ರೂಪ ಧ್ಯಾನ ಯೋಗಾಭ್ಯಾಸ ಮಾಡಲು ಇಚ್ಛೆಯುಳ್ಳವನು ಮೊದಲು ಕರ್ಮಯೋಗ ವನ್ನು ಅನುಷ್ಠಿಸಿ ಅದರ ಮೂಲಕ ಧ್ಯಾನಯೋಗಕ್ಕೆ ಅರ್ಹತೆ ಪಡೆಯಬೇಕು.** (ಶ್ಲೋಕಗಳು 1–4)

ಫಲಾಸಕ್ತಿ ರಹಿತವಾಗಿ ಕರ್ಮ ಮಾಡುವ ಕರ್ಮಯೋಗಿಯು ಜ್ಞಾನಯೋಗ ನಿಷ್ಠನಾದ ಸನ್ಯಾಸಿಯೂ ಮತ್ತು ಕರ್ಮಯೋಗಿಯೂ ಎರಡೂ ಆಗಿದ್ದಾನೆ. ಏತಕ್ಕೆಂದರೆ ಅವನು ಫಲಾಸಕ್ತಿ ರಹಿತನಾಗಿ ಆತ್ಮ ಸ್ವರೂಪ ಜ್ಞಾನಾನುಸಂಧಾನದೊಂದಿಗೆ ಕರ್ಮ ಮಾಡುತ್ತಾನೆ. ಆದ್ದರಿಂದ ಅವನು ಸನ್ಯಾಸಿ ಅಂದರೆ ಜ್ಞಾನಯೋಗ ನಿಷ್ಠನಾಗು ತ್ತಾನೆ. ಫಲಾಸಕ್ತಿ ರಹಿತನಾಗಿ ಅಕರ್ತೃತ್ವಾನು ಸಂಧಾನ ದೊಂದಿಗೆ ಕರ್ಮಮಾಡುವುದರಿಂದ ಅವನು ಕರ್ಮಯೋಗಿಯೂ ಆಗಿದ್ದಾನೆ. ಜ್ಞಾನಯೋಗ ನಿಷ್ಠನಾದ ಸನ್ಯಾಸಿಗೆ ಜ್ಞಾನಾನು ಷ್ಠಾನ ಒಂದು ಮಾತ್ರ ಉಂಟು. ಆದರೆ ಕರ್ಮಯೋಗಿಗೆ ಕರ್ಮಾನು ಷ್ಠಾನ, ಜ್ಞಾನಾನುಷ್ಠಾನ ಎರಡೂ ಉಂಟು. ಕರ್ಮಯೋಗಿಯು ಕಾಮ ಸಂಕಲ್ಪವರ್ಜಿತನಾಗಿ ಕರ್ಮಮಾಡುವುದರಿಂದ ಕರ್ಮಯೋಗ ಎಂದರೂ ಕರ್ಮ ಸನ್ಯಾಸ ಎಂದರೂ ಎರಡೂ ಒಂದೇ. ಕರ್ಮಯೋಗವು ಪ್ರಮಾದ ರಹಿತವಾಗಿ ಆತ್ಮ ಸಾಕ್ಷಾತ್ಕಾರವನ್ನು ಸಾಧಿಸಿ ಕೊಡುವುದರಿಂದ, ಜ್ಞಾನ ಯೋಗ ವನ್ನು ದೃಢವಾಗಿ ಹೊಂದಿ ಯೋಗಾರೂಢನಾಗುವವರೆಗೂ ಕರ್ಮ ಯೋಗವನ್ನು ಆಚರಿಸಲೇಬೇಕು. ಕರ್ಮಯೋಗಿಯು ಆತುರಪಟ್ಟು ಕರ್ಮ ಸನ್ಯಾಸರೂಪವಾದ ಜ್ಞಾನಯೋಗವನ್ನು ಸ್ವೀಕರಿಸಕೂಡದು. ಕರ್ಮಯೋಗದ ಆಚರಣೆಯ ಮೂಲಕ ಮೊದಲು ಸಮಸ್ತ ಕಾಮ ಗಳನ್ನೂ ಸಂಕಲ್ಪಗಳನ್ನೂ ತ್ಯಾಗಮಾಡುವ ಅರ್ಹತೆ ಪಡೆಯ ಬೇಕು. ತದನಂತರ ಅವನಿಗೆ ಜ್ಞಾನಯೋಗವನ್ನು ಅನುಷ್ಠಿಸುವ ಅರ್ಹತೆ ಉಂಟಾಗುತ್ತದೆ.

**(2) ಧ್ಯಾನ ಯೋಗವನ್ನು ಆರಂಭಿಸುವುದಕ್ಕೆ ಮೊದಲು ಮನಸ್ಸನ್ನು ನಿಗ್ರಹಿಸಬೇಕು—** (ಶ್ಲೋಕಗಳು—5–6)

ಮನಸ್ಸನ್ನು ವಿಷಯಗಳಲ್ಲಿ ನುಗ್ಗದಂತೆ ತಡೆದು ಆತ್ಮನ ಕಡೆಗೆ ತಿರುಗುವಂತೆ ಮಾಡಬೇಕು. ವಿಷಯಾಸಕ್ತಿಯಿಂದ ಕೂಡಿ ರುವ ಮನಸ್ಸು ಬಂಧಕ್ಕ ಕಾರಣವಾಗಿ ಆತ್ಮನಿಗೆ ಶತ್ರುವಾಗಿದೆ ಮತ್ತು ವಿಷಯಾಸಕ್ತಿ ರಹಿತವಾದ ಮನಸ್ಸು ಮುಕ್ತಿಗೆ ಕಾರಣ ವಾಗಿ ಆತ್ಮನಿಗೆ ಬಂಧುವಾಗಿದೆ.

**(3) ಧ್ಯಾನಯೋಗವನ್ನು ಆರಂಭಿಸಲು ಯೋಗ್ಯ ವಾದ ಅವಸ್ಥೆಯ ವರ್ಣನೆ** (ಶ್ಲೋಕಗಳು 7–8–9)

ಆತ್ಮಧ್ಯಾನಕ್ಕೆ ಅರ್ಹತೆ ಪಡೆಯಬೇಕಾದರೆ ಮುಖ್ಯವಾಗಿ ಮೂರು ಗುಣಗಳನ್ನು ಹೊಂದಬೇಕು. (1) ಶೀತ ಉಷ್ಣ, ಸುಖದುಃಖ ಮತ್ತು ಮಾನ ಅವಮಾನ ಇವುಗಳಲ್ಲಿ ಜಯಿಸಲ್ಪಟ್ಟ ಮನಸ್ಸುಳ್ಳವನಾಗಿ ಪ್ರಶಾಂತನಾಗಿರಬೇಕು. (11) ಅನಂತರ ಇಂದ್ರಿಯಗಳನ್ನು ಜಯಿಸಬೇಕು. ಮಣ್ಣು, ಕಲ್ಲು, ಚಿನ್ನ ಇವು ಗಳಲ್ಲಿ ಸಮಭಾವ ಹೊಂದಿ ವಿಷಯಗಳಲ್ಲಿ ಆಸಕ್ತಿರಹಿತನಾಗಬೇಕು. ಜ್ಞಾನ ವಿಜ್ಞಾನಗಳಲ್ಲಿ ತೃಪ್ತನಾಗಿರಬೇಕು. (111) ಎಲ್ಲಾ ಮಾನವರಲ್ಲೂ ದ್ವೇಷವಾಗಲಿ ಅಸೂಯೆಯಾಗಲಿ ಇಲ್ಲದವನಾಗಿ, ಸಮಭಾವದಿಂದ ಇರಬೇಕು. ಕರ್ಮಯೋಗಿಯು ಆತ್ಮಾನುಸಂಧಾನ ಒಂದನ್ನೇ ಪ್ರಯೋಜನವಾಗಿ ಹೊಂದಿರುವುದ ರಿಂದ ಶೀತೋಷ್ಣಾದಿಗಳಲ್ಲೂ, ಕಲ್ಲು ಮಣ್ಣು ಚಿನ್ನ ಮುಂತಾದ ಪದಾರ್ಥಗಳಲ್ಲೂ, ಶತ್ರು ಮಿತ್ರ ಮುಂತಾದ ಸಮಸ್ತ ಮಾನವ ರಲ್ಲೂ ಇಷ್ಟ ಅನಿಷ್ಟವಿಲ್ಲದ ಸಮಬುದ್ಧಿ ಹೊಂದಿದವನಾಗಿ ಇರು ತ್ತಾನೆ. ಮೇಲೆ ವಿವರಿಸಿರುವ ಗುಣಗಳಿಂದ ಕೂಡಿದ ಅವಸ್ಥೆ ಉಳ್ಳವನೇ ಧ್ಯಾನಾಭ್ಯಾಸಕ್ಕೆ ಅರ್ಹನು.

**(4) ಧ್ಯಾನ ಯೋಗವನ್ನು ಅನುಷ್ಠಿಸುವ ಕ್ರಮ** (ಶ್ಲೋಕಗಳು 10–18)

(1 ಧ್ಯಾನ ಮಾಡುವ ಕಾಲದಲ್ಲಿ ಅನುಷ್ಠಿಸಬೇಕಾದ ಅಭ್ಯಾಸಗಳು—

**ಶರೀರಕ್ಕೆ ಸಂಬಂಧಪಟ್ಟ ಅಭ್ಯಾಸಗಳು—**

ಧ್ಯಾನ ಮಾಡಲು ಯೋಗ್ಯವಾದ ಸ್ಥಳ-ಜನವರ್ಜಿತವಾಗಿ ನಿಶ್ಶಬ್ದವಾಗಿ ಇರುವ ಶುಚಿಯಾದ ಸ್ಥಳದಲ್ಲಿ, ಅಧಿಕ ಎತ್ತರವಿಲ್ಲದ ಅತಿಕೆಳಗೆ ಇಲ್ಲದ ಜಾಗದಲ್ಲಿ, ವಸ್ತ್ರ, ಕೃಷ್ಣಾಜಿನ, ದರ್ಭೆ ಇವು ಗಳನ್ನು ಒಂದರ ಮೇಲೊಂದನ್ನು ಹಾಸಿಕೊಂಡು—ಒಂದು ಸ್ಥಿರ ವಾದ ಆಸನವನ್ನು ಸ್ಥಾಪಿಸಿಕೊಳ್ಳಬೇಕು.

ಧ್ಯಾನ ಯೋಗಕ್ಕೆ ಕುಳಿತುಕೊಳ್ಳುವ ರೀತಿ—ಧ್ಯಾನಯೋಗ ವನ್ನು ಕುಳಿತುಕೊಂಡೇ ಮಾಡಬೇಕು. ಶರೀರ, ಕತ್ತು, ತಲೆ ಇವೆಲ್ಲವನ್ನೂ ಸಮವಾಗಿ ಅಲ್ಲಾಡದಂತೆ ಸ್ಥಿರವಾಗಿ ನಿಲ್ಲಿಸಿಕೊಂಡು ಕುಳಿತುಕೊಳ್ಳಬೇಕು. ಧ್ಯಾನಕಾಲದಲ್ಲಿ ಯಾವ ದಿಕ್ಕನ್ನೂ ನೋಡದೆ ಮೂಗಿನ ಅಗ್ರಭಾಗ ಒಂದನ್ನೇ ನೋಡುತ್ತಾ ಇರಬೇಕು.

**ಮನಸ್ಸಿಗೆ ಸಂಬಂಧ ಪಟ್ಟ ಅಭ್ಯಾಸಗಳು** :—

ಮನಸ್ಸನ್ನೂ, ಬುದ್ಧಿಯನ್ನೂ ವಶಪಡಿಸಿ ಕೊಂಡಿರ ಬೇಕು ಆತ್ಮವತಿರಿಕ್ತವಾದ ವಸ್ತುಗಳಲ್ಲಿ ಆಸಕ್ತಿಯಾಗಲಿ, ಅದು ತನ್ನದೆಂಬ ಮಮಕಾರವಾಗಲಿ ಇರಕೂಡದು, ಬುದ್ಧಿ ಮತ್ತು ಇಂದ್ರಿಯಗಳ ಇತರ ವ್ಯಾಪಾರಗಳನ್ನು ತಡೆದು, ಮನಸ್ಸು ಚಂಚಲತೆಯಿಲ್ಲದ ಯೋಗ ಒಂದರಲ್ಲೇ ಏಕಾಗ್ರವಾಗಿ ನಿಲ್ಲುವಂತೆ ಮಾಡಬೇಕು, ಮನಸ್ಸನ್ನು ನಿಗ್ರಹಿಸಿ ಪ್ರಶಾಂತವಾಗಿಟ್ಟುಕೊಳ್ಳಬೇಕು ಮನಸ್ಸಿನಲ್ಲಿ ಯಾವ ವಿಧವಾದ ಭಯವಿರಕೂಡದು ಅದು ಭಯರಹಿತವಾಗಿ ಇರಬೇಕು ಪ್ರಾಪಂಚಿಕ ವಿಷಯಗಳಿಂದ ಸೆಳೆದ ಮನಸ್ಸನ್ನು ಪರಮಾತ್ಮನ ಚಿಂತನೆಯಲ್ಲಿ ನಿಲ್ಲಿಸಿ ತದನಂತರ ಧ್ಯಾನಯೋಗವನ್ನು ಪ್ರಾರಂಭಿಸಬೇಕು ಇದು ಬಹಳ ಮುಖ್ಯವಾದ ಅಭ್ಯಾಸ ಆತ್ಮಸಾಕ್ಷಾತ್ಕಾರ ಧ್ಯಾನಯೋಗವನ್ನು ಆರಂಭಿಸುವುದಕ್ಕೆ ಮೊದಲು ಮನಸ್ಸನ್ನು ನಿರ್ಮಲಗೊಳಿಸಿಕೊಳ್ಳಬೇಕು ಅದಕ್ಕಾಗಿ ಅದನ್ನ ಮೊದಲು ಶುಭಸ್ಥಾನವಾದ ಭಗವಂತನಲ್ಲಿ ನಿಲ್ಲಿಸಿ, ತದನಂತರ ಧ್ಯಾನಯೋಗವನ್ನು ಪ್ರಾರಂಭಿಸಬೇಕು

(11) ಧ್ಯಾನಯೋಗಿಯು ಸರ್ವಕಾಲದಲ್ಲೂ ಆಚರಿಸಬೇಕಾದ ಇತರ ಅಭ್ಯಾಸಗಳು ಮತ್ತು ನಿಯಮಗಳು

ಧ್ಯಾನಯೋಗಿಯು ಬ್ರಹ್ಮಚರ್ಯವ್ರತಪಾಲನೆ ಮಾಡಬೇಕು, ಮಿತವಾಗಿ ಆಹಾರವನ್ನು ಸೇವಿಸಬೇಕು, ಮಿತವಾದ ವಿಹಾರವುಳ್ಳವನಾಗಿರಬೇಕು, ಮಿತವಾದ ದೇಹಾಯಾಸವುಳ್ಳವನಾಗಿರಬೇಕು, ಮತ್ತು ಮಿತವಾದ ನಿದ್ರೆ ಜಾಗರವುಳ್ಳವನಾಗಿರಬೇಕು

**(5) ಧ್ಯಾನಯೋಗಿಯು ಮನಸ್ಸನ್ನು ಧ್ಯೇಯವಸ್ತುವಿನಲ್ಲಿ ನಿಲ್ಲಿಸುವ ಕ್ರಮ— ಅದರಿಂದ ಅವನಲ್ಲಿ ಉಂಟಾಗುವ ಮಾನಸಿಕ ಪರಿವರ್ತನೆ ಮತ್ತು ಅದರಿಂದ ಅವನಿಗೆ ಲಭಿಸುವ ನಿರತಿಶಯ ಆನಂದದ ವರ್ಣನೆ** (ಶ್ಲೋಕಗಳು 18ರಿಂದ 28)

(1) ಯೋಗಿಯು ಧ್ಯೇಯವಸ್ತುವಿನಲ್ಲಿ ಮನಸ್ಸನ್ನು ನಿಲ್ಲಿಸುವ ಕ್ರಮ (ಶ್ಲೋಕಗಳು 24, 25, 26)— ಧ್ಯಾನಯೋಗವನ್ನು ಅನುಷ್ಠಿಸಬೇಕಾದರೆ ಮೊದಲು ಇಂದ್ರಿಯಗಳನ್ನು ನಿಗ್ರಹಿಸಿ ಅದು ಬಾಹ್ಯಕಾಮ ವಿಷಯಗಳಲ್ಲಿ ಹೋಗದಂತೆ ತಡೆಯಬೇಕು ಅನಂತರ ವಿವೇಕ ಜ್ಞಾನದಿಂದ ಮನಸ್ಸನ್ನು ಸ್ವಲ್ಪಸ್ವಲ್ಪವಾಗಿ ಇತರ ವಿಷಯಗಳ ಕಡೆಗೆ ಹೋಗದಂತೆ ತಡೆದು, ಮತ್ತಾವುದನ್ನೂ ಚಿಂತಿಸದ ಆತ್ಮವಿಷಯದಲ್ಲೇ ಸಕ್ತವಾಗಿರುವಂತೆ ಮಾಡಬೇಕು. ಆದರೆ ಅಸ್ಥಿರವೂ ಚಂಚಲವೂ ಆದ ಮನಸ್ಸು ಆತ್ಮನಲ್ಲೇ ಸ್ಥಿರವಾಗಿ ನಿಲ್ಲದ ಇತರ ವಿಷಯಗಳಲ್ಲಿ ಚಲಿಸುತ್ತಿರುತ್ತದೆ ಅದು ಯಾವ ಯಾವ ವಿಷಯಗಳನ್ನು ಕುರಿತು ಚಲಿಸುತ್ತದೆಂಬೋ, ಆಯಾಯಾ ವಿಷಯಗಳಿಂದ ಮನಸ್ಸನ್ನು ಸೆಳೆದು ಅದು ಆತ್ಮನಲ್ಲೇ ವಶನಾಗುವಂತೆ ಮೇಲೆ ಮೇಲೆ ಅಭ್ಯಾಸಮಾಡುತ್ತಿರಬೇಕು

(11) ಆತ್ಮಚಿಂತನವನ್ನು ಅನುಷ್ಠಿಸುವ ಯೋಗಿಯಲ್ಲಿ ಉಂಟಾಗುವ ಮಾನಸಿಕ ಪರಿವರ್ತನೆ— (ಶ್ಲೋಕಗಳು 18–23) ಆತ್ಮಚಿಂತನದಲ್ಲಿ ನಿರತನಾದ ಯೋಗಿಯ ಚಿತ್ತವು ಏಕಾಗ್ರವಾಗಿ ಆತ್ಮಚಿಂತನೆಯಲ್ಲಿ ಸ್ಥಿರವಾಗಿ ನಿಂತ ಮೇಲೆ ಅವನು ಸಮಸ್ತ ಕಾಮಗಳಲ್ಲಿ ಆಸೆಯಿಲ್ಲದವನಾಗಿ ಯೋಗಾರೂಢನಾಗುವನು. ಗಾಳಿ ಬೀಸದ ಇರುವ ಸ್ಥಳದಲ್ಲಿ ಇಟ್ಟ ದೀಪವು ನಿಶ್ಚಲವಾದ ಪ್ರಕಾಶದೊಂದಿಗೆ ಪ್ರಕಾಶಿಸುವಂತೆ, ಇವನ ಧರ್ಮಭೂತಜ್ಞಾನವು ಯಾವ ಕಡೆಯೂ ಚಲಿಸದ, ನ್ಯೂನತೆಯಿಲ್ಲದೆ ಚೆನ್ನಾಗಿ ಪ್ರಕಾಶಿಸುತ್ತದೆ ಇವನ ಮನಸ್ಸು ಆತ್ಮಚಿಂತನೆಯಲ್ಲಿ ರಮಿಸುತ್ತದೆ, ಇತರ ಯಾವುದನ್ನೂ ಅಪೇಕ್ಷಿಸದ ಆತ್ಮಚಿಂತನದಲ್ಲೇ ಸಂತುಷ್ಟವಾಗಿರುತ್ತದೆ ಹೀಗೆ ಇವನ ಮನಸ್ಸು ಆತ್ಮಚಿಂತನದಲ್ಲೇ ಅತ್ಯಂತ ಸುಖವನ್ನು ಅನುಭವಿಸುತ್ತಾ ಇರುವುದರಿಂದ ಅದು ಯಾವ ಕಾಲದಲ್ಲೂ ಆತ್ಮಚಿಂತನದಿಂದ ವಿಚಲಿತವಾಗುವುದಿಲ್ಲ ಮತ್ತು ಯೋಗದಿಂದ ನಿವೃತ್ತಿ ಹೊಂದಿದಾಗ ಕೂಡ ಮತ್ತೆ ಅದನ್ನೇ ಹೊಂದಬೇಕೆಂಬ ಆಸೆ ಹೊಂದುತ್ತದೆ. ಈ ಯೋಗಿಯು ಗುಣವಂತನಾದ ಪುತ್ರನ ವಿಯೋಗವೇ ಮುಂತಾದ ಅತ್ಯಂತ ದುಃಖವು ಪ್ರಾಪ್ತವಾದಾಗ ಕೂಡ ಯೋಗಾಭ್ಯಾಸವನ್ನು ತ್ಯಜಿಸದೆ ಅನುಷ್ಠಿಸುತ್ತಾನೆ

(111) ಆತ್ಮಚಿಂತನ ಯೋಗವನ್ನು ಅನುಷ್ಠಿಸುವ ಯೋಗಿಗೆ ಲಭಿಸುವ ನಿರತಿಶಯ ಆನಂದ (27–28) ಮನಸ್ಸನ್ನು ವಿಷಯ ಸುಖಗಳ ಕಡೆಗೆ ಹೋಗದಂತೆ ತಡೆದು ಆತ್ಮಚಿಂತನೆಯಲ್ಲಿ ನಿಲ್ಲಿಸುವವನಿಗೆ ನಿರತಿಶಯ ಆನಂದವು ಲಭಿಸುತ್ತದೆ ಅವನು ಆತ್ಮಚಿಂತನವನ್ನು ಸದಾ ಅಭ್ಯಾಸ ಮಾಡುತ್ತಾ ಇರುವುದರಿಂದ ಸಮಸ್ತ ಪ್ರಾಚೀನ ಕರ್ಮಗಳಿಂದ ಮುಕ್ತನಾಗುತ್ತಾನೆ ಮತ್ತು ಅನಂತರ ಬ್ರಹ್ಮಾನುಭವರೂಪವಾದ ಅತ್ಯಂತ ಅಪರಿಮಿತ ಸುಖವನ್ನು ಅನಾಯಾಸವಾಗಿ ಸದಾ ಅನುಭವಿಸುತ್ತಾನೆ

## II ಆತ್ಮಚಿಂತನ ರೂಪ ಧ್ಯಾನಯೋಗ ನಿಷ್ಠರಾದ ಕರ್ಮಯೋಗಿಗಳ ನಾಲ್ಕು ಅವಸ್ಥೆಗಳು –

(ಶ್ಲೋಕಗಳು 29 ರಿಂದ 32)

ಆತ್ಮಚಿಂತನ ರೂಪಧ್ಯಾನ ಯೋಗನಿಷ್ಠನು ನಾಲ್ಕುವಿಧವಾದ ಸಾಮ್ಯಾನುಸಂಧಾನ ಮಾಡುತ್ತಾ ಅವರ ಅನುಭವ ಪಡೆಯುತ್ತಾನೆ

(1) ಜೀವಾತ್ಮರಲ್ಲಿ ಇರುವ ಪರಸ್ಪರ ಸಾಮ್ಯತೆಯ ಅನುಸಂಧಾನವು ಪ್ರಕೃತಿ ವಿಯುಕ್ತ ದಶೆಯಲ್ಲಿ ಜ್ಞಾನಾಕಾರತೆಯಿಂದ ಆತ್ಮರುಗಳೆಲ್ಲಾ ಸಮರಾಗಿದ್ದಾರೆ ಆದ್ದರಿಂದ ಆತ್ಮಸ್ವರೂಪ ಧ್ಯಾನಾನುಷ್ಠಾನದಲ್ಲಿ ನಿರತನಾದ ಕರ್ಮಯೋಗಿಯು ಇದರ ಅನುಭವವನ್ನು ಪಡೆಯುತ್ತಾನೆ ಅಂದರೆ ತನ್ನ ಆತ್ಮನನ್ನು ಇತರ ಸಮಸ್ತ ಜೀವಿಗಳ ಆತ್ಮಕ್ಕೆ ಸಮವಾಗಿಯೂ ಇತರ ಸಮಸ್ತ ಜೀವಿಗಳ ಆತ್ಮನನ್ನು ತನ್ನ ಆತ್ಮಕ್ಕೆ ಸಮವಾಗಿಯೂ ಕಾಣುತ್ತಾನೆ ಇದೇ ಯೋಗಸಿದ್ಧಿಯ ಮೊದಲನೆಯ ಅವಸ್ಥೆ

(II) ಜೀವಾತ್ಮರೆಲ್ಲರಿಗೂ ಪರಮಾತ್ಮನೊಂದಿಗೆ ಇರುವ ಸಾಮ್ಯತೆಯ ಅನುಸಂಧಾನವು — ಪ್ರಕೃತಿವಿಯುಕ್ತ ದಶೆಯಲ್ಲಿ ಆತ್ಮರುಗಳೆಲ್ಲಾ ಪುಣ್ಯ ಪಾಪರಹಿತರಾಗಿರುವುದರಿಂದ ಪರಮಾತ್ಮನೊಂದಿಗೆ ಸಾಮ್ಯತೆ ಪಡೆದಿದ್ದಾರೆ ಆದ್ದರಿಂದ ಆತ್ಮಸ್ವರೂಪ ಧ್ಯಾನಮಾಡುವ ಕರ್ಮಯೋಗಿಯು ಇದರ ಅನುಭವ ಪಡೆದು ಪರಮಾತ್ಮನ ಭಕ್ತನಾಗುತ್ತಾನೆ ಏಕೆಂದರೆ ಪರಸ್ಪರ ಸಮಾನತೆ ಇರುವ ಎರಡು ವಸ್ತುಗಳಲ್ಲಿ ಒಂದು ವಸ್ತುವನ್ನು ನೋಡಿದೊಡನೆಯೇ ಅದರಂತೆಯೇ ಇರುವ ಇನ್ನೊಂದು ವಸ್ತುವನ್ನು ಸ್ವಲ್ಪವಟ್ಟಿಗೆ ನೋಡಿದಂತೆ ಆಗುತ್ತದೆಯಲ್ಲವೇ ? ಅದೇ ರೀತಿ ತನ್ನ ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸಿರುವ ಯೋಗಿಗೆ ಅದರೊಂದಿಗೆ ಸಮಾನತೆ ಹೊಂದಿರುವ ಪರಮಾತ್ಮ ಸ್ವರೂಪ ಸಾಕ್ಷಾತ್ಕಾರವೂ ಸ್ವಲ್ಪಮಟ್ಟಿಗೆ ಆಗಿಯೇ ಆಗುತ್ತದೆ. ಆದ್ದರಿಂದ ಅವನು ಪುಣ್ಯಪಾಪರಹಿತರಾದ ಸಮಸ್ತ ಆತ್ಮರಲ್ಲೂ ಮತ್ತು ತನ್ನ ಆತ್ಮರಲ್ಲೂ ಪರಮಾತ್ಮನ ಸಮಾನತೆಯನ್ನು ನೋಡುತ್ತಲೂ ಇರುತ್ತಾನೆ ಈ ಅವಸ್ಥೆಯನ್ನು ಪಡೆದ ಕರ್ಮಯೋಗಿಯು ಪರಮಾತ್ಮನಲ್ಲಿ ಭಕ್ತಿಯನ್ನು ಹೊಂದುತ್ತಾನೆ ಇದು ಯೋಗಸಿದ್ಧಿಯ ಎರಡನೆಯ ಅವಸ್ಥೆ

III) ಸಮಸ್ತ ಆತ್ಮರುಗಳೂ ಶರೀರಾತ್ಮಭಾವದಿಂದ ಪರಮಾತ್ಮನೊಂದಿಗೆ ಐಕ್ಯವನಿಸಿರುವ ಸಾಮ್ಯಾನುಸಂಧಾನವು—

ಪರಮಾತ್ಮನು ಎಲ್ಲ ವಸ್ತುಗಳಲ್ಲಿಯೂ ಅಂತರ್ಯಾಮಿಯಾಗಿರುವುದರಿಂದ ಅವನು ತನ್ನಲ್ಲೂ ಮತ್ತು ಇತರ ಆತ್ಮರುಗಳಲ್ಲೂ ಅಂತರ್ಯಾಮಿಯಾಗಿದ್ದು ಅವರೆಲ್ಲರೊಂದಿಗೂ ಐಕ್ಯತೆಯನ್ನು ಪಡೆದಿದ್ದಾನೆ ಎಂಬುದನ್ನು ಅನುಸಂಧಾನ ಮಾಡುವ ಕರ್ಮಯೋಗಿಯು ಶರೀರಾತ್ಮಭಾವದಿಂದ ಪರಮಾತ್ಮನೊಂದಿಗೆ ತನಗೂ ಇತರ ಆತ್ಮರುಗಳಿಗೂ ಇರುವ ಐಕ್ಯತೆಯ ಅನುಭವ ಪಡೆಯುತ್ತಾನೆ ಹಿಂದಿನ ಅವಸ್ಥೆಯಲ್ಲಿ ಸಮಸ್ತ ಆತ್ಮರುಗಳೂ ಪರಮಾತ್ಮನೊಂದಿಗೆ ಸಮಾನತೆ ಪಡೆದಿದ್ದಾರೆ ಎಂಬುದನ್ನು ಮಾತ್ರ ಅನುಸಂಧಾನ ಮಾಡಿ ಅದರ ಅನುಭವ ಪಡೆದನು ಆದರೆ ಈಗ ಮುಂದಿನ ಅವಸ್ಥೆಯಲ್ಲಿ ಸಮಸ್ತ ಆತ್ಮರುಗಳೂ ಪರಮಾತ್ಮನಿಗೆ ಶರೀರವಾಗಿರುವುದನ್ನು ಮತ್ತು ಪರಮಾತ್ಮನು ಸಮಸ್ತ ಆತ್ಮರಲ್ಲೂ ಅಂತರಾತ್ಮನಾಗಿ ನಿಂತಿರುವುದನ್ನೂ ಅರಿತು ಅನುಸಂಧಾನ ಮಾಡುವುದರ ಫಲವಾಗಿ ಸಮಸ್ತ ಆತ್ಮರುಗಳೂ ಪರಮಾತ್ಮನೊಂದಿಗೆ ಐಕ್ಯಭಾವಿಸಿರುವುದನ್ನು

ನೋಡುತ್ತಾನೆ ಆದ್ದರಿಂದ ಅವನು ತನ್ನಲ್ಲೂ ಮತ್ತು ಇತರ ಸಮಸ್ತ ಜೀವಿಗಳಲ್ಲೂ ಸರ್ವದಾ ಪರಮಾತ್ಮನನ್ನು ನೋಡುತ್ತಿರುವನು ಮತ್ತು ಅವನ ಮನಸ್ಸು ಸದಾ ಪರಮಾತ್ಮನ ಚಿಂತನದಲ್ಲೇ ಇರುವುದು ಇದು ಯೋಗಸಿದ್ಧಿಯ ಮೂರನೆಯ ಅವಸ್ಥೆ

(vi) ಆತ್ಮರುಗಳಲ್ಲಿರುವ ಸುಖ ದುಃಖ ಸಂಬಂಧರಹಿತವಾದ ಸಾಮ್ಯತೆಯ ಅನುಸಂಧಾನವು—ಪ್ರಕೃತಿ ವಿಯುಕ್ತ ದಶೆಯಲ್ಲಿ ಜೀವಾತ್ಮನಿಗೆ ಅವನ ಶರೀರಕ್ಕೆ ಸಂಬಂಧಪಟ್ಟ ಚೇತನಾಚೇತನ ವಸ್ತುಗಳೊಂದಿಗೆ ಯಾವ ಸಂಬಂಧವೂ ಇಲ್ಲ ಇದರಿಂದ ಅವನಿಗೆ ಪ್ರಾಕೃತಿಕ ಸುಖದುಃಖಗಳೊಂದಿಗೂ ಸಂಬಂಧವಿರುವುದಿಲ್ಲ ಆತ್ಮಸ್ವರೂಪಧ್ಯಾನ ಮಾಡುವ ಕರ್ಮಯೋಗಿಗೆ ಸುಖದುಃಖಗಳ ಗಂಧವೇ ಇಲ್ಲದ ನಿರ್ವಿಕಾರದಶೆಯು ಪ್ರಾಪ್ತವಾಗುತ್ತದೆ ಅವನು ಆತ್ಮನಾದ ತನಗೂ, ತನ್ನ ಶರೀರಕ್ಕೆ ಸಂಬಂಧಪಟ್ಟ ಪುತ್ರ, ಗೃಹ ಕ್ಷೇತ್ರಾದಿಗಳಿಗೂ ಯಾವ ಸಂಬಂಧವೂ ಇಲ್ಲವೆಂಬ ಅನುಭವ ಪಡೆದವನಾಗಿ, ತನ್ನ ಮತ್ತು ಇತರರ ಸುಖದುಃಖಗಳನ್ನು ಸಮವಾಗಿ ಕಾಣುತ್ತಾನೆ ಸಾಮಾನ್ಯವಾಗಿ ಲೋಕದ ಜನರಿಗೆ ತಮಗೆ ಪ್ರಾಪ್ತವಾಗುವ ಇಷ್ಟ, ಅನಿಷ್ಟಗಳಲ್ಲಿ ಅಗಾಧವಾದ ಸುಖದುಃಖಗಳುಂಟಾಗುತ್ತವೆ ಆದರೆ ಅದೇ ವಿಧವಾದ ಇಷ್ಟಾನಿಷ್ಟಗಳು ಇತರರಿಗೆ ಪ್ರಾಪ್ತವಾದಾಗ ಅವರಿಗೆ ಯಾವ ವಿಧವಾದ ಸುಖದುಃಖಾದಿ ಅನುಭವವೂ ಉಂಟಾಗುವುದಿಲ್ಲ. ಆದರೆ ಯೋಗಿಯಾದವನಿಗೆ ಎರಡರಲ್ಲೂ ಒಂದೇ ಸಮವಾದ ಅನುಭವವಿರುತ್ತದೆ ಅವನು ಅನ್ಯರ ಸುಖದುಃಖಗಳಿಗೆ ಸಮವಾಗಿ ತನ್ನ ಸುಖದುಃಖಗಳನ್ನು ಕಾಣುವನು ತನಗೆ ಪ್ರಾಪ್ತವಾಗುವ ಸುಖದುಃಖಗಳಲ್ಲಿ ವಿಕಾರರಹಿತನಾಗಿ ಇರುವನು ಇಂತಹ ಅವಸ್ಥೆಯನ್ನು ಪಡೆದವನು ಯೋಗದ ಪರಮೋತ್ಕೃಷ್ಟ ದಶೆಯನ್ನು ಹೊಂದಿದವನಾಗುತ್ತಾನೆ ಇದೇ ಯೋಗಸಿದ್ಧಿಯ ಉತ್ಕೃಷ್ಟವಾದ ಅವಸ್ಥೆ

## III ಆತ್ಮಚಿಂತನ ರೂಪಧ್ಯಾನಯೋಗಕ್ಕಾಗಿ ಮನಸ್ಸನ್ನು ಜಯಿಸಲು ಅವಶ್ಯಕವಾದ ಅಭ್ಯಾಸ ವೈರಾಗ್ಯಾದಿ ಸಾಧನೆಗಳು

(ಶ್ಲೋಕಗಳು 33 ರಿಂದ 36)

ಮನಸ್ಸನ್ನು ಜಯಿಸಿದರೆ ಮೇಲೆ ವಿವರಿಸಿರುವ ಸ್ವಸ್ವರೂಪ ದರ್ಶನರೂಪ ಯೋಗಸಿದ್ಧಿಯು ಪ್ರಾಪ್ತವಾಗುತ್ತದೆ. ಆದರೆ ಚಂಚಲವಾದ ಮನಸ್ಸನ್ನು ತಡೆದು ಧ್ಯೇಯವಸ್ತುವಿನಲ್ಲಿ ನಿಲ್ಲಿಸುವುದು ಬಹಳ ಕಷ್ಟವಲ್ಲವೆ ? ಅದನ್ನು ನಿಗ್ರಹಿಸುವುದಕ್ಕೆ ಉಪಾಯವುಂಟೆ ? ಎಂದು ಅರ್ಜುನ ಕೇಳುತ್ತಾನೆ ಅದಕ್ಕೆ ಉತ್ತರವಾಗಿ ಶ್ರೀ ಕೃಷ್ಣ ತಿಳಿಸುವುದೇನೆಂದರೆ—ಉಪಾಯವುಂಟು , ಮನಸ್ಸನ್ನು ಅಭ್ಯಾಸ ವೈರಾಗ್ಯಗಳಿಂದ ಜಯಿಸಲು ಪ್ರಯತ್ನಿಸಬೇಕು ಎಂದಿದ್ದಾನೆ. ಆತ್ಮನ ನಿತ್ಯತ್ವ, ಆನಂದತ್ವ ಅಮಲತ್ವ ಮುಂತಾದಗುಣಗಳನ್ನು, ಇತರ ವಸ್ತುಗಳ ಅಸ್ಥಿರತ್ವ ಮುಂತಾದ ದೋಷಗಳನ್ನೂ ಅನುಸಂಧಾನ ಮಾಡುವ ಅಭ್ಯಾಸವನ್ನು ಮೇಲೆ ಮೇಲೆ ಮಾಡುತ್ತಿದ್ದರೆ, ಆತ್ಮನಲ್ಲಿ ಪ್ರೀತಿ ಇತರವಸ್ತುಗಳಲ್ಲಿ ವೈರಾಗ್ಯವೂ ಉಂಟಾಗಿ ಚಂಚಲವಾದ ಮನಸ್ಸನ್ನು ಜಯಿಸಬಹುದು

## IV ಕರ್ಮಯೋಗದಿಂದ ಸಾಧಿಸಲ್ಪಡುವ ಆತ್ಮಚಿಂತನರೂಪ ಧ್ಯಾನಯೋಗದ ಮಹಾತ್ಮೆ

(ಶ್ಲೋಕಗಳು 37 ರಿಂದ 46)

(1) ಯೋಗಭ್ರಷ್ಟನಾದವನು ಉತ್ತಮಗತಿಯನ್ನು ಹೊಂದುತ್ತಾನೆ—ಯೋಗಾನುಷ್ಠಾನದಲ್ಲಿ ನಿರತನಾದ ಯೋಗಸಾಧಕನು ಮನಸ್ಸನ್ನು ಜಯಿಸಿ ಯೋಗಾಭ್ಯಾಸವನ್ನು ಧೃಢವಾಗಿ ಮುಂದುವರಿಸಲು ಶಕ್ತನಾಗದ ಯೋಗಭ್ಯಾಸದಿಂದ ವಿಚಲಿತನಾಗಿ ಯೋಗಭ್ರಷ್ಟನಾದರೆ ಅವನ ಗತಿಏನು ? ಯೋಗಸಾಧನೆಗಳಲ್ಲಿ ನಿರತನಾದ ಅವನಿಗೆ ಐಹಿಕ ಸುಖಭೋಗಗಳಲ್ಲಿ ಆಸಕ್ತಿಯಿರುವುದಿಲ್ಲ ಮತ್ತು ಯೋಗಸಾಧನೆಯನ್ನು ಮುಂದುವರಿಸಲು ಅಶಕ್ತನಾಗಿ ಯೋಗಭ್ರಷ್ಟನಾದ ಅವನಿಗೆ ಯೋಗಸಿದ್ಧಿಯೂ ಲಭಿಸುವುದಿಲ್ಲ. ಹೀಗಾಗಿ ಅವನು ಎರಡುವಿಧದಲ್ಲೂ ಭ್ರಷ್ಟನಾಗಿ ನಾಶವಾಗುವುದಿಲ್ಲವೇ ಎಂಬುದೇ ಅರ್ಜುನನ ಶಂಕೆ. ಇದಕ್ಕೆ ಉತ್ತರವಾಗಿ ಶ್ರೀಕೃಷ್ಣನು ತಿಳಿಸಿರುವುದೇನೆಂದರೆ—ಒಮ್ಮೆ ಯೋಗಾನುಷ್ಠಾನದಲ್ಲಿ ಪ್ರವರ್ತಿಸಿದವನು ಎಂದಿಗೂ ನಾಶಹೊಂದುವುದಿಲ್ಲ ಅವನು ಯೋಗಭ್ರಷ್ಟನಾದರೂ ತಾನು ಆಚರಿಸಿರುವ ಅಲ್ಪಯೋಗಾಭ್ಯಾಸದ ಫಲವಾಗಿ ಉತ್ತಮಗತಿಯನ್ನು ಹೊಂದಿಯೇ ಹೊಂದುವನು ಅವನುಮುಂದೆ ಶೀಲವಂತರೂ ಶ್ರೀಮಂತರೂ ಆದವರ ಗೃಹದಲ್ಲಿ ಜನ್ಮಹೊಂದಿ ಯೋಗಾಭ್ಯಾಸವನ್ನು ಮುಂದುವರೆಸಲು ಅನುಕೂಲವಾದ ವಾತಾವರಣವನ್ನು ಹೊಂದುವನು ಅಥವಾ ಅವನು ಜ್ಞಾನಿಗಳಾದ ಯೋಗಿಗಳ ಕುಲದಲ್ಲಿ ಜನ್ಮಹೊಂದಿ ಮತ್ತೆ ಯೋಗಸಿದ್ಧಿಗಾಗಿ ಪ್ರಯತ್ನಿಸಿ ಅದನ್ನು ಹೊಂದುವನು. ಇಷ್ಟು ಮಾತ್ರವಲ್ಲದೆ ಯೋಗಾಭ್ಯಾಸದ ಮಹಾತ್ಮೆಯನ್ನು ಅರಿತು, ಅದನ್ನ ಅನುಷ್ಠಿಸಬೇಕೆಂಬ ಇಚ್ಛೆಯನ್ನು ಹೊಂದಿದವನೂಕೂಡ, ಕಾಲಕ್ರಮದಲ್ಲಿ ಯೋಗಸಾಧನೆಯಲ್ಲಿ ನಿರತನಾಗಿ ಉತ್ತಮಗತಿಯನ್ನು ಹೊಂದುವನು ಹೀಗೆ ಒಮ್ಮೆ ಯೋಗಾಭ್ಯಾಸವನ್ನು ಪ್ರಾರಂಭಿಸಿದವನು ಜನ್ಮಜನ್ಮಾಂತರದಲ್ಲಿಯಾದರೂ ಯೋಗಸಿದ್ಧಿಯನ್ನು ಪಡೆದೇ ಪಡೆಯುವನು ಎಂದು ಶ್ರೀಕೃಷ್ಣ ಭರವಸೆ ನೀಡಿದ್ದಾನೆ

(11) ತಪಸ್ಸು, ಜ್ಞಾನ, ಕರ್ಮ, ಇವುಗಳೆಲ್ಲವನ್ನೂ ಫಲಾಭಿಸಂಧಿರಹಿತವಾಗಿ, ಆತ್ಮಸ್ವರೂಪ ಚಿಂತನದೊಂದಿಗೆ ಅನುಷ್ಠಿಸುವವನು ಕೇವಲ ಫಲಾಸಕ್ತಿಯಿಂದಕೂಡಿ ಅವುಗಳನ್ನು ಅನುಷ್ಠಿಸುವವನಿಗಿಂತ ಅತ್ಯಂತ ಮೇಲಾದವನು ಏತಕ್ಕೆಂದರೆ ಫಲಾಸಕ್ತಿರಹಿತವಾಗಿ ಅನುಷ್ಠಿಸುವ ಕರ್ಮಯೋಗಾನುಷ್ಠಾನ ದಿಂದ ಆತ್ಮಧ್ಯಾನವುಸಿದ್ಧಿಸಿ, ಆತ್ಮಾವಲೋಕನ ವುಂಟಾಗುವುದು· ಆತ್ಮಾವಲೋಕನ ದಿಂದ ಭಗವದ್ಭಕ್ತಿಯು ಪ್ರಾಪ್ತವಾಗಿ ಎಲ್ಲಕ್ಕಿಂತ ಅತ್ಯಂತಮೇಲಾದ ಪುರುಷಾರ್ಥವು ಲಭಿಸುವುದು.

### V ಆತ್ಮಚಿಂತನರೂಪ ಧ್ಯಾನಯೋಗಕ್ಕಿಂತ ಪರಮಾತ್ಮ ಚಿಂತನರೂಪ ಭಕ್ತಿಯೋಗದ ಶ್ರೇಷ್ಠತೆ (ಶ್ಲೋಕ 47)

ಆತ್ಮಚಿಂತನರೂಪ ಧ್ಯಾನಯೋಗದಿಂದ ಆತ್ಮಸಾಕ್ಷಾತ್ಕಾರವು ಲಭಿಸುತ್ತದೆ, ಪರಮಾತ್ಮ ಚಿಂತನರೂಪ ಭಕ್ತಿಯೋಗದಿಂದ ಪರಮಾತ್ಮಸಾಕ್ಷಾತ್ಕಾರವು ಲಭಿಸುತ್ತದೆ ಆತ್ಮನಿಗೂ ಪರಮಾತ್ಮನಿಗೂ ಇರುವ ಅಂತರವನ್ನು ಇಷ್ಟೆಂದು ಹೇಳಲಾಗುವುದಿಲ್ಲ, ಸಾಸಿವೆಕಾಳಿಗೂ ಮೇರುಪರ್ವತಕ್ಕೂ ಇರುವಷ್ಟು ಅಂತರವಿದೆ ಎನ್ನಬಹುದು ಇತರ ಯೋಗಿಗಳೆಲ್ಲರಿಗಿಂತ ಆತ್ಮಸ್ವರೂಪ ಚಿಂತನೆ ಮಾಡುವ ಕರ್ಮಯೋಗಿಯು ಅತ್ಯಂತ ಶ್ರೇಷ್ಠನು ಆದರೆ ಭಗವತ್ ಸ್ವರೂಪಚಿಂತನೆ ಮಾಡುವ ಭಕ್ತಿಯೋಗಿಯು ಅವನಿಗಿಂತ ಅತ್ಯಂತ ಶ್ರೇಷ್ಠನು. ಏತಕ್ಕೆಂದರೆ ಅವನು ಜಗತ್‌ಸೃಷ್ಟಿಸ್ಥಿತಿಲಯಾದಿ ಕಾರ್ಯಗಳನ್ನು ಮಾಡುವ, ಹೇಯಗುಣ ರಹಿತನಾದ ಕಲ್ಯಾಣಗುಣಭರಿತನಾದ, ವಿಭವ ಐಶ್ವರ್ಯಯುಕ್ತನಾದ ಸರ್ವಲೋಕ ಶರಣ್ಯನಾದ, ಪುರುಷೋತ್ತಮನಾದ ಪರಮಾತ್ಮನನ್ನು ಧ್ಯಾನಮಾಡಿ ಭಜಿಸುತ್ತಾನೆ ಆದ್ದರಿಂದ ಆತ್ಮಚಿಂತನರೂಪ ಧ್ಯಾನಯೋಗಕ್ಕಿಂತ ಪರಮಾತ್ಮ ಚಿಂತನರೂಪ ಭಕ್ತಿಯೋಗವೇ ಅತ್ಯಂತ ಶ್ರೇಷ್ಠವಾದುದು ಎಂದು ಶ್ರೀ ಕೃಷ್ಣ ಭಕ್ತಿಯೋಗದ ಪ್ರಸ್ತಾವನೆಯೊಂದಿಗೆ ಈ ಅಧ್ಯಾಯವನ್ನು ಮುಕ್ತಾಯಗೊಳಿಸಿದ್ದಾನೆ ಮತ್ತು ಮುಂದಿನ ಅಧ್ಯಾಯಗಳಲ್ಲಿ ಭಕ್ತಿಯೋಗವನ್ನು ಪ್ರತಿಪಾದಿಸಿದ್ದಾನೆ.

ಈ ಆರನೆಯ ಅಧ್ಯಾಯದಲ್ಲಿ ಕರ್ಮಯೋಗಿಯು ಅನುಷ್ಠಿಸುವ ಆತ್ಮಚಿಂತನ ರೂಪಧ್ಯಾನಯೋಗದ ವಿವರಣೆ ಇರುವುದರಿಂದ ಇದಕ್ಕೆ ಧ್ಯಾನಯೋಗವೆಂದು ಹೆಸರು ಬಂದಿದೆ

### ಗೀತೆಯ ಮೊದಲನೆಯ ಷಟ್ಕದ ಸಾರಾಂಶ

ಭಗವದ್ಗೀತೆಯ ಮೊದಲನೆಯ ಷಟ್ಕದಲ್ಲಿ (ಮೊದಲ ಆರು ಅಧ್ಯಾಯಗಳಲ್ಲಿ) ಭಕ್ತಿಯೋಗಕ್ಕೆ ಸಹಾಯಭೂತವಾದ ಜೀವಾತ್ಮ ಸಾಕ್ಷಾತ್ಕಾರವು ಹೇಳಲ್ಪಟ್ಟಿದೆ. ಇಲ್ಲಿ ಭಕ್ತಿಯೋಗಕ್ಕೆ ಅಂಗವಾದ ಜೀವಾತ್ಮಸಾಕ್ಷಾತ್ಕಾರವನ್ನು ಸಾಧಿಸಿ ಕೊಡುವ ಕರ್ಮಯೋಗ, ಜ್ಞಾನಯೋಗ, ಮತ್ತು ಧ್ಯಾನಯೋಗಗಳ ವಿವರಣೆಯಿದೆ

ಗೀತೆಯ 1ನೆಯ ಅಧ್ಯಾಯವು ಅರ್ಜುನನ ವಿಷಾದವನ್ನು ತಿಳಿಸಿ ಗೀತೆಯ ಉಪದೇಶವನ್ನು ಪಡೆಯಲು ಯೋಗ್ಯನಾದ ಅಧಿಕಾರಿಯಾರು ಎಂಬುದನ್ನು ತಿಳಿಸುತ್ತದೆ. ಜಗತ್ತಿನಸರ್ವ ಮಾನವರೂ ಭಗವದ್ಗೀತೆಯ ಉಪದೇಶಗಳನ್ನು ಪಡೆಯಲು ಅರ್ಹರಾದಾಗ್ಯೂ ಅದರ ಉಪದೇಶಗಳು ಸರ್ವರ ಬುದ್ಧಿಗೂ ಸಿಲುಕುವುದಿಲ್ಲ ಮತ್ತು ಸರ್ವರ ಹೃದಯಕ್ಕೂ ನಾಟುವುದಿಲ್ಲ. ಯಾವಾಗ ಮಾನವನು ಅರ್ಜುನನಂತೆ ಧರ್ಮಾಧರ್ಮಗಳ ತೊಡಕಿಗೆಸಿಕ್ಕಿ ದಾರಿಕಾಣದೆ ಸರಿ ತಪ್ಪುತ್ತಾನೋ, ಸುಖದುಃಖಗಳ ಹೋರಾಟದ ಜೀವನದಲ್ಲಿ ಜಿಗುಪ್ಸೆಗೊಂಡು ದಾರಿಕಾಣದೆ ಅಲೆಯುತ್ತಾನೋ ಆಗ ಅವನಿಗೆ ಗೀತೆಯ ಉಪದೇಶಗಳ ಅರಿವು ಉಂಟಾಗುತ್ತದೆ ಮತ್ತು ಗೀತಾಮೃತ ಪಾನಮಾಡುವ ಅರ್ಹತೆ ಉಂಟಾಗುತ್ತದೆ. **2ನೆಯ ಅಧ್ಯಾಯದಲ್ಲಿ** ಆತ್ಮನ ನಿತ್ಯತೆ ದೇಹದ ನಶ್ವರತೆ ಮತ್ತು ಆತ್ಮನಿಗೂ ದೇಹಕ್ಕೂ ಇರುವ ವಿಲಕ್ಷಣತೆಯನ್ನು ಮೊದಲು ತಿಳಿಸಿ. ಅನಂತರ ಕರ್ಮಯೋಗದ ಪ್ರಸ್ತಾವನೆಯನ್ನುಮಾಡಿ ಕೊನೆಯಲ್ಲಿ ಕರ್ಮಯೋಗನಿಷ್ಠನಿಗೆ ಲಭಿಸುವ ಸ್ಥಿತಪ್ರಜ್ಞನ ಲಕ್ಷಣಗಳ ವಿವರಣೆಯಿದೆ. **3ನೆಯ ಅಧ್ಯಾಯದಲ್ಲಿ** ಕರ್ಮಯೋಗದ ಅಭ್ಯಾಸಗಳು ವಿವರವಾಗಿ ಪ್ರತಿಪಾದಿಸಲ್ಪಟ್ಟಿವೆ **4ನೆಯ ಅಧ್ಯಾಯದಲ್ಲಿ** ಮೊದಲು ಕರ್ಮಯೋಗದ ಪರಮ ಪ್ರಾಚೀನತೆಯ ನಿರೂಪಣೆಯಿದೆ. ಆಗ ಪ್ರಾಸಂಗಿಕವಾಗಿ ಭಗವದವತಾರ ರಹಸ್ಯವು ಸ್ವಲ್ಪ ಮಟ್ಟಿಗೆ ತಿಳಿಸಲ್ಪಟ್ಟಿದೆ ಅನಂತರ ಕರ್ಮಯೋಗದಲ್ಲಿ ಅಂತರ್ಗತವಾಗಿರುವ ಜ್ಞಾನಾಂಶದ ಪ್ರಧಾನತೆಯ ವಿವರಣೆಯಿದೆ **5ನೆಯ ಅಧ್ಯಾಯದಲ್ಲಿ** ಕರ್ಮಯೋಗದ ಶ್ರೇಷ್ಠತೆಯೂ, ಕರ್ಮಯೋಗದಲ್ಲಿ ಅಂತರ್ಗತವಾಗಿರುವ ಅಕರ್ತೃತ್ವಾನುಸಂಧಾನದಿ ಜ್ಞಾನಭಾಗದ ಅನುಸಂಧಾನ ಪ್ರಕಾರಗಳೂ ಮತ್ತು ಅದರಿಂದ ಲಭಿಸುವ ಆತ್ಮದರ್ಶನವೂ ನಿರೂಪಿಸಲ್ಪಟ್ಟಿವೆ **6ನೆಯ ಅಧ್ಯಾಯದಲ್ಲಿ** ಕರ್ಮಯೋಗಿಯು ಅನುಷ್ಠಿಸುವ ಆತ್ಮಚಿಂತನ ರೂಪ ಧ್ಯಾನಯೋಗದ ವಿವರಣೆ ಇದೆ ಧ್ಯಾನಯೋಗಾಭ್ಯಾಸಕ್ರಮ, ಧ್ಯಾನಯೋಗದ ನಾಲ್ಕು ಅವಸ್ಥೆಗಳು, ಮನೋನಿಗ್ರಹಕ್ಕೆ ಆವಶ್ಯಕವಾದ ಅಭ್ಯಾಸ ವೈರಾಗ್ಯ ಸಾಧನೆಗಳು, ಧ್ಯಾನಯೋಗದ ಮಹಿಮೆ, [illegible] ವಿವರಿಸಲ್ಪಟ್ಟಿವೆ ಈ ಅಧ್ಯಾಯದ ಕೊನೆಯಲ್ಲಿ ಪರಮಾತ್ಮ ಸ್ವರೂಪಚಿಂತನ ರೂಪಧ್ಯಾನವು ಸರ್ವಶ್ರೇಷ್ಠವಾದುದು ಎಂದು ತಿಳಿಸಿ ಮುಗಿಸ

ಅಧ್ಯಾಯಗಳಲ್ಲಿ ವಿವರಿಸುವ ಭಕ್ತಿಯೋಗದ ಪ್ರಸ್ತಾವನೆಯು ಇಲ್ಲಿಯೇ ಮಾಡಲ್ಪಟ್ಟಿದೆ

ಸ್ವಜನರನ್ನೂ ಬಂಧುಬಾಂಧವರನ್ನು ನೋಡಿ ಮೋಹಪರವಶನಾಗಿ ಕರ್ತವ್ಯ ಬಾಹಿರನಾಗಿ ಕುಳಿತ ಅರ್ಜುನನಿಗೆ ಅವನ ಮೋಹ ನಾಶಮಾಡಿ ಅವನನ್ನು ಕರ್ತವ್ಯನಿಷ್ಠನಾಗಿಮಾಡಲು ಶ್ರೀ ಕೃಷ್ಣ ಗೀತೆಯ 18 ಅಧ್ಯಾಯ ಗಳಲ್ಲಿ ಅಧ್ಯಾತ್ಮಶಾಸ್ತ್ರವನ್ನು ವಿಸ್ತಾರವಾಗಿ ಉಪದೇಶ ಮಾಡಿದ್ದಾನೆ ಅದರಲ್ಲಿ ಮೊದಲ 6 ಅಧ್ಯಾಯಗಳಿಂದ ಆತ್ಮಸ್ವರೂಪ ಜ್ಞಾನವನ್ನು, ಕರ್ಮಯೋಗ, ಜ್ಞಾನಯೋಗ, ಧ್ಯಾನಯೋಗ ಸಾಧನೆಗಳನ್ನೂ ಮತ್ತು ಅವುಗಳಿಂದ ಸಾಧಿಸಲ್ಪಡುವ ಆತ್ಮಸಾಕ್ಷಾತ್ಕಾರ ಸಿದ್ಧಿಯನ್ನೂ ತಿಳಿಸಿದ್ದಾನೆ ಮತ್ತು ಆತ್ಮಸಾಕ್ಷಾತ್ಕಾರ ದಿಂದ ಸಾಧಿಸಲ್ಪಡುವ ಭಕ್ತಿಯೋಗವನ್ನು ಮುಂದಿನ ಷಟ್ಕಗಳಲ್ಲಿ ವಿವರಿಸುತ್ತಾನೆ

**ಗೀತೆಯ ಪ್ರಥಮ ಷಟ್ಕದಲ್ಲಿ ಪ್ರತಿಪಾದಿಸಿರುವ ಕರ್ಮಯೋಗ, ಜ್ಞಾನಯೋಗ, ಧ್ಯಾನಯೋಗಗಳೊಂದಿಗೆ ಭಕ್ತಿಯೋಗ ಪ್ರಪತ್ತಿಯೋಗಗಳೂ ಮಿಳಿತವಾಗಿವೆ.**

ಭಗವದ್ಗೀತೆಯ ಪ್ರಥಮ ಷಟ್ಕದಲ್ಲಿ ವಿವರಿಸಿರುವ ಕರ್ಮ, ಜ್ಞಾನ, ಧ್ಯಾನಯೋಗ ಸಾಧನೆಗಳೆಲ್ಲವೂ ಭಕ್ತಿರೂಪಾಪನ್ನವಾಗಿ ಅನುಷ್ಠಿಸಲ್ಪಡಬೇಕು ಎಂದು ಶ್ರೀ ಕೃಷ್ಣ ಉಪದೇಶ ಮಾಡಿದ್ದಾನೆ. ಪ್ರಥಮ ಷಟ್ಕದ ಪ್ರತಿ ಅಧ್ಯಾಯದಲ್ಲೂ ಪ್ರಪತ್ತಿಗಳನ್ನು ಪ್ರತಿಪಾದಿಸುವ ಶ್ಲೋಕಗಳಿವೆ

**3ನೇ ಅಧ್ಯಾಯದ** 6ನೇ ಶ್ಲೋಕದಲ್ಲಿ "ಶಾಧಿ ಮಾಂತ್ವಾಂಪ್ರಪನ್ನಂ"—ಎಂದು ಶರಣಾಗತನಾದ ತನಗೆ ದಾರಿ ತೋರು ಎಂದು ಅರ್ಜುನ ಶ್ರೀ ಕೃಷ್ಣನಲ್ಲಿ ಭಗವದ್ಗೀತೆಯ ಪ್ರಾರಂಭದಲ್ಲೇ ಶರಣಾಗತಿಮಾಡಿದ್ದಾನೆ ಮುಂದೆ 61 ನೇ ಶ್ಲೋಕದಲ್ಲಿ, "ತಾನಿಸರ್ವಾಣಿಸಂಯಮ್ಯಯುಕ್ತ ಆಸೀತಮತ್ಪರ" ಅಂದರೆ ಇಂದ್ರಿಯಗಳನ್ನು ವಿಷಯದಲ್ಲಿ ಪ್ರವರ್ತಿಸದಂತೆ ತಡೆದು, ಮನಸ್ಸನ್ನು ನನ್ನಲ್ಲಿ (ಪರಮಾತ್ಮನಲ್ಲಿ) ಇರಿಸುವವನಾಗು–ಎಂದು ಶ್ರೀ ಕೃಷ್ಣ ಅರ್ಜುನನಿಗೆ ಮನೋನಿಗ್ರಹಕ್ಕಾಗಿ ಪರಮಾತ್ಮ ಚಿಂತನೆ ಮಾಡುವಂತೆ ತಿಳಿಸಿದ್ದಾನೆ

**3ನೆಯ ಅಧ್ಯಾಯದ** 30ನೆಯ ಶ್ಲೋಕದಲ್ಲಿ "**ಮಯಿ ಸರ್ವಾಣಿ ಕರ್ಮಾಣಿ ಸನ್ಯಸ್ಯ**"–ಅಂದರೆ ಪ್ರತಿಯೊಂದು ಕರ್ಮವನ್ನೂ ನನಗೆ (ಪರಮಾತ್ಮನಿಗೆ) ಸಮರ್ಪಿಸು ಎಂದು ಸಮಸ್ತ ಕರ್ತವ್ಯಗಳನ್ನೂ ಪರಮಾತ್ಮನ ಆರಾಧನೆ ಎಂಬ ಜ್ಞಾನದೊಂದಿಗೆ ಮಾಡು ಎಂದು ಹೇಳಿದ್ದಾನೆ

**4ನೆಯ ಅಧ್ಯಾಯದ** 24ನೆಯ ಶ್ಲೋಕದಲ್ಲಿ— "**ಬ್ರಹ್ಮಾರ್ಪಣಂ ಬ್ರಹ್ಮಹವಿ**" ಅಂದರೆ ಕರ್ಮದ ಕರ್ತೃವಾದ ತಾನು, ಕರ್ಮಕ್ಕೆ ಬೇಕಾದ ಸಲಕರಣೆಗಳು, ಮಾಡುತ್ತಿರುವ ಕರ್ಮ ಮತ್ತು ಕರ್ಮಕ್ಕೆ ಲಭಿಸುವ ಫಲ ಎಲ್ಲವೂ ಬ್ರಹ್ಮಾತ್ಮಕವೆಂಬ [illegible]ದಿಂದ ಸಮಸ್ತ ಕರ್ಮವೂ ಬ್ರಹ್ಮಾತ್ಮಕ[illegible] ಬ್ರಹ್ಮ[illegible]ವಾದುದು ಎಂಬ ಅನುಸಂಧಾನದೊಂದಿಗೆ ಭಗವದಾರಾಧನ ರೂಪವಾಗಿ ಭಗವದರ್ಪಣವಾಗಿ ಸಮಸ್ತ ಕರ್ತವ್ಯ ಕರ್ಮಗಳನ್ನೂ ಮಾಡಬೇಕೆಂದು ಹೇಳಿದ್ದಾನೆ

**5ನೆಯ ಅಧ್ಯಾಯದ** 29ನೆಯ ಶ್ಲೋಕದಲ್ಲಿ ನನ್ನನ್ನು (ಭಗವಂತನನ್ನು) ಸರ್ವಲೋಕ ಮಹೇಶ್ವರನೆಂದೂ, ಸರ್ವ ಭೂತ ರಹಿತನೆಂದೂ, ಸರ್ವಕರ್ಮಭೋಕ್ತೃ ಎಂದೂ ತಿಳಿದು ಕರ್ಮಯೋಗವನ್ನು ಅನುಷ್ಠಿಸು, ಆಗ ಪರಮಹಿತನಾದ ಸುಹೃತ್ ಸ್ವರೂಪನಾದ ಪರಮಾತ್ಮನಾದ ನನಗೆ ಅರ್ಪಣವಾಗಿ ಕರ್ಮಮಾಡುವುದರಿಂದ ಕರ್ಮ ಮಾಡುವುದೇ ಅತ್ಯಂತ ಸುಖಕರವೂ ಸಂತೋಷದಾಯಕವೂ ಆಗುತ್ತದ—ಎಂದು ತಿಳಿಸಿದ್ದಾನೆ

**6ನೆಯ ಅಧ್ಯಾಯದ** 24ನೇ ಶ್ಲೋಕದಲ್ಲಿ "ಮನಃ ಸಂಯಮ್ಯ **ಮಚ್ಚಿತ್ತಃ ಯುಕ್ತ ಆಸೀತ ಮತ್ಪರಃ** –ಅಂದರೆ ಕರ್ಮಯೋಗಿಯು ಮೊದಲು ಮನಸ್ಸನ್ನು ಪ್ರಾಪಂಚಿಕ ವಿಷಯ ಚಿಂತನೆಗಳಿಂದ ಸೆಳೆದು ಪರಮಾತ್ಮನ ಚಿಂತನೆಯಲ್ಲಿ ನೆಲೆಗೊಳಿಸಿ, ಅನಂತರ ಆತ್ಮಚಿಂತನರೂಪಧ್ಯಾನ ಯೋಗವನ್ನು ಆರಂಭಿಸಬೇಕು ಎಂದು ತಿಳಿಸಿದ್ದಾನೆ ಈ ಅಧ್ಯಾಯದ ಕೊನೆಯ ಶ್ಲೋಕದಲ್ಲಿ "ಮನಸ್ಸನ್ನು ನನ್ನಲ್ಲಿ (ಪರಮಾತ್ಮನಲ್ಲಿ) ನಿಲ್ಲಿಸಿ, ನನ್ನ (ಪರಮಾತ್ಮನ) ಧ್ಯಾನ ಮಾಡುವವನು ಎಲ್ಲ ಯೋಗಿಗಳಿಗಿಂತ ಅತ್ಯಂತ ಶ್ರೇಷ್ಠನಾದವನು ಎಂದು ಭಗವಂತನ ಧ್ಯಾನ ಉಪಾಸನಾದಿಗಳೇ ಅತ್ಯಂತ ಶ್ರೇಷ್ಠವಾದ ಸಾಧನೆಗಳು ಎಂದು ಭಕ್ತಿಯೋಗದ ಪ್ರಸ್ತಾವನೆಯನ್ನು ಮಾಡಿದ್ದಾನೆ.

ಹೀಗೆ ಕರ್ಮವು ಭಗವದಾರಾಧನ ರೂಪವನ್ನೂ ಧ್ಯಾನವು ಭಗವತ್ ಸ್ವರೂಪವನ್ನೂ ಹೊಂದಬೇಕು ಎಂಬುದೇ ಗೀತೆಯ ಪ್ರಥಮ ಷಟ್ಕದ ಮುಖ್ಯ ಸಂದೇಶ

—ಶ್ರೀ ಕೃಷ್ಣಾರ್ಪಣ ಮಸ್ತು—